ORIENTAL RESEARCH INSTITUTE PUBLICATIONS

KANNADA SERIES No. 35

GENERAL EDITOR:

SRI H. DEVEERAPPA, M.A.,

*Director*

# RĀMANĀTHA CHARITA

OF

NAÑJUṆḌA

EDITED BY:

SRI H. DEVEERAPPA, M.A.






UNIVERSITY OF MYSORE

1959

Price: Rs. 3

## ಪರಿವಿಡಿ

# ಅರಿಕೆ

ಕುಮಾರ ರಾಮನ ಸಾಂಗತ್ಯ ಎಂಬ ಈ ರಾಮನಾಥಚರಿತವು ಕನ್ನಡ ಜನತೆಗೆ ತುಂಬ ಪರಿಚಯವುಳ್ಳ ಚೆಲುವು ಕತೆ. ಇಂದಿಗೆ ಸುಮಾರು ಆರುನೂರು ವರ್ಷಗಳ ಹಿಂದೆ ಸುಪ್ರಸಿದ್ಧವಾಗಿದ್ದ, ಕನ್ನಡದ ದುರ್ಗಮ ಗಿರಿದುರ್ಗಗಳೆಂದು ಹೆಸರು ಪಡೆದಿದ್ದ ಕುಮ್ಮಟದುರ್ಗ ಹೊಸಮಲೆ ದುರ್ಗಗಳನ್ನು ಒಳಕೊಂಡ ಕುಂತಳ ದೇಶಕ್ಕೆ ಒಡೆಯನಾಗಿದ್ದ ಕಂಪಿಲದೇವನ ಕುಲಪುತ್ರನಾದ ಕುಮಾರ ರಾಮನು ಈ ಕತೆಯ ನಾಯಕ. ತನ್ನ ರೂಪಿಗೆ ಸೋತು ಮಲತಾಯಿಯು ಮೋಹಿಸಿ ಬರಲು ತಾನು ಒಲ್ಲದಿರಲು ಆ ತಾಯಿ ಮಲೆತು ದೊರೆಯಲ್ಲಿ ಚಾಡಿ ಹೇಳಲು ಘೋರ ಶಿಕ್ಷೆಯನ್ನು ಅನುಭವಿಸಿದ 'ಶುಚಿ' ಈತ; ದುರ್ಗಕ್ಕೆ ದಾಳಿ ಯಿಟ್ಟ ದಿಳ್ಳಿಯ ದಂಡನ್ನು ಮೂರು ಸಲ ಹಣಿದು ಓಡಿಸಿದ ಕನ್ನಡದ ಕಡುಗಲಿ. ಈ ವೀರನು ಇಂದೂ ಕನ್ನಡ ಜನತೆಯ ಪ್ರೀತಿ ಗೌರವ ಪೂಜೆಗಳಿಗೆ ಪಾತ್ರನಾಗಿದ್ದಾನೆ.

ಪ್ರಸ್ತುತ ಪದಕೃತಿಯನ್ನು ರಚಿಸಿರುವ ನಂಜುಂಡನು ಕ್ಷತ್ರಿಯವಂಶೋ ತ್ಪನ್ನನು. 'ಚಂಗಳನಾಡ ನಾಲ್ವತ್ತು ನಾಯಕ ಗಜಸಿಂಗವೆನಿಪ' 'ಯದು ಕುಲಾಮಾತ್ಯರೆಂದೆಂಬ ಕುಲಾಗತ ವಿದಿತ ಬಿರುದನಾಂತೆಸೆವ ಚದುರ ಮಾಧವನ ಆತ್ಮಜ.' ಇವನ ಕಿರಿಯಯ್ಯ ತನ್ನ ಸ್ವಾಮಿಗಾಗಿ ವೀರಾವೇಶದಿಂದ ಕಾದಿ ವೀರ ಸ್ವರ್ಗ ಪಡೆದ ವಿಜಯರಾಜ. ರಸಜ್ಞರಾದ ಚದುರರು 'ಪದವಾಕ್ಯಪ್ರಮಾಣಜ್ಞ' ಎಂದು ಪ್ರೀತಿಯಿಂದ ಕೊಂಡಾಡಿ ಈ 'ಪದಕವಿತೆ'ಯನ್ನು ಅಂದರೆ 'ರಾಮ ನಾಥ ಚರಿತ'ವನ್ನು ರಚಿಸೆಂದು ಹೇಳಲು ಕವಿಯು ಮುದದಿಂದ ಈ ಕೃತಿಯನ್ನು ರಚಿಸಿದ್ದಾನೆ. 'ನೇಮಿಜಿನೇಶ ಸಂಗತಿ'ಯೇ ಮೊದಲಾದ ಕಾವ್ಯಗಳನ್ನು ಬರೆದಿ ರುವ ಮಂಗರಸನು 'ಸಮ್ಯಕ್ತ್ವಕೌಮುದಿ'ಯನ್ನು ಶಾಲಿವಾಹನ ಶಕ ಸಾವಿರದ ನಾನೂರ ಮೂವತ್ತೊಂದನೆಯ ವರ್ಷದ ಆಶ್ವಯುಜ ಶುಕ್ಲ ಪಾಡ್ಯ ಮಂದವಾರ ದಂದು ಬರೆದು ಮುಗಿಸಿದ್ದಾನೆ (ಕ್ರಿ. ಶ. ೧೫೦೮ ನೆಯ ಸೆಪ್ಟೆಂಬರ್ ೧೫ ನೆಯ ದಿನ). ಈತನಿಗೆ ನಂಜುಂಡಕವಿಯು ಚಿಕ್ಕಪ್ಪನಾಗಬೇಕು. ಆದುದರಿಂದ ಇವರಿ ಬ್ಬರೂ ಹದಿನೈದನೆಯ ಶತಮಾನದಲ್ಲಿ ಬಾಳಿದವರೆಂದು ತಿಳಿಯಲು ಏನೂ ಅಡ್ಡಿ ಯಿಲ್ಲ. ಆದರೆ, ಮಂಗರಸನು ಪರಮಜಿನಭಕ್ತನಾದರೆ ನಂಜುಂಡಕವಿ ಪರಮ ಶಿವಭಕ್ತ. ರಾಜಕೀಯ ಕಾರಣಗಳಿಂದಲೊ ಇನ್ನಾವ ಕಾರಣಗಳಿಂದಲೊ ಇವರ ಲ್ಲೊಬ್ಬರು ಮತಾಂತರ ಹೊಂದಿರಬಹುದೆಂದು ಸದ್ಯಕ್ಕೆ ಊಹಿಸಬಹುದು.

ಸುಮಾರು ಆರುಸಾವಿರ 'ಪದ'ಗಳನ್ನೊಳಗೊಂಡಿರುವ ಈ ಕಾವ್ಯವನ್ನು ಕವಿ, 'ಪದಕವಿತೆ' ಎಂದೂ 'ಪದಕೃತಿ' ಎಂದೂ ಕರೆದಿರುವನು. ಇದರ ಸವಿಸ್ತಾರವಾದ ವಿಮರ್ಶೆಯನ್ನು ಪ್ರತ್ಯೇಕವಾಗಿ ಪ್ರಥಮ ಸಂಪುಟದಲ್ಲಿ

ಕೊಡಬೇಕೆಂದು ಉದ್ದೇಶಿಸಲಾಗಿದೆ. ಪ್ರಕೃತ ಭಾಗ (ಪೂರ್ವಾರ್ಧ)ಕ್ಕೆ ದ್ವಿತೀಯ ಸಂಪುಟ ಎಂದು ಕರೆಯಲಾಗಿದೆ. ತೃತೀಯ ಸಂಪುಟ, ಎಂದರೆ ಉತ್ತರಾರ್ಧವು ಅಚ್ಚಾಗುತ್ತಿದೆ.

ಈ ಹೊತ್ತಗೆಯನ್ನು ಏಳು ಹಸ್ತಪ್ರತಿಗಳ ಆಧಾರದಿಂದ ಸಂಪ್ರತಿಸಲಾಗಿದೆ. ಎಲ್ಲವೂ ಓಲೆಯ ಪ್ರತಿಗಳೆ. ಮಾತೃಕೆಗಳಿಗೆ 'ಅ' 'ಇ' 'ಉ' 'ಎ' 'ಐ' 'ಕ' 'ಗ' ಎಂದು ಗುರುತುಕೊಟ್ಟಿದೆ. ಇವುಗಳಲ್ಲಿ,

'ಅ'—ನಮ್ಮ ಸಂಸ್ಥೆಯ ಗ್ರಂಥ ಭಂಡಾರದಲ್ಲಿರುವ ನಾನೂರೈವತ್ತಾರನೆ ಸಂಕೇತಾಂಕದ ಓಲೆಯ ಪ್ರತಿ. ಇದರಲ್ಲಿ ಮೊದಲ ಇಪ್ಪತ್ತೆರಡು ಸಂಧಿಗಳು ಮಾತ್ರ ಇವೆ. ಶಕಟರೇಫವನ್ನು ಸರಿಯಾದೆಡೆಯಲ್ಲಿ ಬಳಸಿದ್ದಾರೆ. ಪ್ರತಿ ಆಶ್ವಾಸದ ಕೊನೆಯಲ್ಲಿಯೂ "ಇದು ಯದುಕುಲಾಮಾತ್ಯ ವಂಶದೊಳಗುದಯಿಸಿದ" ಎಂದು ಮೊದಲಾಗುವ ವಾರ್ಧಕವಿದೆ. ಆದರೆ, ಬೇರೆ ಕೆಲವು ಪ್ರತಿಗಳಲ್ಲಿ ಪ್ರತಿ ಸಂಧಿಯ ಅಂತ್ಯದಲ್ಲಿಯೂ ಬರುವ "ಇದು ಪರದಾರ ಸೋದರ ರಾಮನಾಥನ" ಎಂಬ ಸಾಂಗತ್ಯ ಈ ಪ್ರತಿಯಲ್ಲಿಲ್ಲ. ಕೆಲವು ಗರಿಗಳು ಲುಪ್ತವಾಗಿವೆ, ಕೆಲವು ಮುರಿದು ಹೋಗಿವೆ, ಕೆಲವು ಗರಿಗಳನ್ನು ಹುಳು ಕೊರೆದು ಗ್ರಂಥಲೋಪವಾಗಿದೆ. ದೊರೆತಿರುವ ಭಾಗ ಬಹುಮಟ್ಟಿಗೆ ಶುದ್ಧವೂ ಸ್ಪಷ್ಟವೂ ಆಗಿರುತ್ತದೆ.

'ಇ'—ಶ್ರೀ ಡಿ. ಎಲ್. ನರಸಿಂಹಾಚಾರ್ಯರು ದಯವಿಟ್ಟು ಕೊಟ್ಟಿರುವ ಕಟ್ಟು. ಸಮಗ್ರವಾಗಿದೆ. ಮುದ್ದಾದ ಬರವಣಿಗೆ. ಆದರೆ ಶಕಟರೇಫಪ್ರಯೋಗ ಇಲ್ಲ. ಆಶ್ವಾಸಾಂತ್ಯದ 'ವಾರ್ಧಕ' ಇದರಲ್ಲಿಲ್ಲ; ಪ್ರತಿ ಸಂಧಿಯ ಅಂತ್ಯದಲ್ಲಿಯೂ "ಇದು ಪರದಾರ ಸೋದರ ರಾಮನಾಥನ" ಎಂಬ ಸಾಂಗತ್ಯ ತಪ್ಪದೆ ದೊರೆಯುತ್ತದೆ. ಇದರ ಪಾಠವೂ ಬಹುಮಟ್ಟಿಗೆ ಶುದ್ಧವಾಗಿದೆ. ಉಪಲಬ್ಧವಿರುವ ಸಮಗ್ರ ಪ್ರತಿಗಳಲ್ಲಿ ಇದೇ ಅತ್ಯುತ್ತಮವಾದುದು. ಗ್ರಂಥದ ಕೊನೆಯಲ್ಲಿ, "ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷಂಗಳು ೧೭೭೯ ಸಂದ ವರ್ತಮಾನವಾದ ಪ್ಶಂಗಳನಾಮ ಸಂವತ್ಸರದ ಪುಷ್ಯ ಶುದ್ಧ ಸಪ್ತಮಿಯು ರವಿವಾರ (ಸೋಮವಾರ ಆಗುತ್ತದೆ) ಶುಭನಕ್ಷತ್ರ ಶುಭಯೋಗ ಶುಭಕರಣದಲ್ಲಿ ಅಭಿಜನ್ಮುಹೂರ್ತದಲ್ಲಿ (೨೫-೧೨-೧೮೫೭ ಕ್ರಿ.ಶ.) ಕುಮಾರರಾಮನ ಸಾಂಗತ್ಯ ಶಿವಕಟಾಕ್ಷ ನಿರ್ವಿಘ್ನದಾಯಕ ನಂದೀಶ್ವರ ಪ್ರಮಥರ ಕಟಾಕ್ಷದಿಂದ ಪೂರ್ಣಮಾಯ್ತು. ಆಂಗೀರಸ ಬಾರ್ಹಸ್ಪತ್ಯಮಾನ (ಭಾರದ್ವಾಜ) (ತ್ರಿಯಾರ್ಷೇಯ) (ಪ್ರವರಾನ್ವಿತ) ಭಾರದ್ವಾಜ ಗೋತ್ರ ಆಶ್ವಲಾಯನ ಸೂತ್ರ ಋಕ್‌ಶಾಖಾಧ್ಯಾಯಿಗಳಾದ ಕಳಲೇ ರಾಜಯ್ಯ ಅರಸಿನವರ ಪ್ರಪೌತ್ರರಾದ ಲಕ್ಷ್ಮೀಕಾಂತಯ್ಯ ಅರಸಿನವರ ಪುತ್ರರಾದ ಕಾಂತಯ್ಯ ಅರಸಿನವರ ಸ್ವಹಸ್ತಾಕ್ಷರ"—ಎಂದಿದೆ.

'ಉ'—ನಮ್ಮ ಸಂಸ್ಥೆಯ ಭಂಡಾರದಲ್ಲಿರುವ ಹನ್ನೆರಡನೆಯ ಸಂಕೇತಾಂಕದ ಓಲೆಯ ಪ್ರತಿ. ಅಸಮಗ್ರ. ಇದರ ಮೊದಲನೆಯ ಗರಿ ಕಳೆದು

ಹೋಗಿದೆ. ಮೊದಲ ಮೂವತ್ತೇಳು ಸಂಧಿಗಳು ಪೂರ್ತಿಯಾಗಿದ್ದು ಮೂವ ತ್ತೆಂಟನೆಯ ಸಂಧಿಯ ಎಪ್ಪತ್ತೊಂದು ಪದಗಳು ಮಾತ್ರ ಇವೆ. ಮುಂದಿನ ಸಂಧಿಗಳು ಉಪಲಬ್ಧವಿಲ್ಲ. ಇರುವಷ್ಟು ಭಾಗದಲ್ಲಿ ಎಲ್ಲಿಯೂ ಗ್ರಂಥಪಾತವಿಲ್ಲ. ಶಕಟರೇಫವನ್ನು ಬಳಸಿಲ್ಲ. ಪ್ರತಿ ಆಶ್ವಾಸದ ಕೊನೆಯಲ್ಲಿ ಒಂದು ವಾರ್ಧಕವೂ ಪ್ರತಿ ಸಂಧಿಯ ಅಂತ್ಯದಲ್ಲಿ ಮೇಲೆ ಹೇಳಿದ ಸಾಂಗತ್ಯವೂ ಇವೆ. ಆದರೆ ಒಂಬತ್ತನೆಯ ಆಶ್ವಾಸ ಮತ್ತು ಮೂವತ್ತಾರನೆಯ ಸಂಧಿಗಳು ಮಾತ್ರ ಈ ನಿಯಮಕ್ಕೆ ಹೊರತು. ಅಕ್ಷರಗಳು ಲಕ್ಷಣವಾಗಿವೆ. ಪಾಠವೂ ಶುದ್ಧ.

'ಎ'—ಇದೂ ನಮ್ಮ ಸಂಸ್ಥೆಯ ಐನೂರು ತೊಂಬತ್ತೊಂದನೆಯ ಓಲೆಯ ಪ್ರತಿ. ಸಮಗ್ರ; ಅಂದವಾದ ಬರವಣಿಗೆ; ಗ್ರಂಥಲೋಪವಿಲ್ಲ; ಶಕಟರೇಫ ಇಲ್ಲ. ಸಂಧ್ಯಂತ್ಯದ ಸಾಂಗತ್ಯವೂ ಇಲ್ಲ; ಆಶ್ವಾಸಾಂತ್ಯದ ವಾರ್ಧಕವೂ ಇಲ್ಲ. ಆಶ್ವಾಸವಿಭಾಗವೂ ಇಲ್ಲ. ಒಂದೊಂದು ಕಡೆ ಹೇಳಿದ್ದರೆ ಅದು ಸರಿಯಾಗಿಲ್ಲ.

'ಐ'—ನಮ್ಮ ಸಂಸ್ಥೆಯಲ್ಲಿರುವ ನೂರಿಪ್ಪತ್ತೆಂಟನೆಯ ಓಲೆಯ ಪ್ರತಿ. ಅಸಮಗ್ರ ಪ್ರತಿಯಾದರೂ ಇದ್ದಷ್ಟು ಭಾಗದಲ್ಲಿ ಅತಿಶುದ್ಧ ಪಾಠ ದೊರೆಯುತ್ತದೆ. ಒಂದನೆಯ ಸಂಧಿಯ ಇಪ್ಪತ್ತೆರಡು ಪದ್ಯಗಳಿಲ್ಲ. ನಡುವೆಯೂ ಕೆಲವು ಪತ್ರಗಳು ಇಲ್ಲ. ಗರಿಗಳು, ಅರುಗು ಮೂಲೆ ಮುರಿದು ಗ್ರಂಥಪಾತವಾಗಿದ್ದರೂ ದೊರೆ ಯುವಷ್ಟು ಭಾಗದಲ್ಲಿ ಅತ್ಯಂತಶುದ್ಧ ಪಾಠವಿದೆ. ಶಕಟರೇಫವನ್ನು ಬಳಸಿದೆ. ಈತನಕ ಸಿಕ್ಕಿರುವ ರಾಮನಾಥ ಚರಿತದ ಕಟ್ಟುಗಳಲ್ಲೆಲ್ಲ ಇದೇ ತೀರ ಹಳೆಯದು ಎಂದು ಹೇಳಬಹುದು. ಆಶ್ವಾಸಾಂತ್ಯದ ವಾರ್ಧಕ ಇದೆ; ಆರನೆಯ ಆಶ್ವಾಸದ ಅಂತ್ಯದಲ್ಲಿ ಮಾತ್ರ 'ಇದು ಪರದಾರ' ಎಂದು ಮೊದಲಾಗುವ ಸಾಂಗತ್ಯ ಉಂಟು. ಅತ್ಯಂತ ಉಪಯುಕ್ತ ಪ್ರತಿ.

'ಕ'— ವಿಜಾಪುರ ಪ್ರಾಂತದ ಶಿವಯೋಗ ಮಂದಿರದವರು ಕೃಪೆಯಿಟ್ಟು ಕಳಿಸಿರುವ ಓಲೆಯ ಪ್ರತಿ. ಅಸಮಗ್ರ. ಪಾಠ ಅಶುದ್ಧ. ಸಂಧಿಲೋಪ ಗ್ರಂಥ ಲೋಪ ಎರಡೂ ಉಂಟು. ಎರಡು ಸಂಧಿಗಳು ಸೇರಿ ಒಂದು ಸಂಧಿಯಾಗಿರು ವುದೂ ಉಂಟು. ಶಕಟರೇಫದ ಮಾತೇಕೆ?

'ಗ'—ಶ್ರೀಹಟ್ಟಿ ರಾಮಶರ್ಮರು ದಯೆಯಿಟ್ಟು ಕಳಿಸಿದ ಓಲೆಯ ಪ್ರತಿ. ಸಮಗ್ರವೂ ಸುಂದರವೂ ಆಗಿದೆ. ಬರವಣಿಗೆಯೂ ಅಂದವಾಗಿದೆ. ಇನ್ನುಳಿದ ವಿಷಯಗಳಲ್ಲಿ 'ಎ' ಪ್ರತಿಯನ್ನೇ ಹೋಲುತ್ತದೆ. ಪ್ರತಿಯ ಕೊನೆಯಲ್ಲಿ, "ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ಸಾವಿರದಾರು ನೂರ ಎಂಬ ತ್ತೊಂದನೆಯ ಪ್ರಮಾಥಿನಾಮ ಸಂವತ್ಸರದ ಮಾಘ ಬಹುಳ ತದಿಗೆ ರವಿವಾರ ಸೂರ್ಯನು ಪೂರ್ವಪ್ರತಿಷ್ಠೆಯಾದ ಘಳಿಗೆ ಇಪ್ಪತ್ತೈದರಲ್ಲು (೩-೨-೧೭೬೦ ಕ್ರಿ.ಶ.) ಮಲೆಯೂರ ದ್ಯಾವಯ್ಯನವರ ಮಗನು ಬೊಮ್ಮರಸಯ್ಯನು ಏಚಿಗ ಹಳ್ಳಿಯ ದ್ಯಾವರ ಸಯ್ಯನವರ ಮಗನು ಬೊಮ್ಮರಸಯ್ಯಗೆ ಪ್ರತಿಸಮಾನವಾಗಿ ಬರೆದು ಕೊಟ್ಟಂಥ ರಾಮನ ಸಾಂಗತ್ಯದ ಪುಸ್ತಕಕ್ಕೆ ಮಂಗಳ ಮಹಾ ಶ್ರೀ ಶ್ರೀ"—ಎಂದಿದೆ.

'ಚ'—ವಾರಾಣಸಿಯ ಜಂಗಮವಾಡಿ ಮಠದ ಶ್ರೀಗಳವರು ಅಭಿಮಾನವಿಟ್ಟು ಕಳಿಸಿದ ಪ್ರತಿ. ನಡುವಿನ ಕೆಲವು ಗರಿಗಳು ಇಲ್ಲ. ಪಾಠ ತಕ್ಕಮಟ್ಟಿಗೆ ಶುದ್ಧವಾಗಿದೆ. ಶಕಟರೇಫೆಯ ಬಳಕೆ ಉಂಟು. ಸಂಧ್ಯಂತ್ಯದಲ್ಲಿಯ ಸಾಂಗತ್ಯವೂ ಆಶ್ವಾಸಾಂತ್ಯದಲ್ಲಿ ಬರುವ ವಾರ್ಧಕವೂ ಉಂಟು. ಮಾತೃಕೆಯ ಅಂತ್ಯದಲ್ಲಿ, "ಜಯಸಂವತ್ಸರದ ಜೇಷ್ಠ ಬಹುಳ ಅಷ್ಟಮಿ ಸೋಮವಾರ (ಬಹುಶಃ ೨೯-೫-೧೬೫೪ ಕ್ರಿ.ಶ.) ಶ್ರೀಮತ್ ರಾಜಾಧಿರಾಜ ಶ್ರೀಮತ್ ಸಿದ್ದೇಗೌಡರಯ್ಯನ ಮಗ ಅಂಕಯ್ಯನವರಿಗೆ ಚನ್ನಪಟ್ಟಣದ ತಿರುಮಲಯನ ಕೈಯಲಿ ಬರೆದ ಬರಹಾ"—ಎಂದಿದೆ.

'ಛ'—ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕು ಎಳನಡು ಗ್ರಾಮದ ಶ್ರೀಮಠದ ಗ್ರಂಥಭಂಡಾರದಲ್ಲಿ ದೊರೆತದ್ದು. ಈ ಹೊತ್ತಗೆಯನ್ನು, ನಮ್ಮ ಸಂಸ್ಥೆಯಲ್ಲಿರುವ ಶ್ರೀ ಎಂ. ಎಸ್. ಬಸವರಾಜಯ್ಯನವರು ತಂದುಕೊಟ್ಟಿದ್ದಾರೆ. ಪ್ರತಿ ಸಮಗ್ರವೂ ಶುದ್ಧವೂ ಆಗಿದ್ದು ಶಕಟರೇಫವನ್ನು ಬಳಸಲಾಗಿದೆ.

'ಎ' ಮತ್ತು 'ಗ'ಗಳು ಒಂದನ್ನೊಂದು ಸಂಪೂರ್ಣವಾಗಿ ಹೋಲುತ್ತಿವೆ. 'ಅ' 'ಐ' ಗಳಲ್ಲಿ ಸ್ವಲ್ಪಮಟ್ಟಿನ ಹೋಲಿಕೆಯುಂಟು. 'ಇ'ಯು 'ಐ' ಪ್ರತಿಯನ್ನು ಕೆಲವೆಡೆಯಲ್ಲಿ, 'ಎ' 'ಗ'ಗಳನ್ನು ಅನೇಕ ಕಡೆಯಲ್ಲಿ ಹೋಲುತ್ತಿರುವುದಾದರೂ ಇದು ಬೇರೊಂದು ಮೂಲದ ಪ್ರತಿ. 'ಉ' ಪ್ರತಿಯ ಮೂಲ ಈ ಎಲ್ಲ ಪ್ರತಿಗಳ ಮೂಲಮಾತೃಕೆಗಳಿಂದ ಭಿನ್ನವಾದುದೆಂದು ಹೇಳಬಹುದು. 'ಕ' ಪ್ರತಿಯು ಅಶುದ್ಧವಾಗಿದ್ದು ಅದರ ಬಗ್ಗೆ ಏನೂ ಹೇಳುವಂತಿಲ್ಲ. 'ಚ' ಪ್ರತಿಯು ಹೆಚ್ಚಾಗಿ 'ಅ' ವನ್ನೂ 'ಛ' ಪ್ರತಿಯು 'ಎ' 'ಗ' ಗಳನ್ನೂ ಹೋಲುತ್ತವೆ. ಈ ಎರಡು ಪ್ರತಿಗಳು (ಚ ಛ) ಮುದ್ರಣಕಾರ್ಯ ಪ್ರಾರಂಭವಾಗಿ ಬಹುದೂರ ಮುಂದುವರಿದಮೇಲೆ ದೊರಕಿದುವಾದುದರಿಂದ ಇವನ್ನು ಆವಶ್ಯಕವಿದ್ದ ಕಡೆ ಮಾತ್ರ ಹೋಲಿಸಿ ನೋಡಲಾಗಿದೆ.

ಕಾವ್ಯದ ಈ ಭಾಗವನ್ನು 'ಅ' ಮತ್ತು 'ಐ' ಪ್ರತಿಗಳ ಪಾಠವನ್ನೆ ಸಾಧಾರಣವಾಗಿ ಅಂಗೀಕರಿಸಿ ಸಂಪ್ರತಿಸಿದೆ. ಆದರೆ ಯಾವ ಒಂದು ಪ್ರತಿಯನ್ನೂ ಸಂಪೂರ್ಣವಾಗಿ ಅಂಗೀಕರಿಸಿಲ್ಲ. ಕೆಲವು ಸಂದಿಗಳ ಸೂಚನೆಯ ಪದಗಳು ದೊರೆಯಲೇ ಇಲ್ಲ. ಆದರೂ ಈಗ ಕೊಟ್ಟಿರುವ ಪಾಠ ಮೂಲಕೃತಿಗೆ ಸಮೀಪತಮವಾದುದೆಂದೆ ಭರವಸೆ.

ಮೂಲಮಾತೃಕೆಗಳನ್ನು ಅಭಿಮಾನಪೂರ್ವಕವಾಗಿ ಕೊಟ್ಟಿರುವ ಮಹನೀಯರಿಗೆಲ್ಲ ಸಪ್ರೇಮ ವಂದನೆಗಳು. ನಾವು ಕೊಟ್ಟ ತೊಂದರೆಯನ್ನು ಸಹಿಸಿಕೊಂಡು ಅದಕ್ಕೆ ಪ್ರತಿಯಾಗಿ ಅನೇಕ ಉಪಯುಕ್ತ ಸಲಹೆಗಳನ್ನು ನೀಡುತ್ತಿದ್ದ ಸರ್ಕಾರಿ ಶಾಖಾ ಮುದ್ರಣಾಲಯದ ಡೆಪ್ಯುಟಿ ಡೈರೆಕ್ಟರ್ ಶ್ರೀ ಎಂ. ಎ. ಶ್ರೀರಾಮು, ಎಂ.ಎಸ್‌ಸಿ., ಅವರಿಗೆ ನಮ್ಮ ನೆನವರಿಕೆಗಳು.

**ಎಚ್. ದೇವೀರಪ್ಪ.**

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೬೪ | ೩ | ಕಂದಿತೆಂಬ ತೆ | ಕಂದಿತೆಂಬಂತೆ |
| ೭೦ | ೧೦ | ಸ್ಥಲ | ಸ್ಥಳ |
| ೮೧ | ೨೫ | ಣಾಯತೇಕ್ಷಣೆ[8] | ಣಾಯ[8]ತೇಕ್ಷಣೆ |
| ೯೫ | ೩೧ | ಳ್ತ | ಳ್ದ |
| ೯೮ | ೪ | ನನ್ನ ಅ | ನನ್ನ |
| ೧೦೩ | ೨೯ | ಗೆ[7] | [7]ಗೆ[7] |
| ೧೦೫ | ೨೦ | ನಿಂದೆಗಿವಸ | ನಿಂದೆಗಿವನ |
| ೧೦೭ | ೧೦ | ಮಲ್ನುಡಿ | ಮೆಲ್ನುಡಿ |
| ೧೦೭ | ೨೯ | ಮನಸಿ | ಸಿ |
| ೧೧೨ | ೨೨ | [7]ಣ್ಬಾಳೆ[7] | [7]ಣ್ಬಾ[7]ಳೆ |
| ೧೧೩ | ೨೭ | ದೆ | ದೆಂ |
| ೧೧೩ | ೨೮ | ಡ | ಡಂ |
| ೧೧೪ | ೪ | ನೆಂದನಲಾ | ನೆಂದೆನಲಾ |
| ೧೨೬ | ೩೧ | (ಎಗ) | †(ಎಗ) |
| ೧೪೧ | ೧೬ | ಚ | ಚಾ |
| ೧೪೬ | ೧೩ | [3]ಕೇ[3] | [3]ಕೇರ[3] |
| ೧೪೯ | ೧೭ | [5]ಬಣ್ಣಿಪೆ[5]ನು | [5]ಬಣ್ಣಿಪೆನು[5] |
| ೧೬೭ | ೯ | ಯ್ಯೂಗ | ಯುಗ್ಯ |
| ೧೮೧ | ೮ | ತಗಳು | ತಗುಳು |
| ೨೪೭ | ೧೯ | ಮಿಗಿಲು | ಮಿಗಲು |
| ೨೭೦ | ೭ | ಪರುಪ | ಪರುಷ |
| ೨೯೧ | ೧೮ | ನಿರ[6] | ನಿಂ[6] |
| ೨೯೪ | ೩ | — | ಷ |
| ೩೨೬ | ೨೧ | ನಿ[6]ಲ್ಲಿ[6]ಸು | ನಿಲ್ಲಿಸು |
| ೩೩೫ | ೧೬ | ಭೂಮಿ | ಭೂಮಿಾ |
| ೩೯೬ | ೨೪ | ಕಿಬು | ರಗಳ |
| ೩೯೬ | ೨೭ | ವ | ವೆ |

ಪರದಾರಸೋದರ

# ರಾಮನಾಥ ಚರಿತ

---

## ಪೀಠಿಕಾ ಸಂಧಿ

ಶ್ರೀ ಗಿರಿಜಾಸ್ಯಾಂಬುಜ ದಿನನಾಯಕ
ಭೋಗಿ ಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯ ನೀ
ನಾಗು ಶಂಕರ ಶರ[1]ಣೆನಗೆ[1] ೧

ಗಂಗಾ ತುಂಗ ತರಂಗ ಧವಳಿತ ಪಿ
ಶಂಗ ಜಟಾಜೂಟ ಭಾರ
ಮಂಗಲಾತ್ಮಕ ಮದನಾಂಗದಹನ ಭ
ಸ್ಮಾಂಗ ಕೊಡೆನಗೆ [2]ಸನ್ಮತಿಯ[2] ೨

ನೇತ್ರ ಪೂ[3]ರಿ[3] [4]ತ ಹರಿಕೃತ ದಶಶತ ಶತ
ಪತ್ರ ಪೂಜಾ[4] ಯು[4]ತ ಚರಣ
ಗೋತ್ರಧವಾತ್ಮಭವಾಲಿಂಗಿತ ದಿವ್ಯ
ಗಾತ್ರ ಕೊಡೆನಗೆ ವರವನು ೩

ನೊಸಲಕಣ್ಣುರಿಯಿಂದ ಬಿಸಿಯಾದ ಗಂಗೆಯೊ
ಳೆಸಗಿದ ಫೇನದಂತೆಸೆವ
ಸಸಿಯಿಂದ ಮೆಱೆವಸಮಾಕ್ಷ ಪಾಲಿಸು ನೀ
ನೊಸೆದು ವೈರಾಗ್ಯವಿತ್ತೆನ್ನ ೪

ಆವನ ಕುದುರೆಗೆ ಬೊಮ್ಮನ ಮೊಗಲಾಯು
ಆವನಂಬಿಗೆ ಯೋಗಿಗಳ
ಭಾವ ಬತ್ತಳಿಕೆಯಾ ದೇವನ ಮೆಲ್ಲಡಿ
ದಾವರೆಗಳಿಗೆಱಗುವೆನು ೫

---

[1] ಣಾರ್ಥಿ (ಕ) [2] ಭಕ್ತಿಯನು (ಆ ಇ ಕ) [3] ಜಿ (ಇ) [4] ಯು (ಇ ಉ ಎ ಕ ಗ).

ದೇವರು ಮೂವರಿರಲು ಲೋಕಕ್ಕೀರ್ವರ
ಭಾವಿಸದೇ ಪುರಹರನ
ಆವ ಬಗೆಯೊಳು ಕೊಂಡಾಡಿದೆ ನೀನೆಂಬ
ಕೋವಿದ ಕೇಳು ಪೇಳುವೆನು ೭

*ಕಾಲೊಳಿಲ್ಲವರಿಗೆ ಕಣ್ಣು ಶೂಲದೊಳಿಲ್ಲ
ನೇಲುವ ಪೆಣ ಕಯ್ಯೊಳಗೆ
ಆಲಿಸಲೋದುವ ತಲೆಯಲ್ಲದರಿಗೆಂತು
ಬಾಳವನೊಲಿದು ಚಾಚುವೆನು ೭

ಜಡೆಯೆಡೆಯೊಳಗೆಡೆವಿಡದೆಡೆಯಾಡುವ
ಕಡಲಿಲ್ಲ ನಡುನೊಸಲೊಳಗೆ
ಕಿಡಿಗಣ್ಣಿಲ್ಲುಡೆಯೊಳು ಪುಲಿದೊ[1]ವ[1]ಲಿಲ್ಲವ
ರಡಿಗಳಿಗೆಂತೆಱಗುವೆನು ೮

ತಂದೆತಾಯಿಗಳುಂಟು ಬಂಧುಬಳಗವುಂಟು
ನಂದನರುಂಟಂಗನೆಯರ
ಸಂದಣಿಯುಂ[2]ಟದನಱಿದಾಸ್ವರ್ಗೆಂತು[2]
ವಂದನೆ[3]ಯನು[3] ಮಾಡುವೆನು ೯

ಜನನಜರಾಮರಣಗಳುಳ್ಳರಿಗೆ ವಾದಿ
ಜನಿಸಲಱಿಯದು ದೇವತ್ವ
ಜನವೈದೆ ಬಲ್ಲುದಾನೆಂತುಟವರ ಪಾದ
ವನಜಕ್ಕಳಿಕವ ಚಾಚುವೆನು ೧೦

ವೇದಗಳೇಕೋದೇವಯೆಂದೀರಧ್ವನು
ವಾದಿಸುತಿರಲದನಱಿದು
ಮಾದೇವಗಲ್ಲದುಳಿದ ದೇವತೆಗಳಿಗಂ
ತಾದರದಿಂದೆಱಗುವೆನು ೧೧

ಎಲ್ಲಿ ಶಂಕಾಶ್ಚರ್ಯಗಳೈದೆ ಚಿತ್ತವ
ನಲ್ಲಿ ಮಹಾದೇವಯೆಂಬ
ಸೊಲ್ಲಲ್ಲದುಂಟೆ ಮಿಕ್ಕರ ದೇವರೆಂದೆಂಬ
ಕಲ್ಲೆದೆತನ ಬೇಡ ವಾದಿ ೧೨

[1] ಗ (ಇ) [2] ಟಾನಂದವುಂಟವರಿಗೆ (ಇ) [3] ಯೆಂತು (ಇ) * ಈ ಪದ (ಎ ಗ) ಪ್ರತಿಗಳಲ್ಲಿಲ್ಲ.

ದೇವ[1]ಶಬುದ[1] ಮಾತ್ರವಲ್ಲದೆ ನಿನ್ನಿಷ್ಟ
ದೇವತೆಗಳಿಗೀಶನಂತೆ
ಭಾವಿಸಲುಂಟೆ ಮಹಾದೇವವೆಸರಿದ
ನಾವನಱಿವನವನಿಯೊಳು ೧೩

ಬಿಡು ಭವಪಾಶಬದ್ಧರ ದೇವತೆಗಳೆಂಬ
ನುಡಿಯನಭವನಲ್ಲದಿಳೆಗೆ
ಒಡೆಯರಿಲ್ಲೆಂದು ನಿಗಮನಗಗಳನೆತ್ತಿ
ಮುಡಿಗಿಕ್ಕಿದಪೆನಾಂಪರುಂಟೆ ೧೪

*ಇಳೆಗೀಶಗಲ್ಲದೆ ಕರ್ತೃತೆ ಭಾವಿಸ
ಲುಳಿದ ದೇವತೆಗಳಿಗುಂಟೆ
ತಿಳಿದು ನೋಡಾರ್ಯ ನಾನಾತರ್ಕಶಾಸ್ತ್ರಸಂ
ಕುಳವದು ನಿನಗಗೋಚರವೆ ೧೫

ಸುಟ್ಟವರಾರು ಪುರವನಮರರನಱೆ
ಯಟ್ಟಿ ಸುಡುವ ಗರಳವನು
ಮುಟ್ಟಿಪಿಡಿ[2]ದ[2]ರಾ[3]ಲೋಕೇ[3]ಶಗೆ ಸರಿ
ಗಟ್ಟುವೆ ಮಿಕ್ಕ ದೇವರನು ೧೬

ಪಶುನಾಮುವನಿತ್ತುಳಿದ ದೇವತೆ[4]ಗಳ್ಗೆ[4]
ಪಶುಪತಿತ್ವವನಾಂತಭವಗೆ
ಪಶುಗ[5]ಳು[5] ಪಾಸಟಿಯೆಂದು ನುಡಿದು ನರ
ಪಶುವಾಗಬೇಡೆಲೆ ವಾದಿ ೧೭

ಒಡೆತನವಿಲ್ಲದಿರ್ದೊಡೆ ಶಿವಗಜತಲೆ
ಗೊಡುವನೆ ಹರಿ [6]ನೇತ್ರವ[6]ನು
ಬಿಡದೊಗಿಸುವನೆ ಮತ್ಸರವ[7]ನು[7]ಳಿದು ಬೇಗ
ಮೃಡನಡಿಗಳಿಗೆಱಗಾರ್ಯ ೧೮

---

[1] ಬ್ದ (ಆ ಇ ಉ) ಬ್ದಾ (ಎ ಗ) [2] ವ (ಅ) [3] ರಾ ಏಕೆ ಈ (ಉ) [4] ಗಳಿಗೆ (ಇ ಉ) [5] ಳ (ಇ ಎ ಕ ಗ) [6] ನೆತ್ತರ (ಅ ಉ ಕ) [7] ನ (ಗ). * ಈ ಪದ (ಉ) ಪ್ರತಿಯಲ್ಲಿಲ್ಲ.

ಇಳೆಗೀಶಕರ್ತೃಕತೆಯ ಘಟದೃಷ್ಟಾಂತ
ಬಲದಿಂದ ವಾದಕೋವಿದರು
ಒಲಿದೊರೆವಾಗಳೀಶ್ವರಗೆ ಕರ್ತೃತೆಯಲ್ಲ
ದುಳದ ದೇವರಿಗುಂಟೆ ವಾದಿ ೧೯

ಪರವಸ್ತು ಜಗಕೀಶನಲ್ಲದಿರ್ದಡೆ ಬಂ
ಧುರಗಾಧಿಪನಾವರಿಪನೆ
ಪಿರಿದು ಮಾತೇನೆಲೆ ವಾದಿ ಭೂತಂಗಳ
ನೆರಪಿ ಬಿಡದೆ ಕಾದಪುದೆ ೨೦

ಎಂದಿವು ಮೊದಲಾದನೇಕ ಯುಕ್ತಿಯ ಬಲ
ದಿಂದ ವಾದಿಯನೊ[1]ಡ[1]ಬಡಿಸಿ
ಇಂದುಕಲಾವತಂಸನ ಬಲಗೊಂಡಾ
ನಂದದಿಂ ಪೇ[2]ಳ್ವೆ[2]ನೀ ಕೃತಿಯ ೨೧

ವಾಣಿಯನಖಿಳಕಳಾರೋಹಣನಿ
ಶ್ರೇಣಿಯನಬ್ಜಸಂಭವನ
ರಾಣಿಯ ಬಲಗೊಂಬೆನೊಲಿದುರುವೀಣಾ
ಪಾಣಿಯನು[3]ಚ್ಚ[3]ವೇಣಿಯನು ೨೨

ತಂದೆಯನೊಲಿಸಿ ಪಲರೊಳೊಂದಿ ದುರ್ಮಾರ್ಗಿ
ಯೆಂದು ನಿಂದಿಸಿಕೊಳ್ಳದಬಲೆ
ಎಂದಿಗೆ ಮುಗಿವುದೀ ಕೃತಿಯಂದು[4]ವರೆಗಮು[4]
ನ್ನೊಂದಾಗಿರು ಬಲಗೊಂಬೆ ೨೩

ಅರಿವನೊತ್ತ[5]ಗ[5]ನೇಕೆಂದು ನೀನೆನ್ನ
ದೂರೀಕರಿಸಬೇ[6]ಡಮ್ಮ[6]
ಸೇರಿದೆಯಾದೊಡೆ ಮುನ್ನಪೇಳಿದ ಕಾವ್ಯ
ದೋರಗೆಯೆನಿಪೆನೀ ಕೃತಿಯ ೨೪

ಆ[7]ರಾತಿಯ[7]ಕವಿಗಳು ಪೋದ ಬಳಿಕ ನೀ
ನಾರಾರ ಬಳಿಗೆಯ್ದೆ ನನ್ನ
ಸಾರಿ ನೋಡೊಮ್ಮೆ ಶಾರದೆ ನಿನ್ನ ಚಿತ್ತಕೆ
ಸಾರಸುಖವನೊಲಿದೀವೆ ೨೫

---

[1] ಡಂ (ಉ ಎ ಗ) [2] ಳ್ವೆ (ಇ ಉ ಎ ಐ ಗ) [3] ಶ್ಚ (ಗ ಎ) [4] ವರೆಗೆಮು (ಉ) ದೆನಗೆಮು (ಎ ಗ) [5] ಗಾ (ಅ) [6] ಡೆಂದು (ಕ ಗ) [7] ರಾದಿಯ (ಐ) ವಾವ (ಕ).

*ಅಂದಿನ ಕವಿಗಳಿಗಿತ್ತ[1]ಮೆ[1]ಲ್ಲುಡಿಗಳ
ಸಂದ ಸವಿಯನೆನಗೊಲಿದು
ಇಂದುವದನೆ ಕೊಡು ನಿನ್ನಂಘ್ರಿವನಜಕೆ
ಬಂದಳಿಯವೊಲೆಱಗುವೆನು ೧೬

ಆರೇನ ಬಯಸಿ ಬೇಡಿದೊಡದನೊಲಿ[2]ದವಿ[2]
ಚಾರತೆಯಿಂ[3]ದವರ್ಗೀ[3]ವ
ವಾರಣವದನ ವಾರಣದಾನವಾರಿಕು
ಮಾರ ಕೊಡೆನಗವಿಘ್ನತೆಯ ೧೭

ಆನೆವಾನಿಸತನುಗಳ[4]ನೊಂ[4]ದೆ ದೇಹದೊ
ಳಾನಬಲ್ಲವರುಂಟೆ ನಿನ್ನ
ಆನಭಿನುತಿಗೆಯ್ದು ಮಚ್ಚಿಸ[5]ಬಲ್ಲ[5]ನೆ
ನೀನೆ ಕೊಡೆನ[6]ಗವಿಘ್ನತೆಯ[6] ೧೮

ಧರಣಿಯ ತೂಕದ ಮೆಯ್ಯನೆಲಿಯ ಮೇ
ಲಿರಿಸಿ ಲೋಕಂಗಳೆಲ್ಲವನು
ಚರಿಸುವ ಗಣಪ ಕೊಡೆನಗಿಷ್ಟಸಿದ್ಧಿಯ
ನಿರದೆ ನಿನ್ನಂಘ್ರಿಗೆಱಗುವೆ ೧೯

ಕನ್ನಡಕವಿತೆಗೆ ಮೊದಲಿಗನೆಂದೆಂ
ಬುನ್ನತ ಕೀರ್ತಿಕಾಮಿನಿಯು
ಬೆನ್ನಬಿಡದೆ ತೊಳ[7]ಲುವ ಪಂಪರಾಜನ[7]
ಚೆನ್ನಡಿಗಳಿಗೆಱಗುವೆನು ೨೦

ಕಾದಂಬರಿಯ ಸು[8]ಡಿಸಿ[8] ಲೀಲಾವತಿ
ಗಾದರದಿಂ ಕಪ್ಪನಿ[9]ಟ್ಟು[9]
ಮೇದಿನಿಯನು ಮೆಚ್ಚಿಸಿದ ನೇಮಿಚಂದ್ರನ
ಪಾದಗಳನು ಬಲಗೊಂಬೆ ೨೧

---

1 ಮೇ (ಐ) 2 ದು ವಿ (ಉ ಎ ಐ ಗ) 3 ದೊಲಿದೀ (ಅ) 4 ತಂ (ಇ)
5 ಬಲ್ಲೆ (ಇ ಉ ಐ) 6 ಗೆ ವರವನು (ಎ ಗ) 7 ಲಪ ವಾಲ್ಮೀಕಿಯ (ಇ)
8 ಟ್ಟು (ಎ ಗ) 9 ಟ್ಟ (ಎ ಗ). * ಈ ಪದ (ಎ ಗ) ಪ್ರತಿಗಳಲ್ಲಿಲ್ಲ.

ಬಲ್ಲಿದ ಕ[1]ರ್ಣಾ[1]ಟ ಕವಿಗಳೆಲ್ಲರ ಗೆಲ್ದು
ಬಲ್ಲಾಳಭೂಮೀಶ್ವರನ
ನಿಲ್ಲದೆ [2]ಮ[2]ಚ್ಚಿಸಿಕೊಂಡ ಜನ್ನನ ಪಾದ
ಪಲ್ಲವಗಳಿಗೆಱಗುವೆನು ೨೨

ಇಂಪುವಡೆದ ಕವಿತಾರಸ[3]ಲಹರಿ[3]ಯ
ಸೊಂಪಿನಿಂ ವಾದಿಗಳೆರ್ದೆಗೆ
ಕಂಪನವನು ಪು[4]ಟ್ಟಿ[4]ಸುವ ಗುಣನಂದಿಯ
ನಾಂ ಪೊಗಳುತ ಬಲಗೊಂಬೆ ೨೩

ಗಜಗನ ಗುಣವರ್ಮನ ನಾಗಚಂದ್ರನ
ಸುಜನೋತ್ತಂಸನಸಗನ
ಸುಜನರತ್ನನ ಶಾಂತಿವರ್ಮನ ಪದಸರ
ಸಿಜಗಳಿ[5]ಗಾನೆ[5]ಱಗುವೆನು ೨೪

ರಗಳೆಯ ಕವಿಯೆಂದು [6]ತೆಗಳೆ[6] ವಾದಿಗ[7]ಳೆಲ್ಲ[7]
ಸೊಗಸೊಗುವಂತೆ [8]ವಸು ಕವ[8]
ನೆಗಳಿದ ಹಂಪೆಯ ಹರಿಯಣ್ಣನ ಪದ
ಯುಗಳ[9]ಕೆಱಗುವೆನಲ್ತಿಯೊಳು[9] ೨೫

ಹಿಂದಣವರ ಸವಿವಾತುಗಳಿಗೆ ಸರಿ
ಬಂದಿ[10]ದೆ[10] ಮೆಲ್ನುಡಿ ನಿನ್ನ
ಎಂದು ಕೊಂಡಾಡಿಸಿಕೊಂಡ ಮಧುರನನಾ
ನಂದದಿಂ ಬಲಗೊಂಬೆನೊಲಿದು ೨೬

ಸರಸತಿ ಬಾಣೀಶಬ್ದಕದಂತತೆ
ಇರವ ಪುಟ್ಟಿಸಿ ಬಾಣನೆಂದು
ಕರೆಯಿಸಿಕೊಂಡಳೆಂಬಂತಿರ್ದ ಬಾಣನ
ಚರಣಕಾನೊಲಿದೆಱಗುವೆನು ೨೭

---

[1] ನ್ನಾ (ಇ ಐ) [2] ಮೆ (ಉ ಕ) [3] ರಚನೆ (ಉ) [4] ಗು (ಎ ಗ) [5] ಗೊಲಿದೆ (ಉ ಐ) [6] ತಿಗುಳ (ಅ ಐ) ತಗುಳ (ಉ) [7] ಳುಱ (ಇ) [8] ಕವಿತೆಯ (ಇ ಕ) [9] ಕ್ಕಾನೆಱಗುವೆನು (ಎ ಗ) [10] ವೆ (ಎ ಐ ಗ).

*ಕ್ಷೋಣಿಯು ತಲೆದೂಗಿಸುವ ಕವಿತೆಯ ಪೇಳ್ದು
ಮಾಣದೆ ಬಲ್ಲವರಿಂದ
ಬಾಣೋಚ್ಛಿ[1]ಷ್ಟಂ[1]ಜಗತ್ರಯಮೆನಿಸಿದ
ಬಾಣನ ಬಲಗೊಂಬೆನೊಲಿದು ೩೮

*ಕವಿತಾವನಿತೆಯು ಸಂಗಕೆ ಪೆಣ್ತನ
ಸವಿಯಲ್ಲವೆಂದಾ ವಾಣಿ
ತವಕದಿಂ ಗಂಡುರೂಪಾಂತಳೆಂಬಂತಿರ್ದ
ಕವಿಕಾಳಿದಾಸಗೆಱಗುವೆ ೩೯

*ಆ ಸರಸ್ವತಿಯನೊಲಿಸಿಯವಳಿಂ ಕಾಳಿ
ದಾಸೋಹಮೆಂದಾಡಿಸಿದ
ಭಾಸುರಸಕಲಕಲಾಕೋವಿದ ಕಾಳಿ
ದಾಸನಡಿಗಳಿಗೆಱಗುವೆ ೪೦

ಕಾಳಿದಾಸನ ಕವಿತಾರಸವೆನಗೇ
ಳೇಳು ಜನ್ಮದೊಳಕ್ಕೆಂದು
ಕೇ[2]ಳೆ[2] ಸುಕವಿಗಳು ಭೋಜ[3]ನಿಂ[3]ದೆನಿಸಿದ
ಕಾಳಿದಾಸನ ಬಲಗೊಂಬೆ ೪೧

ಸರಸಕವಿತೆಯಿಂದ ಭೋಜರಾಜನ ಕಿವಿ
ಗಿರದಮೃತವ [4]ಕ[4]ಱೆದವನ
ಸರಿದೊರೆಯಾಗಿ ನಡೆದ ಕಾಳಿದಾಸನ
ಚರಣಕಾನೊಲಿದೆಱಗುವೆನು ೪೨

ಇದು ದೋಷವಿದು ಗುಣವೆಂಬ ಭೇದವ [5]ನೋ
ಡ[5]ದ ಮುನ್ನ ಕಂಡು ದೋಷವನು
ಎದೆಯೊಳಗಿಟ್ಟು ಗುಣ[6]ವ[6] ಕೊಂಡಾಡುವ
ಮೃದುಹೃದಯರಿಗೆಱಗುವೆನು ೪೩

ಲೇಸ ಕಾಣುತ ಮಝು ಬಾಪು ಭಲರೆ ನಾ
ವೀಸು ದಿನಂಬರ ನಿನ್ನ
ಈಸು ವಿವೇಕಿಯೆಂದಱಿಯೆವೆನುತ ಪೊಗ
ಳ್ವಾ ಸುಜನರಿಗೆಱಗುವೆನು ೪೪

[1] ಷ್ಟ (ಉ ಐ ಕ) [2] ಳಿ (ಉ ಎ ಐ ಗ) [3] ನೆಂ (ಇ ಎ ಕ) [4] ನೊ (ಉ)
[5] ನೊದವಿ (ಇ ಎ ಗ) [6] ವನೆ (ಐ ಕ ಗ) * ಈ ಪದಗಳು (ಎ ಗ) ಪ್ರತಿಗಳಲ್ಲಿಲ್ಲ.

* ನೀರ ತೊಲಗಿಸಿ ಪಾಲ್ಗುಡಿವ ಹಂ[1]ಸನ[1]ವೊಲು
ದಾರಗುಣಗಳಿಗೊಲಿವುತ
ಸೇರಿದ ದೋಷವ ದೂರೀಕರಿಸುವ
ಸಾರಹೃದಯರಿಗೆಱಗುವೆ ೪೫

* ಆಮೋದಕಾನಂದಿಸುತ ದುರ್ಗಂಧ[2]ದ
ಸೀಮೆಗೆಱಗದಳಿಯಂತೆ[2]
[3]ಆಮೋದಿಸು[3]ತ ಗುಣ[4]ಗಳಿಗೆ[4] ದೋಷವ ಬಿಡು
ವಾ ಮನುಜರಿಗೆಱಗುವೆನು ೪೬

ಅಸುಜನ ಕಠಿನವಚನವಹ್ನಿದಗ್ಧಮಾ
ನಸರಾದಡೆಯುವೊಳ್ಳಿದರು
ಮಸುಳಿಸದೊಳ್ವಣ್ಣದಿಂದಮೊಗೆವ ಪೊಸ
ಮಿಸುನಿಯ ತಗಡುಗಳಂತೆ ೪೭

ಕಡಿವ ಕೊಡಲಿಯ ವದನಕಾಮೋದವ
ಕೊಡುವ ಚಂದನವೃಕ್ಷದಂತೆ
ಬಿಡದೆ ನೋಯಿಪ ಖಲಜನಕುಪಕಾರವ
ನೊಡನೆ ಮಾಡುವರು ಸಜ್ಜನರು ೪೮

ದುರಿತಮನುರಿಯ ದೈನ್ಯಮನೊಂದೊಂದನೆ
ಸುರನದಿ ವಿಧು ಸುರಭೂಜ
ಹ[5]ರೆ[5]ಯಿಪವಲ್ಲದೊಳ್ಳಿದರಂತಿವೆಲ್ಲವ
ಪರಿಹರಿಸಲು ನೆರೆದಪವೆ ೪೯

ಕಡೆಯೆ ಕಡಿಯೆ ತೇಯೆ ಕಾಸೆ ಕರಗಿಸಲಂ
ಗಡಲಿಕ್ಷು ಕಂಪು ಪಾಲ್ಮಿಸುನಿ
ಕುಡವೆ ಗುಣವನಿವು ನೋಯಿಸೆ ಸಜ್ಜನ
ರೆಡರ ಮಾಳ್ಪರೆ ಖಳಜನಕೆ ೫೦

---

[1] ಸೆಯ (ಇ) [2] ಕೆಳಿಸುವ- ನ್ಹಣದಂತೆ (ಎ ಗ) [3] ಪ್ರೇಮವಡು (ಉ)
[4] ದೊಳಗೆ (ಅ ಇ ಉ) [5] ರ (ಎ ಐ ಗ). * ಈ ಪದಗಳು (ಇ) ಪ್ರತಿಯಲ್ಲಿ
ಹಿಂದುಮುಂದಾಗಿವೆ.

ನಿಂದೆ ವಂದನೆಗಳಿಗೊಂದೆ ಪರಿಯೊಳಿರ್ಪ
ಸಂದ ಸಜ್ಜನರಂತಿರ್ಕೆ
ಒಂದೊಂದಕೊಂದೊಂದು ಪರಿಯಹ ದುರ್ಜನ
ವೃಂದವ ಬಲಗೊಂಬೆನೊಲಿದು　　೫೧

ಕಳ್ಳಮಡಕೆಯು ಪೂಜಿಸುವಂತೆ ಚಿಲುಪಾ
ಲುಳ್ಳ ಮಡಕೆಯು ಪೂಜಿಪರೆ
ಒಳ್ಳಿದರವರಂತಿ[1]ರಲಿ ನುಣ್ನುಡಿಗಳ[1]
ಕಳ್ಳರಿಗಾನೆಱಗುವೆನು　　೫೨

ಒಳುಗಂಪನೊಲ್ಲದೆ ತಳುವದೆ ದುರ್ಗಂಧ
ಕೆಳಸುವ ನೊಣ[2]ದಂ[2]ತೆ ಗುಣವ
ಇಳಿಕೆಯ್ದು ದೋಷಕೆಱಗುವ ದುರ್ಜನರಡಿ
ದಳಿರ್ಗಳಿಗಾನೆಱಗುವೆನು　　೫೩

ಗಾಜು ಗರಳವಿರು[3]ಳಸುಜನ[3] ಮಣಿಗೆ ವಿ
ರಾಜಿಪ ಸುಧೆ ದಿವಸಕ್ಕೆ
ಓಜೆ[4]ದಪ್ಪದೆ[4] ಸುಜನರಿಗೆ ಗುಣವ ಮಾಡು
ತೀ ಜಗದೊಳು ಸುಖವಿರಲಿ　　೫೪

ಪೊಲ್ಲದರೊಲುಮೆಯೊಳ್ಳಿದರ ಮುಳಿಸು ನಿಲ
ಬಲ್ಲುದೆಯಂತದಱಿಂದ
ನಿಲ್ಲದೆ ಬಿಡುವೆ ಖಲರನುರುಸಜ್ಜನ
ರಲ್ಲಿ ಮಾಡುವೆನು ಸಂಗತಿಯ　　೫೫

ಖಳರ ಶೀಲಾಚಾರವ ನಂಬಿ ಮೆಯ್ಮಱೆ
ದೊಳಗಾಗೆ ಕೇಡಾಗದಿರದು
ಹುಲಿಯುಪವಾಸ ಪಶುಗಳ ನೆರವಿಯುಸು
ಗೊಳಿಸದೆ ಸುಮ್ಮನಿರ್ದಪುದೆ　　೫೬

ಅದಱಿಂದ ದುಷ್ಟರೊಳಾಡೆನೆವರೊಳನು
ವದಿಸೆನವರ ಕಂಡರಾನು
ಇದಿರೆಳ್ದು ಕೈಮುಗಿದಲ್ಲಿಂದ ತೊಲಗಿ ದೂ
ರದೊಳಿಹೆನತಿಭೀತಿಯಿಂದ　　೫೭

[1] ರಲಿನಾ ಬೇಗದಿ (ಎ ಗ) ರ್ಕೆ ನುಣ್ನುಡಿಗಳ (ಚ) [2] ನಂ (ಐ) ಳಿನೆ ದಿನ (ಅ) [4] ತಪ್ಪದೆ (ಎ ಕ ಗ)

ಸಕ್ಕರೆಯಂತೆಳಜವ್ವನೆಯರ ತೋಳ
ತೆಕ್ಕೆಯಂತಿರದೊಡನುಸರ್ವ
ಮಕ್ಕಳ ತೊದ[1]ಲುನುಡಿಯು ನುಣ್ಪಿಸಂತೆ[1] ಮ
ನಕ್ಕೆ ಬಂದಿದೆ ನುಡಿ ನಿನ್ನ ೫೮

ತಿಂಗಳ ಕದಿರ್ದೊಂಗಲಂತೆಳೆವೆಣ್ಗಳ
ಸಂಗಸುಖದ ಸವಿಯಂತೆ।
ಅಂಗಜನಲರ್ಗಣೆಯಂತೆ ತಂಬೆಲರ ಬೆ
ಡಂಗಿನಂತಿದೆ ನುಡಿ ನಿನ್ನ ೫೯

ಮುಳಿಸನಿರದೆ ಕಾಲ್ವಿಡಿದು ತಿಳುಪೆ ಕಾಮು
ಕಳೆ ಪೆರ್ಚಿ ಕೂಡುವಿನೆಯಳ
ಒಳುಗೂಟದಂತೊಲಿಸುತಿದೆ ನಿನ್ನಯ ಸವಿ
ದಳೆದ ಮೆಲ್ನುಡಿಯ ವಿಲಾಸ ೬೦

ಕಡುಸವಿ ಮಡದಿಯರೊಳ್ನುಡಿಯುದಱಿಂದ
ಯ್ವಡಿ ಸವಿ ಹಸುಳೆಗಳೆರದೆ
ನುಡಿವ ನುಣ್ನುಡಿಯುದಱಿಂದ ನಿನ್ನಯ ಮೆಲ್ಲು
ನುಡಿ ಸವಿಯಾಗಿ ತೋಱುತಿದೆ ೬೧

ಆವ ಸವಿಯ ನೆಲೆವನೆಯೊ ನಿನ್ನಯ ನುಡಿ
ಕೋವಿದರೊಲಿದಾಲಿಸುವ
ಆ ವಿಪಂಚಿಯ ರವಕೆಳಸದೆ ನಿನ್ನ ರ
ಸಾವಿಲವಚನಕೊಲಿವ[2]ರು[2] ೬೨

ಏಮಾತೊ ನಿನ್ನ ಮೆಲ್ನುಡಿಯ ಸವಿಗೆ ಸೋಲ್ತು
ಕಾಮಿನಿಯ[3]ರ[3] ರತಿಸುಖದ
ಸೀಮೆಯ ಮಱೆದರೆನಲು ಕಾಮಿಗಳು ನಿನ್ನ
ಕೋಮಲವಚನ[4]ದಿಂಪೆಂತೊ[4] ೬೩

*ಒಱೆವ ಕಂಬನಿಯೊದಱುವ ಕೊರಲ್ ಬಾಯ್ಗೂಟ
[5]ಮೊ[5]ಱೆದಪ್ಪಿ ನುಡಿವ ನುಣ್ಮಾತು
ಮೆಱೆವ ಮೆಲ್ವೆಣ್ಣಿನ ರತಿಸುಖದಿಂಪನು
ಮಱೆಯಿಸುತಿದೆ ನುಡಿ ನಿನ್ನ ೬೪

[1] ಲ್ನುಡಿಯಂತೆ ನುಣ್ಪಿಂದ(ಉ) [2] ರೆ (ಎ ಗ) [3] ರು (ಅ ಇ ಉ) [4] ಕೊಲಿವರು (ಐ) [5] ಮೆ (ಅ). * ಈ ಪದ (ಉ ಎ ಕ ಗ) ಪ್ರತಿಗಳಲ್ಲಿಲ್ಲ.

*ಮಾಡು ಚುಂಬನವ ಮದನರೂಪ ಮೆಯ್ಯೊಡ
ಗೂಡು ಕರ್ಪು[1]ರ[1]ವೀಟಿಕೆಯ
ನೀಡು ನಾಲಗೆಗಯ್ಯಿಂಥೆಂಬ ನೀಱೆಯ
ಗಾಡಿಯಂತಿದೆ ನುಡಿ ನಿನ್ನ　೬೫

ಎಂದೆನ್ನನೊಲಿದು ಕೊಂಡಾಡಿ ಕೋವಿದರು ಪೇ
ಳೆಂದೆನಲವರ ನುಡಿಯನು
ಹಿಂದುಗಳೆಯಲಮ್ಮದೀ ರಾಮನಾಥನ
ಸಂದ ಕಥೆಯನುಸುರಿದೆನು　೬೬

ತುರಗದಂಡಕೆ ಬಲು ಝಲ್ಲಿಯ ಕಟ್ಟಿದ
ಬಿ[2]ರು[2]ದುಳ್ಳ ರಾವುತ ನಿಮ್ಮ
ಹಿರಿಯಯ್ಯ ನಿಮ್ಮ ಕಿಱಿಯ ತಂದೆ ವಿಜಯನೀ
ಧರಣಿಯಱಿಯೆ ಧುರದೊಳಗೆ　೬೭

ರಾಯದಳವ ಕಾಣುತ ತನ್ನ ಪತಿ ನಂಜ
ರಾಯನ ಮುಂದೆ ಕುದುರೆಯ
ರಾಯರಾವುತರ ಮೇ[3]ಲೇಱಿ[3] ತಿವಿದು ಸುರ
ರಾಯನಗರಿಗೆಯ್ದಿದನು　೬೮

ನಿನಗೀ ರಾಮನಾಥನ ಚರಿತವ ಪೇಳ್ವು
ದನುಚಿತವಲ್ಲ ನೀನಿದನು
ಅನುನಯದಿಂದ ಪೇಳೆನಲು ಕೋವಿದರಾನು
ಮನ[4]ವೊ[4]ಲಿದಿದನುಸುರಿದೆನು　೬೯

ಅಂಡದ ಝಲ್ಲಿಯಾನೆಯ ನಿಗಳಕೆ [5]ಮಾ
ರ್ಕೊ[5]ಂಡು ಮಲೆವ ರಾವುತರ
ಹಿಂಡಿನ ಗಂಡ ಮಾಧವನಾತ್ಮಜ ನಂ
ಜುಂಡ [6]ನಾನಿದನುಸುರಿದೆನು[6]　೭೦

---

[1] ರದ (ಐ ಚ)　[2] ರಿ (ಉ ಐ ಕ)　[3] ಲಱಿದು (ಎ)　[4] ವ (ಅ ಐ ಕ)
[5] ಮುಂಕೊ (ಎ)　[6] ನೊಲಿದು ಪೇಳಿದನು (ಅ) ನಿದನುಸುರಿದೆನು (ಉ ಎ ಐ ಕ ಗ).
*ಈ ಪದ (ಉ ಎ ಕ ಗ) ಪ್ರತಿಗಳಲ್ಲಿಲ್ಲ.

ಚಂಗ[1]ಳನಾಡ[1] ನಾಲ್ವತ್ತು ನಾಯಕಗಜ
ಸಿಂಗವೆನಿಪ ಮಾಧವನ
ಅಂಗೋದ್ಭವ ನಂಜುಂಡನಾನಿದನು ಮ
ನಂಗೊಳೆ ಪೇಳ್ದೆ ರಸಿಕರ ೭೧

ಯದುಕುಲಾಮಾತ್ಯರೆಂದೆಂಬ [2]ಕುಲಾ[2]ಗತ
ವಿದಿತ ಬಿರುದನಾಂತೆಸೆವ
ಚದುರ ಮಾಧವನಾತ್ಮಜ ನಂಜುಂಡನಾ
ನೊದವಿ ಪೇಳಿದೆನೀ ಕೃತಿಯ ೭೨

ಪದವಾ[3]ಕ್ಯ[3] ಪ್ರಮಾಣಜ್ಞನೆಂದೆನ್ನ ಕೋ
ವಿದರು ಕೊಂಡಾಡುವರೊಸೆದು
ಚದುರರು ಪೇಳೆನಲೀ ಪದಕವಿತೆಯ
ಮುದದಿಂದಾನುಸು[4]ರಿದೆ[4]ನು ೭೩

ರಸವಿದು ಭಾವವಿದೆಸೆವಲಂಕೃತಿಗಳ
ದೆಸೆಯಿದು ಗುಣದೋಷಗಳ
ಎಸಕವಿದೆಂದಱಿಯದೆ ಮನಬಂದವೊ
ಲುಸಿರ್ವ ಕುಕವಿಯ[5]ಲ್ಲಾ[5]ನು ೭೪

ಉಭಯವಸ್ತುಕಕವಿತೆಯನೊರೆವೆನು ನೃಪ
ಸಭೆ ತಲೆದೂಗುವಂದದಲಿ
ವಿಭುಗಳು ಪೇಳೆನಲೀ ಪದಕವಿತೆಯ
ನಭಿಮಾನಿಸಿ ಪೇಳಿದೆನು ೭೫

ಭೇದಕ ಭೇದ್ಯ ವಾಚಕ ವಾಚ್ಯಗ[6]ಳ[6]ವಿ
ಭೇದವಱಿಯದೆ ಕೃತಿಯನು
ಆದರದಿಂ ಪೇಳ್ದು ಬೆಸಗೊಂಡರೊಡನೆ ವಿ
ವಾದಿಪ ಕುಕವಿಯಲ್ಲಾನು ೭೬

---

[1] ಳ್ವನಾಡ (ಐ) ನಾಡಾಳ್ವ (ಉ) ನಾಡ (ಎ ಕ ಗ) [2] ವಂಶಾ (ಎ ಗ)
[3] ಕ್ಯಪ್ರಾಸು (ಅ) ಕ್ಯಾರ್ಥ (ಕ) [4] ರುವೆ (ಎ ಗ) [5] ಲ್ಲಣ (ಎ ಗ) [6] ಳನು (ಐ).

*ಲಲಿತಪದಾಲಂಕೃತಿ ರಸ ಭಾವಗ
ಳೆಳಸ[1]ಲೆ[1]ಸೆವ ಸತ್ಕೃತಿಯನು
ಒಳಗಱಿಯದೆ ಪೊಱಗಱಿಯದೆ ಕುಕವಿಗ
ಳಿಳಿಕೆಯ್ವುತಿಹರು ಬಾಯಳಿದು　　೭೭

*ಕುಕವಿರಚಿತಕೃತಿ ಕರ್ದಮರಸಪಾನ
ವಿಕೃತ ಕುಜನಮಂಡೂಕ
ಸು[2]ಕರತೆ[2]ಯಿಂದಱಿದಪುದೆ ಸುಕವಿಕೃತಿ
ವಿಕಸಿತಾಂಬುಜಪರಿಮಳವ　　೭೮

ವಿಲಸಿತವಿವಿಧ ಕಲಾಭಿಜ್ಞನೆನಿಪ ನಿ
ರ್ಮಲಕವಿಯೊರೆದ ಕಾವ್ಯಾರ್ಥ
ತಿಳಿವು[3]ದೆ ತಿರಲೋ[3]ದದ ಖೂಳರಿಗದು
ನೆಲದೊಳಗಣ ನಿಧಿಯಂತೆ　　೭೯

ವ್ಯಾಸಸಮಾಸಾದಿ ಪದರಚನಾವಿ
ನ್ಯಾಸವಿಲಾಸವಱಿಯದೆ
ಆಸುರದಿಂ ಕಬ್ಬಕರ್ಥವೇಳುವ ಬುಧಾ
ಭಾಸರಿಗಾನಂಜುವೆನು　　೮೦

ಆವುದು ನೀ[4]ನೊರೆದೀ[4] ಕಾವ್ಯವೆಂ[5]ದೊಡೆ[5]
ಹಾವ ಹಿಡಿದ ಕಪಿಯಂತೆ
ಭಾವದೊಳುಱೆ ಬೆರ್ಚುತತ್ತಿತ್ತ ನೋಡುವ
ಗಾವಿಲ[6]ನಾರಯ್ಯೆ[6]ಕವಿಯೆ　　೮೧

ಉತ್ತಮಕವಿಗಳೆಹೊತ್ತರಿಸಿದ ನುಡಿಗಳ
ನೆತ್ತಿಕೊಂಡದಱಿಂದ ಕೃತಿಯ
ಒತ್ತಂಬರದಿಂದೊರೆವ ಕವಿಗಳನಜ
ಪೆತ್ತನೇಕೆಂದಾನಱಿಯೆ　　೮೨

---

[1] ಲ್ಕೆ (ಎ)　[2] ಖರತಿ (ಅ ಕ)　[3] ದೆ ತೀರವೋ (ಗ)　ತಲರಲೋ (ಕ)
[4] ನು ಪೇಳಿದ (ಎ ಗ)　[5] ದರೆ (ಎ ಗ)　[6] ನವನೊರ್ವ (ಐ).　* ಈ ಪದಗಳು (ಉ) ಪ್ರತಿಯಲ್ಲಿಲ್ಲ.

ಪುರುಳೊಂದೆಡೆ ಪದ[1]ವೊಂ[1]ದೆಡೆ ಸಂಬಂಧ
ಧರವೊಂಧೆಡೆಯೆನೆ ಕೃತಿಯ
ವಿರಚಿಸಿ ಕುಕವಿಜನಗಳೇಕೆ ಮಾಳ್ಪರೊ
ಶಿರಕೆ ಬೇನೆಯು ಸುಕವಿಗಳ ೮೩

ಮುನಿದಿರ್ದನೆಯುಳೊಲ್ದು ಕರೆಯಲ್ಪಟ್ಟಿದ ಮಾ
ತಿನವೋಲಿಂಪೊಸರೆ ನುಡಿಯೊಳು
ಮನವೊಲಿದಾನುಸಿರ್ವೆನು ವೀರರಾಮನ
ವಿನುತ[2]ವಿಚಿ[2]ತ್ರಚರಿತವ ೮೪

ವರಶುಚಿ ವೀರರಾಮನ [3]ಚರಿತವನಿದ[3]
ನೊರೆವೆನೊಲಿದು ಸತ್ಪುರುಷರು
ಇರದಾ[4]ದರಿ[4]ಪುದು ಶುಚಿತೆ ವೀರತೆ ಬಂದು
ದೊರೆಕೊಂಬುದಂತರಂಗದೊಳು ೮೫

ಕಂದುಕ ಬೀಳಲರಮನೆಗದನೆರದೆತ್ತಿ
ತಂದಪೆನೆಂದು ಕಂಪಿಲನ
ನಂದನನೆಯ್ದಲವನ ರೂಪಿಗೆ ಸೋತು
ಬಂದು ಪಿಡಿದಳು ರತ್ನಾಜಿ ೮೬

ಪಿಡಿಯೆ ಬಿಡಿಸಿಕೊಂಡು ಬರಲವನವಳಂದು
ಕಡುನೊಂದು ಕಯ್ಯ ಬಳೆಗಳ
ಒಡೆದು ತೋಳ್ತೊಡೆಗಳೆಡೆಗಳ ಕೆಡಿಸಿಕೊಂಡು
ಬಿಡದೆ [5]ತೋಱಿ[5]ದಳು ಕಂಪಿಲಗೆ ೮೭

ನೆಲೆಯನಱಿಯದವ ಕೊಲಿಸು ರಾಮನನೆಂದು
ಬಲಿದು ಮಂತ್ರಿಗೆ ಪೇಳಲವನು
ನೆಲಮಾಳಿಗೆಯೊಳಿಟ್ಟವನ ಕೊಲಿಸಿ[6]ದೆ[6]ನೆಂದು
ನೆಲೆಮಾಡಲಾ ಸುದ್ದಿಯನು ೮೮

ಕೇಳಿ ತುರುಕ ದಾಳಿ ಬರಲವನನು ಮಂತ್ರಿ
ಲೀಲೆಯಿಂ [7]ತಂದಾ[7] ಬಲವ
ಕೋಲಾಹಲವ ಮಾಡಿಸಿದನೆಂಬುದು ಕಥಾ
ಮೂಲವಿದನು ನಾನೊಲಿದು ೮೯

---

[1] ನೊಂ (ಐ) [2] ಚರಿ (ಎ) [3] ಚಾರಿತ್ರವ (ಕ) [4] ಲಿ (ಎ ಐ ಗ) [5] ಪೇಳಿ (ಕ ಗ) [6] ದ (ಎ ಗ) [7] ಕರೆತಂದು (ಕ)

ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ
ಪೊಸ ಬಗೆವೆತ್ತಲಂಕೃತಿಯು
ಎಸಕದಿಂ [1]ಬಳೆ[1]ಯಿಸಿ ಕೃತಿಯೆನಿಸುವೆನಿದ
ರಸಿಕರು [2]ಮು[2]ಚ್ಚುವಂದದಲಿ   ೯೦

ಇದು ಪುಣ್ಯಕಥೆಯಲ್ಲಿದು ಪೂರ್ವಚರಿತವ
ಲ್ಲಿದು ಪುರಾಣದೊಳುಕ್ತವಲ್ಲ
ಇದನೆಂತಾಲಿಪೆನೆಂಬ ಸಜ್ಜ[3]ನ[3] ಕೇ
ಳಿದ[4]ಕುತ್ತರವ ಪೇಳುವೆನು[4]   ೯೧

ಕಥೆಯಂತಿರಲೀ ಕೃತಿಯೊಳಿಡಿಕಿಱಿದಿರ್ದ
ಪೃಥುರಸಭಾವಲಂಕೃತಿಯು
ಮಥಿಸಲದಱೊಳು ಲೇಸು[5]ಳ್ಳೊಡೆ[5] ಸಾಲದೆ
ಕಥೆಯ ಕೊಂಡೇನು ಕಾರಣವು   ೯೨

ಕಥೆಯ ವಿಚಾರಿಸಿ ನೋಡಿ[6]ದ[6]ಡಿದು ಪುಣ್ಯ
ಕಥೆಯಲ್ಲದಲ್ಲ ಬೇಱೊಂದು
ಪೃಥುಜಘನದ ನೀಱೆ ಪಿಡಿ[7]ಯಲೊ[7]ಲ್ಲದನ ಸ
ತ್ಕಥನವಿದಱೊಳದಱಿಂದ   ೯೩

ಆವ ಕುಲದಲಿ ಪುಟ್ಟಲಿ ಪರವೆಣ್ಗಳ
ಭಾವಿಸನಾವನವನಿಗೆ
ದೇವರು ಸರಿಯಲ್ಲ ನರಪಶುಗಳ ಬಲು
[8]ದಾ[8]ವಣಿಯವನೆ ಕೇಳವನು   ೯೪

ತರು ಗಿರಿ ಸರಸಿ ಸರಿತ್ಪುರವನಗಳ
[illegible]ರದೆ ವರ್ಣಿಸುವ ಕವಿಗಳು
ಪುರುಷ[9]ರೊ[9]ಳಗೆ ಶೌರ್ಯಾದಿಗುಣಗಳಿರೆ
ತರಹರಿಸುವರೆ ಪೊಗಳದೆ   ೯೫

---

[1] ಬೆಳೆ (ಅ) ಬಳ (ಎ ಗ) ಪರೆ (ಕ) [2] ಮೆ (ಉ ಐ ಕ) [3] ನರು (ಇ ಉ ಐ) [4] ಕುತ್ತರವನುಸುರುವೆನು (ಉ) ಕುಸುರುವೆನುತ್ತರವನು (ಎ ಐ ಗ) [5] ಳ್ಳಡೆ (ಐ ಕ) ಳ್ಳರೆ (ಗ) [6] ದೊ (ಗ) [7] ದಡೊ (ಉ) ದರೊ (ಐ ಕ ಗ) [8] ಧಾ (ಉ) [9] ನೊ (ಐ).

ಪ್ರೀತಿ ಬಂದರೆ ಕೊಂಡುಕೊನರದೆ ಕವಿಕುಲ
ಜಾತಿಗೀತಿಯನೀಕ್ಷಿಸು[1]ವುದೆ[1]
ಮಾತಂಗಿಯನಭಿವರ್ಣಿ[2]ಸಿ[2]ದಾ ಬಾಣ
ಸೈತುವೋದನೆ ಕೇಳ್ದಱಿ[3]ಯು[3] ೯೬

ಈ ತೆಱದಿಂದಾತನನೊಡಬಡಿಸಿ ಸಂ
ಪ್ರೀತಿ ಕೈ[4]ಮಿಾಱೆ[4] ಮೇಳ್ಪಾನು
ಜಾತಿವೀರನ ರಾಮನಾಥನ ಜಗ[5]ವಿ[5]
ಖ್ಯಾತನ ಕಥೆಯ ಪೇಳುವೆನು ೯೭

ಕನಸಿನೊಳಗೆ ಪರವೆಣ್ಣ ಕಂಡಱಿಯದ
ಘನಶುಚಿರತ್ನ ರಾಮುಗನ
ವಿನುತಚರಿತ್ರವನೊರೆವೆನು ಸುಜನರು
ಮನ[6]ವೊಲಿದಿದನಾಲಿಪುದು[6] ೯೮

ಸುರಸುದತಿಯು[7]ರಿಂದ[7]ಯ್ವಡಿರೂಪಿನ ನೀಱೆ
ವಿರಹಾತುರದಿಂದ ಪಿಡಿಯೆ
ಕರಗದೆದೆಯ ವೀರನ ಚರಿತವನಿದ
ನೊರೆವೆ[8]ಲಾ[8]ಲಿಪುದು ಶುಚಿಗಳು ೯೯

ಹರಿಣಿಗೆ [9]ಪಾ[9]ಟಿ ರಂಭೆಗೆ ಸರಿ ಮೇನಕಿ
ಗೊರೆಯು[10]ಹ ಹೆಣ್ಣೊಲ್ದು ಬಂದು[10]
ಕರವ ಹಿಡಿಯೆ ಕರಗದ ಕರಣದ ವೀರ
ನುರುಚರಿತವನುಸುರುವೆನು ೧೦೦

ಧರೆ ಬೆಸಲಾದಂತೆ ಬಂದ ಸು[11]ರ[11]ತ್ರಾಣ
ನುರುಬಲಕಂಜದೆ ನೆರವ
ಕರೆಯದೆ ಕಾದಿ ಕಪರ್ದಿಯ ಕಂಡನ
ಚರಿತವನೊರೆವೆ ನಾನೊಲಿದು ೧೦೧

---

[1] ವರೆ (ಅ ಇ ಕ) [2] ಸ (ಅ ಕ) [3] ಯೆಯು (ಇ ಎ) [4] ಮಿಗೆ (ಎ ಕ ಗ) [5] ಶೀ (ಗ) [6] ದೊಳು ಮಚ್ಚುವಂದದಲಿ (ಎ ಗ) [7] ರಿಗ (ಐ) [8] ನಾ (ಉ ಎ ಗ) [9] ಸಾ (ಅ) [10] ಹೆಣ್ಣೊಲ್ದು ಮೊಂಬಂತೆ (ಎ ಗ) [11] ರು (ಐ)

ವೀರತೆ ಶುಚಿತೆಯೆಂಬೆರಡು ಗುಣಂಗಳ
ಮೇರೆಯ ಮೀಱದೆ ನಡೆದು
ಧಾರಿಣಿಯನು [1]ಮು[1]ಚ್ಚಿಸಿದ ವೀರರಾಮನ
ಚಾರುಚರಿತವ ಪೇಳುವೆನು ೧೦೨

ಇಳೆಗಿಳಿದಚ್ಚರಿಯಂತೆ ಪೆ[2]ಣ್ಪ[2]ರಿಜನಾಂ
ತಲರಂಬಿನಂತೆ ಮೋಹಿಸುವ
ಲಲನಾರತ್ನ ಬಂದಮರ್ದಪ್ಪಲೊಲ್ಲದ
ಕಲಿಯ ಚರಿತವನೊರೆವೆನು ೧೦೩

ನಿಱುಗುರುಳ್ಪೊಱೆನೊಸಲ್ನಿಮಿರ್ದ ಕಣ್ಣಿಡಿವುರ್ಚ
ಮಿಱುಪ ಕದಪು ಮುದ್ದುವೊಗದ
ಸಱಿಮಿಂಡಿ ಪಿಡಿದರೊಲ್ಲದನ ಚರಿತ್ರ[3]ದ[3]
ಹೊ[4]ಱ[4]ಗೆಯನೊಲಿದುಸುರುವೆನು ೧೦೪

ಹರೆಯ ಸೊಬಗು ರೂಪು ರೇಖೆ ಬೆಡಗು ಬಿಂಕ
ಬೆಱಗು ಬಿನ್ನಣ ಜಾಣ್ಮೆಯೆಸೆವ
ತರುಣೀಸೀಮಂತಮಣಿಗೆ ಸೋಲದ ವೀರ
ನುರುಚರಿತವನುಸುರುವೆನು ೧೦೫

*ಕಡಗ ಕಂಕಣ ಸೂಡಗ ಹೊನ್ನಬಳೆ ಬಂದಿ
ಖಡೆಯ ಪೆಂಡೆಯ ದಿ[5]ಟ್ಟಿ[5]ದಂಡೆ
ಬಿಡದೆ ಮೆಱೆವ ಬಿಂಕಗಾರ್ತಿಗೊಲಿಯದನ
ನಡೆಯ ನಾನೊಲಿದುಸುರುವೆನು ೧೦೬

*ಮುಂಗೈಯ ಮುರ್ಿ ಮುರುಡಿಯ ಸರಪಣಿ ನೆಱೆ
ರಂಗು[6]ವ[6]ಡೆದ ಮಾಣಿಕದ
ಉಂಗುರದಿಂದೆಸೆವಂಗನೆಗೊಲಿಯದ
ಭಂಗನ ಕಥೆಯನೊರೆವೆನು ೧೦೭

---

[1] ಮೆ (ಉಎಐಕ) [2] ಣ್ಬ (ಐ) [3] ವ (ಅಇಉಎಗ) [4] ಱ (ಎಐಗ) [5] ಟ್ಟ (ಅಇಉಎಗ) [6] ವೊ (ಅಇಉಎಗ) * ಈ ಪದಗಳು (ಉ) ಪ್ರತಿಯಲ್ಲಿಲ್ಲ.

ಮುತ್ತಿನ ಮೂಗುತಿ ಮುಡಿಕಟ್ಟು ಭುಜಕೀರ್ತಿ
ವೃತ್ತಕುಚದ ನಡುವೆಸೆವ
ಕಸ್ತೂರಿಯಣ್ಬಿನ ಕಾಂತೆಗೊಲಿಯದನ
ವೃತ್ತಾಂತವನುಸುರುವೆನು ೧೦೮

* ಪೊಱವಾಱ ಮೇಲಿರದೊಪ್ಪುವ ರತ್ನದ
ಮಿಱುಪ ಕಾಂಚೀದಾಮದಿಂದ
ಮೆಱೆವ ಮೆಲ್ವೆಣ್ಣು ಮೇಲಿಕ್ಕೆ ಮೆಯ್‌ಮಱೆಯದ
ನೆಱೆಗಲಿಯಿರವನೊರೆವೆನು ೧೦೯

ಮಾಲಿನೀ :—

ವಚಸಿ ಭವತಿ ಸಂಗತ್ಯಾಗಮುದ್ದಿಶ್ಯ ವಾರ್ತಾ
ಶ್ರುತಿಮುಖರಮುಖಾನಾಂ ಕೇವಲಂ ಪಂಡಿತಾನಾಂ
ಜಘನಮರುಣರತ್ನಗ್ರಂಥಿಕಾಂಚೀಕಲಾಪಂ
ಕುವಲಯನಯನಾನಾಂ ಕೋ ವಿಹಾತುಂ ಸಮರ್ಥಃ ೧೧೦

ಎಂದು ಪೇ[1]ಳುವ[1] ನೀತಿನಿಪುಣರ ವಚನವ
ಹಿಂದುಗಳೆ[2]ದ[2] ಶುದ್ಧಶುಚಿಯು
ಸಂದ ಕಥನವನೊರೆವೆನಾನತಿಮುದ
ದಿಂದ ಕೋವಿದರಾಲಿಪುದು ೧೧೧

$ ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೊಂದನೆಯು
ವಿದಿತಾಶ್ವಾಸದೊಳೊಂದನೆಯದು ಸಂಧಿ
ಮೃದುಪದಚಯಸಂಬಂಧಿ ೧೧೨

---

[1] ಳಿದ (ಐ ಕ) [2] ವ (ಅ ಇ ಉ ಕ) * ಈ ಪದ (ಎ ಗ) ಗಳಲ್ಲಿಲ್ಲ
$ ಈ ಪದ (ಅ ಎ ಐ ಗ) ಗಳಲ್ಲಿಲ್ಲ.

# ಎರಡನೆಯ ಸಂಧಿ

## ಕರ್ನಾಟಕ ವರ್ಣನೆ

* ಸೂಚನೆ: ಸಿರಿಯಿಂದ ಸಿಂಗರದಿಂದ ಸೊಬಗಿನಿಂದ
ಕರಮೆಸೆವುದು ಕ[1]ರ್ನಾ[1]ಟ

ಈ ಕಥೆಗಾವುದು ಮೊದಲೆನೆ ತೆರೆಗಳ
ನೂಕುತಾಕಿಂದ ರತ್ನಗಳ
ಆಕರದಿಂದ ನಾನಾಜಲಚರಗಳಿಂ
ದಾ ಕಡಲಿರದೊಪ್ಪುತಿಹುದು ೧

ಕೆಂಬವಳದ ಲತೆಯಿಂದ ಮುತ್ತುಗಳುಱ
ತುಂಬಿದ ಶುಕ್ತಿಗಳಿಂದ
ಕಂಬು ಕಮಠ ನಕ್ರ ಮಕರ ಕರ್ಕಟಕ ಕ
ದಂಬದಿಂದೆಸೆವುದಾ ಜಲಧಿ ೨

ಕಡೆಯಬೇಡಿನ್ನೆನ್ನನೆಂದು ಬೊಮ್ಮಗೆ ಮೊಱೆ
ಯಿಡುವ ಬಲ್ಸರವಿದೆಂಬಂತೆ
ಕಡು ಸೊಗಯಿಪ ಘುಳುಘುಳುರವದಿಂದಾ
ಕಡಲು ಕಣ್ಗೆಸೆದಿರುತಿಹುದು ೩

ನೀರ್ರೀಂಟಿ ಪೋಪ ಕುಡಿಯಲಿರದೆಯ್ತಪ್ಪ
ವಾರಿದಗಳ ವಂಗಡದ
ಆರಭ[2]ಟೀ[2]ವೃತ್ತಿಯಿಂ[3]ದಾ[3] ನೀರ ಭಂ
ಡಾರ ಬೆಡಂಗಾಗಿಹುದು ೪

ಅರುಣಪ್ರವಾಳನಿಕರ[4]ದಿನುತ್ಕಲಿಕಾ[4]
ಭರದಿಂ ಕುಶಚಯದಿಂದ
ತಿರುಗುವ ವನಚರತತಿಯಿಂದಾ ಕಡ
ಲಿರದೆಸೆವುದು ವನದಂತೆ ೫

---

[1] ರ್ನ್ನಾ (ಇ ಉ) ರ್ಣಾ (ಎ ಗ) [2] ಟಿಯ (ಐ) [3] ದಲಿ (ಇ) [4] ದಿಂದುತ್ಕಲಿಕ (ಅ ಎ ಗ) *(ಎ ಗ) ಗಳಲ್ಲಿ ಇಲ್ಲ.

ಆ ಕಡಲುಡೆಯಾದಿಳೆಯ ನಟ್ಟನಡುವೆ ನಿಂ
ದಾಕಾಶವ ಚುಂಬಿಸುತ
ಆ ಕನಕಾಚಲವೆಸೆದಿರ್ಪುದದಱಿದೊಂ
ದಾಕಾರವನೇನನೆಂಬೆ ೬

ಪ[1]ಳೆಗಾಲ[1]ದಂಬರ ಬೀಳದಂತವನಿಗೆ
ನಳಿನಜನೊಲಿದಾಂಕೆಗೊಟ್ಟು
ಕಳಧೌತದ ಕಂಭದಂತೆಸೆದು[2]ದು[2] ವಿಯ
ತ್ತಳವ ಚುಂಬಿಸುತಮರಾದ್ರಿ ೭

ಅಂಬರವೆಂಬ ಸತ್ತಿಗೆಯ ಚಿನ್ನದ ಕಾವಿ
ದೆಂಬಂತೆ ಮೇಘಮಂಡಲವ
ಚುಂಬಿಸು[3]ತ[3]ಮರಾಚಲವೆಸೆದುದು ಕ
ಣ್ಗೊಂಬಾಗಿ ನೋಳ್ಪ ರ[4]ಸಿಕರ[4] ೮

ತಾರಗೆಗಳ್ಮಲ್ಲಿಗೆ ರವಿಶಶಿಗಳ್ಧವ
ಳಾರುಣಕುಸುಮಗಳಾಗೆ
ಮೇರು ಕಣ್ಗೆಸೆದುದು ಮಧುರಿಪು ವಿಧಿಪೂಜಿ
ತೋರುಲಿಂಗಾಕಾರದಂತೆ ೯

ಧರಣಿಯ ಹೊಱಗೆಗೆ ದಿಗ್ಗಜಗಳನಿಕ್ಕಿ
ವಿರಹಿತಾಧಾರಗಗನವ
ಧರಿಸಿ ನಿಂದವನಿಯ ಪೊಂಬೊರೆದಹಿರಾಜ
ನಿರವಿನಂತೆಸೆದುದಾ [5]ವೆಟ್ಟು[5] ೧೦

ಪಚ್ಚೆಯ ಪಾಸಱೆಗಳ ಮೇಲೆ ಪತಿಗಳೊ
ಳ್ಕಿ[6]ಚ್ಚಾ[6]ನೇಹದಿಂ ನೆರೆವ
ಅಚ್ಚರವೆಣ್ಗಳಿಂದಾ ಗಿರಿ ನೋಳ್ಪರಿ
ಗಚ್ಚರಿಯನು ಮಾಡುತಿಹುದು ೧೧

[1] ಳಗಾರ (ಎ) [2] ದ್ಸುರ (ಎಗ) [3] ತಾರಾ (ಎಗ) [4] ಕಣ್ಗೆ (ಎಗ)
[5] ಬೆಟ್ಟ (ಇಐ) ಜಪ್ಪಗವು (ಎಗ) [6] ಚ್ಚಳ (ಉಎಐಗಕ)

ರನ್ನದ ಗುಹೆಗಳೊಳಗೆ ರತಿಕೇಳಿಯಿಂ
ದಂ ನಲಿದೊಡನೊಱಗಿಪ್ಪ
ಕಿನ್ನರಮಿಥುನ ಕಿಂಪುರುಷದಂಪತಿಗಳಿಂ
ಚಿನ್ನದ ಬೆ[1]ಟ್ಟ[1] ಮೆಱೆವುದು　　೧೨

ಸುರತರುವಿನ ತಣ್ನೆಳಲೊಳು ಸುರತದ
ಪರವಶತೆಯೊಳೊಱಗಿರ್ಪ
ಗರುಡಗಂಧರ್ವಯ[2]ಕ್ಷಾಮರಾಂಗನೆ[2]ಯರಿಂ
ಕರಮೆಸೆದಿಹುದಮರಾದ್ರಿ　　೧೩

ಹರಿ ಚಂದನ ಪಾರಿಜಾತ ಮಂದಾರದ
ತರುಚಯದಿಂ ಸಿದ್ಧರಸದ
ಸರಸಿಗಳಿಂದಾ ಗಿರಿ ಗೀರ್ವಾಣರ
ಪುರ[3]ದೊಡನದು[3] ಪುರುಡಿಪುದು　　೧೪

ಹರಿಯರಮನೆ ಹರನಾಡುಂಬೊಲ ಸರ
ಸಿರುಹಸಂಭವನೊಸೆದಿರ್ಪ
ಕರುಮಾಡ[4]ವೆನೆ[4] ಕನಕಾಚಲವದು ಕಣ್ಗೆ
ಕರಮೆಸೆದಿಹುದು ಚೆಲ್ವಿಂದ　　೧೫

ಸುರವಿಟಪಿಗಳನುರಾಗದಿಂದೊಲಿದಿತ್ತ
ಸುರತೋಪಕರಣಗಳಿಂದ
ಸುರವಿಟರಮರವಿಲಾಸಿನಿಯರೊಳಲ್ಲಿ
ಸುರತಕೇಳಿಯೊಳಿರುತಿಹರು　　೧೬

ಹರಿಣಿ ಮೇನಕಿ ರಂಭೆ ಮೊದಲಾದ ಸಗ್ಗದ
ಹರಿಣಲೋಚನೆಯ[5]ರೆ[5]ಯ್ತಂದು
ವರರತ್ನಗುಹೆಗಳೊಳಗೆ ವರಿಸಿದ ಸುರ
ಪುರುಷರೊಳಲ್ಲಿ ಕೂಡಿಹರು　　೧೭

---

[1] ಟ್ಟು (ಉ)　[2] ಕ್ಷಾಂಗನಾಮರಿ (ಅ) ಕ್ಷಮರಾಂಗನೆ (ಇ ಉ ಐ ಕ)
[3] ವನವನು (ಕ) [4] ವದು (ಅ ಉ)　[5] ರ (ಎ ಗ).

ಸುರನದಿಯೊಳ್ಮಿಂದು ಸುರುಕುಜವೊಲಿದಿತ್ತ
ಸುರುಚಿರಾಹಾರವನುಂಡು
ಸುರಸುದತಿಯರೊಡಗೂಡಿ ಸುಖದೊಳಲ್ಲಿ
ಸುರ[1]ಕುಲವಿಹುದನವರತ[1] ೧೮

ವೈಡೂರ್ಯ ಗೋಮೇದಿಕ ಪುಷ್ಯರಾಗದ
ಕೋಡುಗಲ್ಗಳ ಮೇಲೊ[2]ಲಿದು[2]
ಆಡುವ ಪಾಡುವಚ್ಚರವೆಣ್ಗಳಿಂದದು
ನಾಡೆ ಬೆಡಂಗಾಗಿಹುದು ೧೯

ಆ ಮೇರುಗಿರಿಯ ದಕ್ಷಿಣಭಾಗದೊಳಭಿ
ರಾಮ[3]ತೆವಡೆದೆ[3]ಸೆದಿರ್ಪ
ಭೂಮಿಗಳೆಡೆಯೊಳಿರ್ಪುದು ಕ[4]ರ್ನಾ[4]ಟಮ
ಹೀಮಂಡಲ ಗಾಡಿವೆತ್ತು ೨೦

ಕಾವೇರಿಯಿಂದ ಗೋದಾವರಿವರೆ[5]ಗಮಿ[5]
ರ್ದಾ ವಸುಧಾತಳವಳಯು
ಭಾವಿಸೆ ಕ[6]ರ್ನಾ[6]ಟಕಜನಪದವದ
ನಾವನೊಲಿದು ಬಣ್ಣಿಸುವನು ೨೧

ಗ್ರಾಮ ನಗರ ಖೇಡ ಖರ್ವಡ ದುರ್ಗ ದ್ರೋ
ಣಾಮುಖ ಸಂದೋಹದಿಂದ
[7]ಕಾ[7]ಮನಾಡುಂಬೊಲದಂತೆ ಕ[8]ರ್ನಾ[8]ಟಕ
ಭೂಮಿ ಕಣ್ಗೆಸೆದಿರುತಿಹುದು ೨೨

ಭೂರಮೆಯುಟ್ಟೊಲ್ಲದಿಟ್ಟ ದುಕೂಲದ
ಸೀರೆಗಳಂತೆ ಕಂಗೊಳಿಪ
ಭೂರಿನದಿಗಳಾ ಕ[9]ರ್ನಾ[9]ಟಭೂಮಿಯೊ
ಳೋರಂತೆ ಪರಿದೆಸೆದಿಹವು ೨೩

---

[1] ತ ಕೇಳಿಯೊಳಿಹರಲ್ಲಿ (ಎ ಗ) [2] ಲ್ದು (ಎ ಗ) [3] ತೆವೊಡೆದೊ (ಅ) [4] ರ್ನ್ನಾ (ಉ) ರ್ಣ್ಣಾ (ಎ ಗ) [5] ಗದಿ (ಅ) [6] ರ್ಣ್ಣಾ (ಅ ಐ) ರ್ನ್ನಾ (ಇ ಉ ಎ ಗ) [7] ರಾ (ಅ) [8] ರ್ನ್ನಾ (ಇ ಉ) ರ್ಣ್ಣಾ (ಐ) [9] ರ್ಣ್ಣಾ (ಅ ಐ) ರ್ನ್ನಾ (ಇ ಉ ಗ).

ಶರಧಿಯ[1]ನೊಲಿದ[1]ಮರ್ದಪ್ಪಲಾ ತೊಱೆ[2]ವೆಣ್ಣ
ಳಿರದೆ ನೀಡಿದ ಕೈಗಳಂತೆ[2]
ಕರವೆಸೆದಿಪ್ಪವು ಪರಿಕಾಲ್ಗಳಾ ನಾಡ
ಸಿರಿಯನದೇನ ಬಣ್ಣಿಪೆನು ೨೪

ಸುರಗಿ ಸಂಪಗೆ ಸುರಹೊನ್ನೆಗಳಲರ್ವುಡಿ
ವೆರಸಿ ನಲವಿನಿಂದ ಪರಿವ
ಪರಿಕಾಲ್ಗಳ ಪೊನಲಲ್ಲಿ ಕುಂಕುಮರಸ
ದಿರವಿನಂ[3]ತಿ[3]ಹುದು ನೋಳ್ಪರಿಗೆ ೨೫

ನಂದನದಂತೆ ನೋಳ್ಪರ ಕಣ್ಗಳಿಗಾ
ನಂದವನಿರದೆ ಪುಟ್ಟಿಸುತ
ಕುಂದದ ಫಲತತಿಯಿಂದ ಮೆಱೆವ ವನ
ವೃಂದದಿಂದೆಸೆವುದಾ ಭೂಮಿ ೨೬

ನಾರಿಕೇಳಾ[4]ಮ್ರ[4] ಪನಸ ಕದಳಿ ಖ
ರ್ಜೂರ ಚಂದನ ಚಂಪಕಗಳ
ಆರಾಮದಿಂದ [5]ರಂಜಿ[5]ಸುತಿಹುದದು ಕಣ್ಗೆ
[6]ಪಾ[6]ರಣೆಯನು ಪಾಂಥಜನದ ೨೭

ದೇವನದೀಮಾತೃಕೋರ್ವರೆಯಿಂದದು
ದೇವಲೋಕವನೇಳಿಸುತ
ಭೂವನಿತೆಯ ಧಾನ್ಯದಕ್ಷಯನಿಧಿಯಂ
ತಾವಾಗಮೆಸೆದಿರುತಿಹುದು ೨೮

ಅಳಿಯಿಲ್ಲದಂಬುಜ ಅಂಬುಜವಿಲ್ಲದ
ಕೊಳ ಕೊಳನಿಲ್ಲದಾರಾಮ
ವಿಲಸಿತಾರಾಮವಿಲ್ಲದ ಕಾಲೂರ್ಗಳಾ
ಇಳೆಯೊ[7]ಳಿಲ್ಲೆಲ್ಲಿ[7] ನೋಡಿದರು ೨೯

---

[1] ನಿರದ (ಐ) [2] ಕಣ್ಗೆ ಕರವ ನೀಡಿದ ತೆಱನಂತೆ (ಎ ಗ) [3] ತೆಸೆದಿ (ಎ ಗ) [4] ಂಬ್ರ (ಅ) [5] ರಚಿ (ಅ) ರಜಿ (ಐ) [6] ಸಾ (ಇ) [7] ಳೆಲ್ಲಿಲ್ಲ (ಅ) ಳೆಲ್ಲೆಲ್ಲಿ (ಕ).

ಪಲ್ಲವವಿಲ್ಲದ ಮಾವು ಮಾವಿಲ್ಲದ
ಮಲ್ಲಿಗೆ ಮಲ್ಲಿಕಾಲತಿಕೆ
ಯಿಲ್ಲದ ವನ ವನವಿಲ್ಲದ ಭೋಗಿಗ
ಳಿಲ್ಲಾ ದೇಶದೆಡೆಯೊಳು ೩೦

ನಡೆವಕ್ಕಿ ನುಡಿವಕ್ಕಿ ಕೊಳರ್ವಕ್ಕಿ ಪೊಣರ್ವಕ್ಕಿ
ಪಡಿಯರವಕ್ಕಿ ಕೇಳಿಸು[1]ವ[1]
[2]ಗೆ[2]ಡೆವಕ್ಕಿ ಗರಿಗಣ್ವಕ್ಕಿಗಳಾ ನೆಲ
ದೆಡೆಯ ಭುನದೊಳಿರುತಿಹವು ೩೦

ಅಲರ್ದಂಬುಜ[3]ದೊ[3]ಳ್ಳಲರ್ದ ಚೆನ್ನೈದಿಲ
ಕೊಳಗಳ ಶಾಲಿವನಗಳ
ನೆಲೆವನೆಯಾಗಿಹುದೆಲ್ಲ ನೋಡಿದೊಡಾ
ನೆಲನನದೇನ ಬಣ್ಣಿಪೆನು ೩೨

ನಡೆವಂಚೆ ನುಡಿವರಗಿಳಿ ನಲಿದಾಡುವ
ಬೆಡಗಿನ ನವಿಲು ಕೂಗಿಡುವ
ಪಡಿಯರವಕ್ಕಿ ಮೊಱೆವ ಪಱಮೆಗಳೆದೆ
ಗೆಡಿಪವು ಪಥಿಕರನಲ್ಲಿ ೩೩

ಕಡಲುಗಳಾ ನಾಡಸಿರಿಯ [4]ಮೊಗವ[4] ನೋಡೆ
ಬಿಡದೆಯ್ತ[5]ರ್ದುವೆಂ[5]ಬಂತೆ
ಕಡೆಗೋಡಿಗಳಿಂದ ಮೆಱೆವ ಬಲ್ಗೆಱೆಗಳಾ
ಪೊಡವಿಯೊಳೆಸೆದಿರುತಿ[6]ಹವು[6] ೩೪

ಅಗೆವೊಯ್ವ ಕಳೆಗೀಳ್ವ ಬೆಳೆಯ ಬಿಚ್ಚುವ ನೀರ
ಬಗೆಯಱಿದೂಡುವ ಸಸಿಯ
ತೆಗೆವ ನಡುವ [7]ನಗೆಮೊಗದ[7] ಪಾಮರಿಯರ
ಬಗೆ ಬೆಡಗಾಗಿಹುದಲ್ಲಿ ೩೫

---

[1] ತ (ಎ) [2] ನ (ಎಗ) [3] ದು (ಇ) ವು (ಐ) [4] ಸೊಬಗ (ಉ) [5] ದುದೆಂ (ಅ) ದವೆಂ (ಇ ಐ) ದರೆಂ (ಕ) [6] ಹುದು (ಎ ಗ) [7] ಮನುಜರ (ಐ).

ಮುಡಿಯಲೆವುತ ಕುಚ ಕುಣಿವುತ [1]ನಡೆ[1] ತಡ
ಬಡಿಸುತ ಗೊಲ್ಲವೆಣ್ಣುಗಳು
ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲ
ಮಡಿಗಳಿಗಿಳಿವ ಗಿಳಿಗಳ ೩೬

*ಬೆಳೆಗೆಱಗುವ ಗಿಳಿಗಳ ಬೆದಱಿಸಲೆಂದು
ತಳುವದೆ ನೋಳ್ಪ ಗೋಪಿಯರ
ತೊಳಪ ಕಣ್ಗದಿರ ಬೆಳ್ವಲೆಗಳೆಂದವು ಮಡಿ
ಗಿಳಿಯಲಮ್ಮದೆ ಬಾನೊಳಿಹವು ೩೭

ಗಿಳಿಯ ಸೋಹುವ ಗೊಲ್ಲಾಂಗನೆಯರ ನೆಲೆ
ಮೊಲೆವೆಟ್ಟ[2]ನಿಟ್ಟ[2]ಡೆಯೊಳಗೆ
ತಳುವದಂಗಜ ಚೋರ[3]ನಾ[3]ಗಿ ಪಾಂಥರ ತಲೆ
ಕೆಳಗಾಗಿ[4]ಸು[4]ತ್ತಿಹನಲ್ಲಿ ೩೮

*ಆರವೆ ಪರಿಕಾಲ್ಗಳಱವಟ್ಟಿಗೆಗಳತಿ
ಚಾರುಕುಸುಮ ಶಾಕ[5]ಟ[5]ಗಳ
ಭೂರಿವಾಟಿಗಳೆಸೆದಿಹವಾ ಜನಪದ
ದೂರೂರ ದಾರಿದಾರಿಯೊಳು ೩೯

ಅಱವಟ್ಟಿಗೆಯೊಳು ನೀರೆಱೆವ ನೀಱೆಯರ ಕ
ಣ್ಣಱಮೆಗಳ್ಪಥಿಕರೆರ್ದೆಗಳ
ಕೋ[6]ಱೆ[6]ದಲರ್ಗಣೆಗ[7]ಳಗ[7]ವರಂತರಂಗವ
ಗುಱಿ ಮಾಡುತಿಹರಲ್ಲಿ ಬಿಡದೆ ೪೦

ತೊಲಗೆ ನೀರಾಸೆ ತೊಲಗದೆ ನೀರೆಱೆವಾ
ಲಲನೆಯ[8]ರಾಸೆ ಬಟ್ಟೆಗರು[8]
ಸಲೆ ನೋಡುತವರ ನೀರೀಂಟುತಿಹರು ಘಟ
ಜಲ ಮುಗಿವನ್ನೆವರಲ್ಲಿ ೪೧

---

[1] ನುಡಿ (ಇ) [2] ಟ್ಟೆ (ಎ ಐ ಗ) [3] ತಾಂ (ಎ ಗ) [4] ಪು (ಎ ಗ) [5] ವಾಟಿ (ಐ) ಟಿ (ಎ ಕ ಗ) [6] ರ (ಅ ಇ ಉ ಎ ಗ) [7] ಳಂತ (ಅ ಇ ಐ) [8] ರಾಸೆವ ಟ್ಟೆವರ (ಐ) * ಈ ಪದಗಳು (ಉ) ಪ್ರತಿಯುಲ್ಲಿಲ್ಲ.

ನಸುನಗೆ ನಱುನಾಣು ನೆಲೆವೊಲೆ ನಳಿತೋಳು
ಮಿಸುಪ ಕಣ್ಸೆ[1]ಗ[1]ಹಿದ ಕಳಸ
ಪೊಸದೇ[2]ಸಿ[2]ವಡೆಯೆ ನೀರೆಱೆವ ನೀಱೆಯರು ಕ
ಣ್ಗೆಸೆದಿಹರಲ್ಲಿ ಪಥಿಕರ ೪೨

ನುಡಿಯಿಂದ ಕಿವಿಗಮೃತವನಿರದೆಱೆವುತ
ಕೊಡನೆತ್ತಿ ಕೋಮಲಾಂಗಿಯರು
ಒಡನೆ ನೀರೆಱೆವುತಿಹರು ಬೞ್ಕೆಗ[3]ರಿಗ[3]ಲ್ಲ
ಬಿಡದೆ ಬೀಱುತ ಬೇಟಗಳನು ೪೩

*ಹಳ್ಳಿಗರಾ ನೀರೆಱೆವ ನೀಱೆಯರ ಪೊಂ
ಬಳ್ಳಿಮೈಗಂಡು ವಿರಹದ
ತಳ್ಳಂಕದಿಂ ಮೆಯ್ಮಱೆದು ಬಿ[4]ಳ್ದು[4] ನೋಳ್ಪರ
ಘೊಳ್ಳೆಂದು ನಗಿಸುವರಲ್ಲ ೪೪

ಅಂಗಜನೃಪಗೆ ಪಟ್ಟಾಭಿಷೇಕವ ಮಾಳ್ಪ
ಭಂಗಿಯನಂಗೀಕರಿಸಿ
ಅಂಗನೆಯರು ಪೂ[5]ರ್ಣ[5]ಕಳಸಗಳೆತ್ತಿ ಬೆ
ಡಂಗಿನಿಂ ನಿಂದಿಹರಲ್ಲಿ ೪೫

ಕಳಸವನೆತ್ತಿ ನೀರೆಱೆವೆಳೆವ[6]ರ[6]ಯದ
ಕಳಸಕುಚೆಯರಿಗೆ ಸೋಲ್ತು
ಎಳಸದೆ ನೀರ್ಗೆ ಪಥಿಕರಂಗಜಾಗ್ನಿಯಿಂ
ದಳವುಗೆಟ್ಟಲ್ಲಿ ನಿಂದಿಹರು ೪೬

*ಬಗೆಯೊಳೊಗೆದ ಬೇಟ[7]ದಗೆಗೆ[7] ನೀ[8]ರ್ದ[8]ಳಿವಂತೆ
ಮೃಗನೇತ್ರೆಯರು ಪಥಿಕರ್ಗೆ
ನಗುತ ನೀರೆಱೆವುತಿಹರು ವಿರಹಾಗ್ನಿಯಿಂ
[9]ದ[9]ಗೆ ಪೆರ್ಚಲೆದೆಯೊಳವರಿಗೆ ೪೭

---

1 ಸ (ಇ ಉ ಐ ಕ) 2 ಸಿ (ಎ ಐ ಗ) 3 ರ (ಉ) 4 ದ್ದು (ಐ) 5 ರ್ಣ (ಅ ಇ ಉ ಎ ಗ) 6 ರೆ (ಐ) 7 ದ (ಅ) ಬೇಗೆಗೆ (ಇ) ಬಗೆಗೆ (ಐ) 8 ರ್ದ (ಐ) 9 ಡ (ಅ) * ಈ ಪದಗಳು (ಉ) ಪ್ರತಿಯಲ್ಲಿಲ್ಲ.

ಹೃದಯದೊಳಿರ್ದಂಗಜಾಗ್ನಿಯು ಕೆಡಿಪಂತೆ
ಮದವತಿಯರು ಪರಿಪರಿದು
ಮುದದಿಂದ ನೀರನೆಱೆವುತಿಹರಲ್ಲ ಬಂ
ದೊದ[1]ವಿ[1]ದ ಪಥಿಕನಿಕರಕೆ　　　　೪೮

ತಿಂಗಳ ತಣ್ಗದಿರ್ದೊಂಗಲೀಂಟುವ ಚಕೋ
ರಂಗಳಂತಲ್ಲ ಪಥಿಕರು
ಅಂಗನೆಯರ ಮೊಗಗೆಲದಿಂದ ಬಹ ಕಳ
ಸಂಗಳ ನೀರನೀಂ[2]ಟುವ[2]ರು　　　　೪೯

ನೀರನೆಱೆವ ನೀಱೆಯರ ಲಾವಣ್ಯಾಂಬು
ಪೂರವ ದಾಂಟಲಱಿಯದೆ
ದಾರಿಗರಲ್ಲಿಯೆ ನಿಂದು ಸ್ವೈವೆಱಗಾಗಿ
ಸೇರಿ ನಿಟ್ಟಿಸುತಿಹರ[3]ಲ್ಲಿ[3]　　　　೫೦

*ಕುಡಿದ ನೀರವರನುಳಿದು ಪೋಗದಂತವ
ರ್ಗೊಡನೆ ಕುಡಿದ [4]ಬಳಿನೀರ್ಗೆ[4]
ಪಡಿಯಾಗೆ ಪಥಿಕರಲ್ಲಿಂ ತೆರಳದೆ ನಿಂದು
ತಡೆಯದಿಟ್ಟಿಸುತಿಹರವರ　　　　೫೧

ಕಟ್ಟೆಂಬ ನುಡಿ ಮುಡಿಯೊಳಗಾಚಾರದ
ಬಟ್ಟೆಯೊಳಾಜ್ಞೆಯೆಡೆಯೊಳು
ಪುಟ್ಟಿಹುದಲ್ಲದಾ ನಾಡೊಳದನು ಬಾಯ
ಬಿಟ್ಟು ನುಡಿವರಲ್ಲಿಲ್ಲ　　　　೫೨

*ಮುಡಿಯೆಂಬ ಮಾತು ಸಂಖ್ಯಾವಾಚಿಗಳ ಕಟ್ಟ
ಕಡೆಯೊಳು ಶಾಕವಾಟಿಯೊಳು
ತಡೆಯದೆ ರಜಕರೊಳಲ್ಲದಾ ಜನಪದ
ದೆಡೆಯೊ[5]ಳಿಲ್ಲೆಲ್ಲಿ[5] ನೋಡಿದರು　　　　೫೩

---

[1] ಗಿ (ಇ)　[2] ಟಿದ (ಗ)　[3] ವರ (ಅ ಇ ಉ ಐ ಕ)　[4] ಬಳಲಕೆಯ (ಎ ಗ)
[5] ಳೆಲ್ಲಿಲ್ಲಿ (ಅ) ಳೆಲ್ಲೆಲ್ಲಿ (ಐ)　* ಈ ಪದಗಳು (ಉ) ಪ್ರತಿಯಲ್ಲಿಲ್ಲ.

*ಪೊಡೆಯೆಂಬ ನುಡಿ ಶಾಲಿವನದೊಳುದರದೊಳು
ತಡೆಯದೆಯ್ದಿಪ ಗೋಕುಲದೊಳು
ಬಿಡದೆ ವರ್ತಿಸುತಿಹುದಲ್ಲದಾ ಮಾತನು
ನುಡಿವರಿಲ್ಲಾ ದೇಶದೊಳಗೆ ೫೪

ಪಿಡಿಯೆಂಬ ನುಡಿ ಕರಿಣಿಯೊಳು ಖಡ್ಗದ ಮೊದ
ಲೆಡೆಯೊಳಲ್ಲದೆ ವಸ್ತುವನು
ಕೊಡುವೆಡೆಯೊಳಗಲ್ಲದಾ ಜನಪದವನ
ದಡರಲವ್ಮದು ಪೇಳ್ವೆನೇನ ೫೫

ಎಳೆಯೆಂಬ ವಾಚಕ ನೂಲೊಳವನಿಯೊಳು
ಹೊಳೆಯೆಂಬ ಮಾತು ನದಿಯೊಳು
ತಳುವ[1]ದೆ[1] ಬೇಟೆಯು [2]ಭೇದದೊ[2]ಳಲ್ಲದಾ
ಇಳೆಯೊ[3]ಳಲ್ಲೆಲ್ಲಿ[3] ಭಾವಿಸಲು ೫೬

ಬೇಡೆಂಬ ನುಡಿ ಬಿಯದರೊಳು ವಿತರಣದೊ
ಳ್ಕೋಡೆಂಬ ಮಾತರಣ್ಯದೊಳು
ಕಾಡೆಂಬ ವಾಚಕವಲ್ಲದಾ ನಾಡೊಳ
ಗಾಡುವರಿಲ್ಲದನೊಲಿದು ೫೭

ಗಡೆಯೆಂಬ ನುಡಿ ಜೂ[4]ದು[4]ಗಾಱರೊಳ್ಕಡೆಯೆಂಬ
ಬಿಡುನುಡಿ ದಧಿ ಮಥನದೊಳು
ಕೊಡನೆಂಬ ನುಡಿ ನೀ[5]ರ ತೊಳ್ತಿನೊ[5]ಳಲ್ಲದಾ
ಪೊಡವಿಯ ಮನುಜರೊಳಿಲ್ಲ ೫೮

ನಿಱುಗುರುಳೆಳೆವೆಱೆನೊಸಲು ಕೊಂಕಿದ ಪುರ್ಬು
ತುಱುಗೆವೆಗಣ್ಪೊಂಗಿ ಬೆಳೆದ
ಪೋಱವಾಱಸಿಯ ನಡು ಪೆರ್ಮೊಲೆ ರಾಜಿಸೆ
ಮೆಱೆವರಾ ನಾಡ [6]ನೀಱೆ[6]ಯರು ೫೯

---

[1] ದಾ (ಐ) [2] ಬೇಡರೊ (ಐ) [3] ಳೆಲ್ಲೆಲ್ಲಿ (ಎ ಗ) [4] ಜು (ಇ ಉ ಎ ಗ)
[5] ರದ ಪಾತ್ರದೊ (ಇ) ರುಪಾತ್ರದೊ (ಐ) [6] ಬಲೆ (ಅ) ನಾರಿ (ಉ ಎ ಗ)
* ಈ ಪದ (ಎ ಗ) ಗಳಲ್ಲಿಲ್ಲ.

ಎರೆವ ಮರಲ್ವ ಮುನಿವ ಮುದ್ದಿಸುವ ಕಾ
ತರಿಸುವ ರತಿಕೇಳಿಯಿಂದ
ಇರದೆ ನಲ್ಲರನೊಲಿಸುವ ಬಗೆಯಾ ನಾಡ
ತರುಣಿಯರೊಳಗೊಪ್ಪುತಿ[1]ಹುದು[1] ೬೦

ತೋರದುಱುಬು ತೊಂಡೆವಾಯ್ದೆಱೆ ಮುಗುಳ್ನಗೆ
ಮೇರೆಯ[2]ಱಿದ[2] ಮೆಲ್ಮಾತು
ಓರೆವೋಗದ ಜಾಣ್ಮೆ ಮೆಱೆಯಲಲ್ಲಿಯ ಪೆಂಡಿ
ರೋರಂತೆ ಕಣ್ಗೆಸೆದಿಹರು ೬೧

ಮುನಿಸು ಮೋಹನ ಮುದ್ದು ಲಲ್ಲೆ ಬೆಡಗು ಬೇಟ
ತನಿಸೊಕ್ಕು ತವಕ ತಳ್ಳಂಕ
ಇನಿವಾತು ದಣಿವಿಲ್ಲದ ಕೂಟವಾ ನಾಡ
ವನಿತೆಯರೊಳಗೆ[3]ಸೆದಿಹುದು[3] ೬೨

ಕಡೆಗಣ್ಣ ನೋಟದಿಂ ಕಾವನ ಕಣೆಗಳ
ಕಡೆಗೆ ಸಾರೆಂಬ ನೀಱೆಯರ
ಗಡಣವಲ್ಲದೆ ನೋಡೆ ಜಡವೆಣ್ಣಳಾ ನಾ
ಡೆಡೆಯೊ[4]ಳಿಲ್ಲೇನ ಬಣ್ಣಿಪೆನು[4] ೬೩

ಸರಸಸಾಹಿತ್ಯ ಸಂಗೀತ ಕಲಾಪ್ರೌಢಿ
ಹರೆಯ ರೂಪುಳ್ಳ ಜಾಣರಿಗೆ
ಹರಣವನೀವ ನೀಱೆಯರಲ್ಲದಱಿಯದ
ತರುಣಿಯರಾ ನಾಡೊಳಿಲ್ಲ ೬೪

ವೀರರಲ್ಲದೆ ಹಂದೆಗಳು ವಿತರಣಗುಣ
ಶೂರರಲ್ಲದೆ ಲೋಭಿಗಳು
ಸಾರಗುಣಗ್ರಾಹಿ ರಸಿಕರಲ್ಲದೆ ದುರ್ವಿ
ಕಾರಿಗಳಿಲ್ಲಾ ನೆಲದೊಳು ೬೫

---

[1] ಹವು (ಎ ಐ ಗ) [2] ಱಿವ (ಅ) ಳಿದ (ಇ ಐ) ಳಿಯದ (ಎ ಗ) [3] ಸಂದಿಹವು (ಉ) ಸೆದಿಹವು (ಐ) [4] ಳೆಲ್ಲೆಲ್ಲಿ ನೋಡಿದರು (ಇ).

ಆಡುವರಿಲ್ಲನೃತವನಾಜಿರಂಗದೊ
ಳೋಡುವರಿಲ್ಲೆರೆದುದನು
ಕೂಡೆ ಕೊಡದರಿಲ್ಲಾ ನಾಡ ಮನುಜರ
ಗಾಡಿಯ[1]ನೇನ[1] ಬಣ್ಣಿಪೆನು ೬೬

ಆ ನಾಡ ನಡುವೆ ಭೂಸತಿಯ ಕುಂತಣದಂತೆ
ತಾನುಱೆ [2]ಕಣ್ಗೊಪ್ಪುತಿಹುದು[2]
ಮಾನಿತ ಕುಂತಣಜನಪದ ಸಿರಿಯಿಂ
ದಾ ನಾಕವನೇಳಿಸುತಾ ೬೭

ಕಱೆಯೆಂಬ ನುಡಿ ತುಱುಗಾರ್ತಿಯರೊಳು ತುಂಬು
ವೆಱೆಯೊಳು ಮಱೆವೆಯು [3]ನುಡಿಯ[3]
ಕುಱುಹು ಸುಪ್ತಿಯೊಳು ಸುರತದ ಕಡೆಯೊಳಲ್ಲ
ದಱಿಸಿದೊಡಾ ನಾಡೊಳಿಲ್ಲ ೬೮

ವಡೆಯೆಂಬ ನುಡಿ ಭಕ್ಷ್ಯಭೇದದೊಳಗೆ ಕಯ್ಯ
ಪಿಡಿಯೆಂಬ ನುಡಿ ಮದುವೆಯೊಳು
ತಡೆಯೆಂಬ ನುಡಿ ಪಾವಡಿಗರೊಳಲ್ಲದಾ
ಪೊಡವಿಯೊಳಿಲ್ಲ ಭಾವಿಸಲು ೬೯

ಕೊಯ್ಯೆಂಬ ನುಡಿ ಕೊಬ್ಬಿ ಬೆಳೆದೊಱಗಿದ ಬೆಳೆ
ಗೆಯ್ಯೊಳಂಗಜಕೇಳಿಯೊಳು
ಮೆಯ್ಯನೊಪ್ಪಿಸಿದೆಳೆವೆಂಡಿರೊಳಲ್ಲದಾ
ರಯ್ಯಲಿಲ್ಲಾ ನಾಡೊಳಗೆ ೭೦

ಬಡತನವೆಂಬುದು ಲತೆಯೊಳಂಗನೆಯರ
ನಡುವಿನೊಳಗೆ ಕೊಂಕೆಂಬ
ನುಡಿ ಸತಿಯರ ಪುರ್ಬಿನೊಳಗಾ ಪ್ರಸ್ತಾರ
ದೆಡೆಯೊಳಲ್ಲದೆ ನಾಡೊಳಿಲ್ಲ ೭೧

[1] ನೆನಸು (ಅ) [2] ಕಣ್ಗೊಳಿಸಿಹುದು (ಇ ಎ ಗ) ಕಣ್ಗೊಳಿಸಿವುದು (ಐ)
[3] ಮಾತು (ಎ ಗ).

*ಇಡಿಕಿಱಿದಿರ್ದುಪವನಗಳಿಂ ಪೆರ್ವಡು
ವಿಡಿದು ಕಣ್ಗೆಸೆವ ಕೆಱೆಗಳ
ಗಡಣದಿಂದುಕ್ಕುಂದೊಱೆಗಳಿಂದಾ ನಾಡು
ಕಡುರಯ್ಯವಾಗಿರುತಿಹುದು ೭೨

ಊರೂರ್ಗೆ ಮೆಱೆವ ದೇವಾಲಯಕೋಟಿಯಿಂ
ದೂರೂರ್ಗೆ ಕಡುರಯ್ಯವಾದ
ಆರಾಮಸಂದೋಹದಿಂದಾ ನಾಡೊಳು
[1]ದಾರಿ ಸವೆಯದು ಪಾಂಥರಿಗೆ[1] ೭೩

ಶ್ರೀಕೈಲಾಸ ಕೇತಾರ ಕಾಂಚೀಪುರ
ಗೋಕರ್ಣಗಳನೇಳಿಸುತ
ಲೋಕವಿನುತ ಪಂಪಾಕ್ಷೇತ್ರಮಿಪ್ಪುದ
ನೇಕಮಹಿಮೆಯಿಂದಲ್ಲಿ ೭೪

ಪಾವನ ತೀರ್ಥಗಳಿಂದ ಋಷಿಗಳ ತ
ಪೋವನರಾಜಿಗಳಿಂದ
ಆವೆಡೆಯೊಳು ನೋಳ್ಪೊಡಾ ಪಂಪಾಕ್ಷೇತ್ರ
ತೀವಿ ಕಣ್ಗೆಸೆದಿರುತಿಹುದು ೭೫

§ ಇರದೆ ನೆನೆಯೆ ತನ್ನ ತನ್ನ ವಿಲೋಮದಿಂ
ಕರೆಯಲೊಗೆದ ವಾಚಕದ
ಬರವ ನಿಲಿಪುದೆನೆ [2]ಪಂ[2]ಪೆಯ ಮಹಿಮೆಯೊಂ
ದಿರವನದೇನ ಬಣ್ಣಿಪೆನು ೭೬

ನೆನೆಯೆ ಪೋಪುದು ಪಾಪ ಪೋಪೆನೆಂದಡೆ ಪುಣ್ಯ
ನನೆಕೊನೆ[3]ವೋ[3]ದಪುದೆನಲು
ಅನಿತಿನಿತೆಂದು ಪಂಪಾಕ್ಷೇತ್ರಮಹಿಮೆಯ
ನನುವದಿಸುವನೆಗ್ಗನಲ್ತೆ ೭೭

---

[1] ಕಡುರಯ್ಯವಾಗಿರುತಿಹುದು (ಉ ಗ) [2] ಹಂ (ಅ ಇ ಉ ಕ) [3] ಯಾ (ಉ)
★ ಈ ಪದ (ಉ) ಪ್ರತಿಯಲ್ಲಿಲ್ಲ § ಈ ಪದ (ಎ ಗ) ಪ್ರತಿಗಳಲ್ಲಿಲ್ಲ.



ಫೇನ ತರಂಗಾವರ್ತ ಕರ್ಕಟಕ ಪಾ
ಠೀನ ಕಮಠಕುಲದಿಂದ
ತಾನುಱೆ ಕಣ್ಗೆಸೆದಿಹುದಲ್ಲಿ ತುಂಗಭ
ದ್ರಾನದಿ ಕಡುಚೆಲ್ವುವಡೆದು ೨೮

ಎಳೆಮಿಾನೆಣೆವಕ್ಕಿ ತಾವರೆ ನೈದಿಲು
ಪುಳಿಲೊಟ್ಟಿಲಂಗದ ಕಾಂತಿ
ಮೊಲೆ ಮೊಗ ಕಣ್ಪೊಱವಾಱಾಗಲಾ ನದಿ
[1]ಯೊಲಿ[1]ಸಿದುದೊಳ್ವೆಣ್ಣಿನಂತೆ ೨೯

ಮಡುವಿಂದ ಬಾಂಗುಱೆ ನೆಗೆವೆಳೆಮಿಾನ್ಗಳ
ಗಡಣದಿಂದಾ ನದಿಯೆಂಬ
ಮಡದಿ ಮುದದೊಳಾಡುವಣ್ಣೆಕಲ್ಲಂತೆ ಕ
ಣ್ಗೊಡ[2]ನೊ[2]ಸೆದುದು ನೋಟಕರ ೩೦

*ಬೆಳದಾವರೆಯು ಕನ್ನೈದಿಲ ಸಾಲ್ಗಳ
ನಳನಳಿಸುವ ಕಾಂತಿಗಳ
ಪೊಳಪಿಂದ ಗಂಗೆಜಗುನೆಗಳ ಕೂಟ[3]ದಂ
ತೆ[3]ಳಸಿಹುದಾ ನದಿ ಕಣ್ಗೆ ೩೧

ರಾಯಂಚೆ ಪೊಣರ್ವಕ್ಕಿಗಳೆಡೆಯಾಟದ
ರಾಯಬೀದಿಯೊ ತುಂಬಿಗಳ
ಲಾಯವೊ ಪೇಳೆನಲಾ ತುಂಗಭದ್ರೆ ವಿ
ಡಾಯವೆತ್ತೆಸೆ[4]ದು[4]ದು ಕಣ್ಗೆ ೩೨

ತಡಿವಿಡಿದಿರ್ದ ತಪೋ[5]ಧ[5]ನಾಶ್ರಮಗಳಿಂ
ಬಿಡದೆ ಮೆಱೆವ ತೀರ್ಥಗಳ
ಗಡಣದಿಂದಾ ತುಂಗಭದ್ರಾನದಿ ಕಣ್ಗೆ
ಕಡುಚೆ[6]ಲ್ವುವಡೆದಿ[6]ರುತಿಹುದು ೩೩

---

[1] ಯೊಳೆ (ಎ ಗ) [2] ನೆ (ಇ ಎ ಐ ಕ ಗ) [3] ದಿಂದೆ (ಅ ಉ) [4] ವು (ಐ)
[5] ವ (ಉ) [6] ಲುವೆಸೆದಿ (ಅ) ಲ್ವಾಗಿ (ಉ) * ಈ ಪದ (ಉ) ಪ್ರತಿಯಲ್ಲಿಲ್ಲ.

ಈ ತೆಱದಿಂದ ಪಂಪಾಕ್ಷೇತ್ರದೊಳೊಪ್ಪು
ವಾ ತುಂಗಭದ್ರೆಯೊತ್ತಿನೊಳು
ಭೂತಳವಿನುತ ಮನ್ಮಥಕುಂಡಮೆಂಬ ಕಂ
ಜಾತಾಕರಮೆಸೆದಿಹುದು   ೮೪

ಇಂದುಧರನ ಮುಖಕಮಲದಿಂದೊಗೆದರ
ವಿಂದಗಳಿಗೆ ನೆಲೆಯಾಗಿ
ಕುಂದದೆ ಹೆ[1]ಚ್ಚದಾ[1] ಕೊಳ ನೋಳ್ಪರ ಕಣ್ಗೆ
ವಂದಿಹುದೇನೆಂಬೆನದನು   ೮೫

ತೆರೆ ವೆಟ್ಟು ಬೆಳ್ದಾವರೆ ನೊರೆ ನೈದಿಲು
ವರಶಂಖ ರಾಯಂಚೆಗಳ
ಚರಣ ಪವಳಲತೆಯಾಗಲಾ ಸರಸಿ ಕ
ಣ್ಗಿರದೆಸೆದುದು ಕಡಲಂತೆ   ೮೬

ಪುದಿದೊಡವೆಳೆದ ಕಮಲಕುವಲಯಗ[2]ಳ[2]
ಹೊದಱುಡೆಯೊಳು ಪರಿದಿಪ್ಪ
ಉದಕದಿಂದದು ಬಿಂಜದಡವಿಯುನಿರದೆ[3]ಪೊ
ಕ್ಕು[3]ದಧಿಯಂತೆಸೆದುದು ಕಣ್ಗೆ   ೮೭

ತಿಂಗಳ [4]ತಣ್ಗ[4]ದಿರ್ದೊಂಗಲಿಪ್ಪೆಡೆಯೊ ಮೇ
ಲಿಂಗಡಲಿಂದುಶೇಖರನ
ಪಿಂಗದೆ ನೋಡಲ್ಕೈತಂದುದೊ [5]ಪೇಳೆ[5]ನೆ
ಮಂಗಲವಾದುದಾ ಸರಸಿ   ೮೮

ಕುಳಿರ್ವಾರ್ ಸರಸಿಯ ನೈದಿಲು ನೇಸಱ
[6]ಬೆಳಗ[6] ಚಂದ್ರಾತಪವೆಂದು
ತಿಳಿದು ಪಗಲೊಳೆಲೆದುಱುಗಲೊಳಲರ್ದು ಕಂ
ಗೊಳಿಸಿಹುದಾ ಕೊ[7]ಳದೊ[7]ಳಗೆ   ೮೯

[1] ಚ್ಚುವ (ಏ ಗ) [2] ಳಿಂ (ಅ) [3] ಪೋಲ್ತ (ಉ) [4] ತೊಂಗ (ಅ ಇ) ತಂಗ (ಐ) [5] ನೋಡೆ (ಉ) [6] ಬೆಳಗಳ (ಅ) ಬೆಳಬೆಳ (ಕ) [7] ಳನೊ (ಇ ಉ ಐ) ಣನೊ (ಕ).

ತುಱುಗಿದ ತಾವರೆಯೆಲೆಯಾಲ ಕನ್ನೈದಿಲ್
ಕಱೆ ಕೊಳರ್ವಕ್ಕಿ ಹರಿಣನ
ತೆಱನಾಗಲಾ ಬಟ್ಟಿತಪ್ಪ ಬಲ್ಗೊಳನದು
ಮೆಱೆದುದು ಶಶಿಬಿಂಬದಂತೆ ೬೦

ಮಂದರವನು ಕಿತ್ತೆಡೆಯೊ [1]ಬಿಲ್ಗ ಮೇ[1]ರುವ
ತಂದ ತಾಣವೊ ಕೂರ್ಮನಿಳೆಗೆ
ಬಂದೆಡೆಯಾಡುವ ಬಟ್ಟೆಯೊ ಎನಲದು
ಬಂದುದಗಾಧದಿಂ ಕಣ್ಗೆ ೬೧

ಕೊಳರ್ವಕ್ಕಿಗಳ [2]ಕೊಟ್ಟ[2] ತುಂಬಿಯ ತುರುಪ[3]ಟ್ಟ[3]
ಕಳಹಂಸೆಗಳ ಕಾಳೆಗದ
ಕಳನೆಣೆವಕ್ಕಿಗಳೆಡೆಯೆನಲಾ ಪೂ
ಗೊಳನೆಸೆದುದು ಕಣ್ಗಳಿಗೆ ೬೨

ಹೊರೆಯ ಗಿರಿಯು ನೆಳಲಾ ವಜ್ರಿಯ ಭಯ
ಭರದಿಂದ ನಗಗಳೆಯ್ತಂದು
ಶರನಿಧಿಯೆಂದೊಳಪೊಕ್ಕವೊಲೆಸೆದವಾ
ಸರಸಿಯ ನಡುನೀರೊಳಗೆ ೬೩

ಪ್ರತಿಬಿಂಬದ ನೆವದಿಂದ ಸೂರ್ಯಾತಪ
ಹತಿಗಂಜಿ ವನಮೆ ಪೊಕ್ಕಂತೆ
ಅತಿಚೆಲ್ವುವಡೆದಿರ್ದುದಾ ಕೊಳನೊಳು ತರು
[4]ವಿತತಿಯ[4] ತುಱುಗಿದ ನೆಳಲು ೬೪

ಮುಸಗಿದ ತೆರೆಗಳ ಚವರಗಳಿಂದಲ
ರ್ದೆಸೆವ ಬಿಳಿಯ ತಾವರೆಗಳ
ಪೊಸ ಸತ್ತಿಗೆಗಳಿಂ [5]ರಾಜಿಸುವ[5] ರಾಯಂಚೆಯ
ವಿಸರದಿಂ ಮೆಱೆವುದಾ ಸರಸಿ ೬೫

---

[1] ಬಲ್ಮೇ (ಎ ಗ) [2] ಕೊಟ್ಟಿ (ಉ ಐ) ತೋಟ (ಎ ಗ) [3] ಟ್ಟೆ (ಇ ಉ ಎ ಗ) [4] ತತಿಗಳ (ಎ ಗ) [5] ರಂಜಿಪ (ಉ).

ತೆಳುವಚ್ಚವಟ್ಟಲೊಳಿರ್ಪ ಶಂಖಗಳಂ
ತೆಲೆವಿಡುಕದ ತಾವರೆಯ
ಎಲೆಯೊಳೊಱಗಿ ನಿದ್ರೆಗೆಯ್ವ ರಾಯಂಚೆಯ
ಬಳಗದಿಂದದು ಕಣ್ಗೊಳಿಪುದು ೯೬

ಪಸುರ್ವಟ್ಟೆವುಟ್ಟು ಕರಿಯ ಝಲ್ಲಿ ಕಟ್ಟಿದ
ಮಿಸುನಿವಟ್ಟಲ ಸಿಂಧದಂತೆ
ಮಿಸುಪೆಲೆ ಮುಸುಕಿದ ತುಂಬಿ[1]ಯಿಂದ[1]ಲ್ಲಿ ಕ
ಣ್ಗೆಸೆದವು ಹೊಂದಾವರೆಗಳು ೯೭

ಪರಕಲಿಸಿರ್ದ ನೀರ್ವನಿಗಳಿಂದೆಸೆದವು
ಸರಸಿಜದೆಲೆಗಳು ನಳಿನಿ
ಪರಪಿ ಮುತ್ತುಗಳ ಪಚ್ಚೆಯ ಪರಿಯಣದೊಳು
ಪರಿಕಿಪಂತಾ ಸರಸಿಯೊಳು ೯೮

ಕ್ಷೀರನೀರಾಕರದಂತೆ ಬಾನಂತೆ ಕಾಂ
ತಾರದಂತಾ ಕಾಸಾರ
ಆರಯ್ಯೆ ಕಮ[2]ಲಾ[2]ವಾಸತೆಯಿಂ [3]ಕ[3]
ಣ್ಗೋರಂತೆ ರಾಜಿಸುತಿಹುದು ೯೯

ರಾಜಹಂಸಾವಾಸತೆಯಿಂದಾ ನೀ
ರೇಜಾಕರ ಭಾವಿಸಲು
ರಾಜಾಲಯದಂತೆ ಬಾನಂತೆ ಕಾನಂತೆ
ರಾಜಿಸುತಿಹುದು ಕಣ್ಗಳಿಗೆ ೧೦೦

ಅವನೀಶ್ವರಸಭೆಯಂತದು ಕುವಲಯ
ಕವಿರಾಜಹಂಸವಿಭಾ[4]ಸಿ[4]
ಭುವನದಂತದು ಭಾವಿಸೆ ಕಮಲಜಲಕ್ಷ
ಣವಿರಾಜಿತವಾ ಸರಸಿ ೧೦೧

ದನುಜದಿಶಾಂತರದಂತದು ಭಾವಿಸ
ಲನುಪಮಕುಮುದ[5]ವಿ[5]ಭಾಸಿ
ಅನಲಾಸೆಯಂತೆ ವಿಚಾರಿಸಲದು ಕಣ್ಗೆ
ಘನಪುಂಡರೀಕವಿ[6]ಲಾ[6]ಸಿ ೧೦೨

---

[1] ಯಂತ (ಅ ಇ) [2] ಲ (ಅ ಇ ಎ ಗ) [3] ದಕ (ಇ) [4] ಪಿ (ಅ) [5] ವ (ಅ) ವಾ (ಐ) [6] ಭಾ (ಉ).

ಸೀತೆಯಂತಿರೆ ಕುಶಲವರಾರಾಜಿತ
ಸೀತಾಧಿನಾಯಕನಂತೆ
ಭೂತಳನುತಲಕ್ಷಣಾನ್ವಿತವಾ ಕಂ
ಜಾತಾಕರ ಭಾವಿಸಲು ೧೦೩

ಕುವಲಯಶತಪತ್ರರಾಜಿತವದು ನೋಡ
ಲವನೀಶ್ವರ[1]ಸೇನೆ[1]ಯಂತೆ
ವಿವರಿಸೆ ವಸುದೇವತನಯನಂತದು ಬಹು
ಭುವನೋದರಮೆಸೆದಿಹುದು ೧೦೪

ಸುರಲೋಕದಂತನಿಮಿಷಯುತ ಪದ್ಮಬಂ
ಧುರವದುರಗಲೋಕದಂತೆ
ನರಲೋಕದಂತದು ನಾರವಿಲಾಸವಾ
ಸರಸಿಜಾಕರ ಕಣ್ಗಳಿಗೆ ೧೦೫

ಆ ಕಮಲಾಕರ ಮೊದಲಾದ ತೀರ್ಥಾ
ನೀಕದಿಂದಾ ಪಂಪಾಕ್ಷೇತ್ರ
ಆ ಕಾಶಿಯನಾ ಕೇತಾರವನಾ
ಗೋಕರ್ಣವ ನಗುತಿಹುದು ೧೦೬

ಆ ಕ್ಷೇತ್ರದ ಮಧ್ಯದಲಿ ಪಂಪಾಪುರಿ
ಸಾಕ್ಷಾತ್ಕರಿಸಿ ಕಣ್ಗೆಸೆವ
ಮೋಕ್ಷದಂತಿರ್ಪುದು ವಿಶ್ವಾಧಿಪತಿ ವಿರೂ
ಪಾಕ್ಷಲಿಂಗನನೊಳಕೊಂಡು ೧೦೭

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೊಂದನೆಯ
ವಿದಿತಾಶ್ವಾಸದೊಳೆರಡನೆಯದು ಸಂಧಿ
ಮೃದುಪದಚಯಸಂಬಂಧಿ ೧೦೮

---

[1] ಸಭೆ (ಉ) * ಈ ಪದ (ಅ ಎ ಐ ಕ ಗ) ಗಳಲ್ಲಿಲ್ಲ.

# ಮೂರನೆಯ ಸಂಧಿ

## ಪಂಪಾಪುರ ವರ್ಣನೆ

ಸೂಚನೆ: ಸೊಂಪಿಂದ ಸೊಗಸುವಾತಿಂದ ಸೊಬಗಿನಿಂದ
ಪಂಪಾಪುರಿ ಕಣ್ಗೊಳಿಪುದು

ಅಳಕಾಪುರಿಯಾ ಯೆಡೆಯ ಬಿಟ್ಟಿಲ್ಲಗೆ
ತಳರ್ದುದೊ ಸುರರಾಜಧಾನಿ
ಇಳಿದಿಲ್ಲಗೆಯ್ತಂದುದೊ ಪೇಳೆನಲಾ
ಪೊಳಲುಱೆ ಕಣ್ಗೆ [1]ರಾ[1]ಜಿಸಿತು ೧

ಕಿನ್ನರಪುರಿಯೊ ಕಿಂಪುರುಷನಗರಿಯೊ ಸಂ
ಪನ್ನಗರುಡರ ಪಟ್ಟಣವೊ
ಪನ್ನಗರಾಜಧಾನಿಯೊ ಎನಲಾ [2]ನಗ
ರಂ ನೆಱೆ ಕಣ್ಗೆಸೆದಿ[2]ಹುದು ೨

ಅಳಕಾ[3]ವತಿ[3] ಭೋಗವತಿ ಅಮರಾವತಿ
ಅಳುಕಿಯಾ ಪುರದ ಚೆಲ್ವಿಂಗೆ
ತಳರ್ದವು ದೆಸೆಗೆ ನೆಲಕೆ ಬಾನ್ಗೆನಲಾ
ಪೊಳಲ ಸಿರಿಯನೇನನೆಂಬೆ ೩

ಕಮಲಜನೆರಡನಿರದೆ ತೂಗೆ ಲಘುತೆಯಿಂ
ದಮರಾವತಿ ಗಗನಕ್ಕೆ
ಗಮಿಸಿತೆಂದೆನಲಾ ಪಂಪಾಪುರಿಯ ವಿ
ಭ್ರಮವನದೇನ [4]ಬಣ್ಣಿಪೆನು[4] ೪

ಸಿರಿಯಿಂದ ಸೊಕ್ಕಿದ ಸುರರಾಜಧಾನಿಯ
ನುರುಲೀಲೆಯಿಂ ಗೆಲ್ದಾನಗರಿ
ಇರದೆತ್ತಿಸಿದ ಕೇತನಗಳಂತಾ ಪುರ
ವರದೊಳೆಸೆದವು ಸಿಂಧಗಳು ೫

---

[1] ರಂ (ಇ ಉ ಎ ಐ ಗ) [2] ಪುರಿ ಸನ್ನುತವಾಗಿರುತಿ (ಎ ಗ) [3] ಪುರಿ (ಇ ಐ) [4] ಪೇಳುವೆನು (ಇ ಉ).

ತಿಲಕ ವಕುಳ ಪೂಗ ಪುನ್ನಾಗ ಪುಂಡ್ರೇಕ್ಷು
ಫಲಿತಾಮ್ರ ನಾಳಿಕೇರಗಳ
ಕುಲದಿಂದಾ ಪುರವರದುಪವ[1]ನ[1] ಕಣ್ಗೆ
ನಳನಳಿಸುತೆ ಮೆಱೆದಿ[2]ಹುದು[2] ೬

ಸ್ಮರಕರಿಕಳಭವಾಡದ ಕೃತಕಾದ್ರಿಗ
ಳರಲಂಬಗಂಬಾಗದಿರ್ಪ
ತರುಣ ಕಿಸಲಯು[3]ಕು ಸು[3]ಮಮಂಜರಿಗಳಾ
ಪುರದುಪವನವೊಳಗಿಲ್ಲ ೭

ವಿರಹಿಗಳೆರ್ದೆಯೊಳ್ಮನುಗುವಂಗಜಾಗ್ನಿಯ
ನಿರದೇಳಿಸದ ತೆಂಬೆಲರ
ಪರಿದಾಟ ರಾಗರಸಮನೇಳಿಸದಬ್ಜಾ
ಕರಮಿಲ್ಲವಾ ಬನದೊಳಗೆ ೮

ಕಾಮಾಗ್ನಿಯ ದಳ್ಳುರಿ[4]ಗಳಂ[4]ತೆಸೆದಿರ್ಪ
ಕೋಮಲಾರುಣಪಲ್ಲವಗಳ
ಸ್ತೋಮವಿಲ್ಲದ ಮಾಮರಗಳಾ ಪುರದಾ
ರಾಮದೊಳಿಲ್ಲ ಬಗೆಯಲು ೯

ವಿರಹಿಗಳೆರ್ದೆಯನಾ[5]ರ್ದಿಸೆ[5] ನೆತ್ತರಿಂ ಪೊರೆ
ದರಲಂಬನ ಬಾಣಗಳಿಗೆ
ದೊರೆವಡೆದಿರ್ಪ ಕೆಂದಳಿರ್ಗಳುಳ್ಳಸುಗೆಯ
ಮರಗಳಾ ವನದೊಳೆಸೆದವು ೧೦

ಮುಳಿದರನಂಗಜನಱಸಲಾ ಬನದೊಳು
ಬೆಳಗಿದ ದೀಪ[6]ಗಳೆ[6]ನಲು
ನಳನಳಿಪಲರ್ಗಳಿಂದೆಸೆವ ಚಂಪಕತರು
ಕುಳವಲ್ಲಿ ಕಣ್ಗೆಸೆದಿಹವು ೧೧

---

[1] ನವದು (ಎ ಗ) [2] ಹವು (ಉ) [3] ಕುಂಕು (ಎ ಗ) [4] ಯಂ (ಎ ಐ ಗ)
[5] ರ್ದಿಸೆ (ಅ ಇ ಎ ಗ) ರ್ದಿಸಲು (ಉ) [6] ವೆಂದೆ (ಐ).

*ಚಿತ್ತಜ ಕೀರ್ತಿಲತೆಯ ಬಿತ್ತುಗಳವೊಲು
ಚಿತ್ತಕಾನಂದವನೀವ
ಒತ್ತಿದ ಮುಗುಳು ಮಲ್ಲಿಗೆಯು ಪಂಗಡವೆಸೆ
ದತ್ತಾ ಪುರವನದೊಳಗೆ ೧೨

ಉರಿಗಣ್ಣಿಂದಳಿವಂದಲರ್ವಿಲ್ಲ ತ
ನ್ನುರುತೇಜದ ಬಿ[1]ತ್ತ[1]ವೊದಲ
ಇರಿಸಿದನೀಯೆಡೆಯೆನೆ ಕೆಂಜಾಜಿಗ
ಳ್ಕರವೆಸೆದವು ನೋಡಲಲ್ಲಿ ೧೩

ಕಂದರ್ಪಕಾಳೋರಗನಾವರಿ[2]ಸಿರ್ದ[2]
ಚಂದನವಿಮಲತರುಗಳ
ಸಂದೋಹವಲ್ಲದಾ ನಂದನದೊಳಗಿಲ್ಲ
ವೆಂದೆನಲೇನೆಂಬೆನದನು ೧೪

ಬೆಳೆದಂಗಭವನ ಮೋಹಾಂಧಕಾರದ ನಳ
ನಳಿಸುವ [3]ಲತೆ[3]ಗಳೆಂದೆನಲು
ತಳುವದೆ ಮೆಱೆವ ತಮಾಲ ತರುಗಳಾ
ಪೊಳಲ ಬನದೊ[4]ಳೆಸೆದಿ[4]ಹವು ೧೫

§ವನದೇವತೆಯು ಮಧುಪಾನಕೇಳಿಯ [5]ನವ[5]
ಕನಕದ ಬಟ್ಟಲಂತೆಸೆವ
ಮಿನುಗುವ ಪೂದಾಳ್ದ ಕರ್ಣಿಕಾ[6]ರಂ[6]ಗಳಾ
ಬನದೊಳು [7]ಮಿಗೆ ಕಣ್ಗೆಸೆದ[7]ವು ೧೬

ಮನಸಿಜಜಯಲಕ್ಷ್ಮಿ ನರ್ತಿಸದಿಹ ಲತೆ
ವನೆಗಳಂಗಜ ವೀರಲಕ್ಷ್ಮಿ
ಬಿನದಿಸದಿಹ ಚಂದ್ರಕಾಂತವೇದಿಕೆಗಳಾ
ಬನದೊಳಗಿಲ್ಲ ಬಗೆಯಲು ೧೭

---

[1] ತ್ತು (ಐ) [2] ಸದ (ಐ ಕ) [3] ಬೆಳೆ (ಅ) [4] ಳಿರುತಿ (ಐ) [5] ವನ (ಅ ಐ) [6] ವರ (ಇ) [7] ಕಣ್ಗೆಸೆದಿಹ (ಇ) * ಈ ಪದ (ಉ) ಪ್ರತಿಯಲ್ಲಿಲ್ಲ § ಈ ಪದ (ಉ ಐ) ಗಳಲ್ಲಿಲ್ಲ.

*ಸ್ಮರಮದದಂತಿ ವಿರಹಿಗಳ ವಿಸಟಂ
ಬರಿದೋಡಿಸದ ಮಾವುಗಳ
ಮರದ ಸಾಲ್ವೀದಿಗಳಿ[1]ಲ್ಲೆನಲಾ ಪುರ
ವರದುಪವನ[2]ವನೇ[2]ನೆಂಬೆ ೧೮

ಧರಣೀಜನ[3]ವಶ್ಯ[3] ತಿಲಕವೆಂದೆನಿಸುವ
ಸುರುಚಿರ ತಿಲಕವೃಕ್ಷಗಳ
ಇರವಿನಿಂದಾ ಪುರವರದ ಬಹಿರ್ವನ
ವಿರಹಿಗಳೆದೆಗೆಡಿಸುವುದು ೧೯

ಮುಳಿದಗಲಿರ್ದ ನಲ್ಲರಿಗುಱೆ ಹಾರವ
ಕುಳವ ಪುಟ್ಟಿಸುವ ವಕುಳದ
ವಿಳಸಿತ ವಿಟಪಿ ವಿತತಿಗಳಿಂದೆಸೆ[4]ದು[4]ದಾ
ಪೊಳಲ ಪೊಱಗಳಾರಾಮ ೨೦

*ಕಂಡು ಬಟ್ಟೆಗರ ಕೊಂಬೇಱ ಕುಸುಮಕೋ
ದಂಡಗೆ ಸನ್ನೆಗೂಗಿಡುವ
ಗಂಡುಗೋಗಿಲೆಗಳಾ ಬನದೊಳಗಲ್ದರ
ನಂಡಲೆವುತ ಮೆಱೆದಿಹವು ೨೧

ಕುಸುಮಸಾಯಕ ಜನವಶ್ಯ ಮಂತ್ರಂಗಳ
ನೊಸೆದು ಪದಂಗುಟ್ಟದಿರ್ಪ
ಪಸುಳೆ ಪ್ಪಾ[5]ರಿವ[5]ಗಳಾ ಬನದೊಳಗಿಲ್ಲೆನ
ಲುಸಿರ್ವನಾರದಱ ಸೊಬಗನು ೨೨

ಅರಲ ಸರಲನಂಕವಾಲೆಯನೊಲದೋದ
ದರಗಿಳಿವಿಂಡಾ ಬನದ
ತರುತತಿಗಳೊಳಿಲ್ಲವೆಂದೆನಲದಱ ಬ
ಲ್ಸಿರಿಯನದೇನ ಬಣ್ಣಿಪೆನು ೨೩

---

[1] ಲ್ವೀಡಿಗಳೆಯ್ದಿ (ಅ) ಲ್ವಿಡಿಗಳಿ (ಎ ಕ ಗ) [2] ವಸೆದುದೇ (ಆ ಉ) [3] ವೈಶ್ಯ (ಅ) ವಲಸ್ಯ (ಇ) [4] ವು (ಎ ಗ) [5] ವರಿ (ಇ) * ಈ ಪದಗಳು (ಉ) ಪ್ರತಿಯಲ್ಲಿಲ್ಲ.

*ಜಲದೇವತೆಗೆ ಕಳಕೂಜನದುರುಕಳ
ಕಳವ[1]ನೋದಿಸುತೊಸೆದಿರ್ಪ[1]
ಕೊಳರ್ವಕ್ಕಿಗಳ ಕೋಳಾಹಳದಿಂದಾ
ಪೊಳಲುಪವನವೆಸೆದಿಹುದು ೨೪

ವನಲಕ್ಷ್ಮಿಗೊಲಿದು ನರ್ತನವ ಕಲಿಸುವಂ
ತನುರಾಗ[2]ದೊಳಾ[2]ಡುತಿರ್ಪ
ಘನತರೋ[3]ಲ್ಲಸಿತ[3]ಕಲಾಪ ಶಿಖಿಗಳಾ
ಬನದೆಡೆಯೊ[4]ಳಗಿ[4]ರುತಿಹವು ೨೫

ಕುಸುಮಸಾಯಕನ ಕೋದಂಡಟಂಕಾರದ
ಮಸಕಮನಿಂಚರದಿಂದ
ಮಸುಳಿಪ ಮಱಿದುಂಬಿಗಳಾ ಬನದೊಳ
ಗೆಸೆದಿ[5]ಹವೇ[5]ನ ಬಣ್ಣಿಪೆನು ೨೬

ಮದನ ಮನೋರಥಾಂಗಗಳಾಗಿರ್ದು
ನ್ಮದನ ಮನೋರಥಾಂಗಗಳ
ಬೆದೆ[6]ಬೇಟ[6]ದೇಳ್ಗೆಯಿಂದೆದೆಗೆಡಿಸುವದದು
ಮುದದಿಂದ ಪೋಪ ಪಥಿಕರ ೨೭

ಆ ವನದೊಳ್ತುಂಬೆಲರೆಡೆಯಾಟದ
ಗಾವಳಿ ಪೆಣ್ದುಂಬಿಗಳ
ಗಾವರ ಗಂಡುಗೋಗಿಲೆಗಳ ಕೂಗಾಟ
ವಾವಗಮೆಸೆದಿರುತಿ[7]ಹುದು[7] ೨೮

*ಅಲ್ಲಿ ಮದನ ನನೆಯಂಬನೊಲ್ಲದೆ ಸವಿ
ವಿಲ್ಲಿಂದ ಬಡಿದು ಬಟ್ಟೆಗರ
ತಲ್ಲಣಗೊಳಿಸುವನೆನಲದ ಬಣ್ಣಿಸ
ಬಲ್ಲ[8]ರುಂಟೇ ಲೋಕದೊಳಗೆ[8] ೨೯

---

[1] ನೊಲಿದಿಸುತೊಸೆದಿರ್ಪ (ಅ) ನೋದಿಸುತಿರುತಿರ್ಪ (ಇಕ) ನೋದಿಸು ತೆಸೆದಿರ್ಪ (ಐ) [2] ದಿಂದಾ (ಅಉಕ) [3] ಲ್ಲಾಸಿ (ಎ) [4] ಳಿ (ಕ) [5] ಹುದೇ (ಇ) [6] ಬೆಟ್ಟ (ಅ) [7] ಹವು (ಅ ಇ ಉ ಎ ಗ ಕ) [8] ವರುಂಟೇ ಲೋಕದೊಳು (ಇಕ)
* ಈ ಪದಗಳು (ಉ) ಪ್ರತಿಯಲ್ಲಿಲ್ಲ.

ಅಲ್ಲಿ ರಂಭಾವನದಲ್ಲಿ ಲತಾಗೃಹ
ದಲ್ಲಿ ತಳಿರ್ವಾಸಿ[1]ನೊಳಗೆ[1]
ನಲ್ಲರೊಡನೆ ಸೂಳೆವೆಂಡಿರಂಗಜಕೇಳಿ
ಯಲ್ಲಿ ಸುಖದೊಳಿರುತಿಹರು ೩೦

ಕೊಳರ್ವಕ್ಕಿ ಪಾರಿವ ಮಱಿದುಂಬಿಗಳ ರವ
ಗಳರವದಂತಿರಲಲ್ಲಿ
ತಳುವದೆ ಮೆಯ್ವೆರ್ಚಿ ನಲ್ಲರೊಡನೆ ರತಿ
ಕಲಹದೊಳಿಹರು ನೀಱೆಯರು ೩೧

ತಳಿರಕಾವಣದೊಳೆಲ್ಲಾ ವನದೊಡ್ಡಿನೊ
ಳೆಳೆವಾಳೆಯೆಲೆವಱೆಗಳೊಳು
ಎಳಸಿ ಕಾದಲರೊಡನಿರುತಿಹರಲ್ಲಿ ಕಾ
ದಲೆಯರು ಕಾದಲ್ಮೆಯಿಂದ ೩೨

ವನಜವನಗಳಿಂದ ವನವಿ[2]ಹಗ[2]ಗಳಿಂದ
ವನಕುಜ ವೀ[3]ಥಿ[3]ಗಳಿಂದ
ವನವದು ನೋಳ್ಪರ ಕಣ್ಗೆ ರತಿಯ ಜ
ವ್ವನದಂತೆ [4]ಕಣ್ಗೊ[4]ಳಿಸಿಹುದು ೩೩

ಮನುಜರ ಪುಣ್ಯಮೃಗಗಳೆಡೆಯಾಡುವ
ವನವೊ ಮ್ಮದನ ಮದದಂತಿ
ಅನುದಿನಮಿರ್ಪರಣ್ಯವೊ [5]ಮೇಣ್[5]ನಲಾ
ವನಮೆಸೆದಿಹುದು ಕಣ್ಗಳಿಗೆ ೩೪

ಮುಡಿಯನೊಯ್ಯನೆ ಪಿರ್ಕಿಯಲರ್ವುಡಿಗಳ ತಳಿ
ದೊಡನೆ ಕೆಂದಳಿರ್ಗಳೋಲೆಯನು
ಬಿಡದೆ ಕಿವಿಯೊಳಿಟ್ಟು ಬಿಂಕಕಾರ್ತಿಯರಲ್ಲಿ
ಕಡುಗಾಡಿವೆತ್ತಿರುತಿಹರು ೩೫

---

[1] ನಲ್ಲಿ (ಐ) [2] ಹಂಗ (ಐ) [3] ಧಿ (ಐ ಕ ಗ) [4] ಕಂಗೊ (ಇ)
[5] ವೇಳೆ (ಉ).

ಮಲ್ಲಿಗೆ ಮುಗುಳೊಳು ಮುತ್ತಿನ ತೊಡಿಗೆಯ
ನಿಲ್ಲದೆ ತೊಟ್ಟುತ್ತಲಿತ್ತ
ಚಲ್ಲಾತ ಚೆಲ್ಲೆಗಂಗಳ ಕಾಂತಿಯನಲ್ಲಿ
[1]ಚಲ್ಲೆ[1]ಗಾರ್ತಿಯರೊಪ್ಪುತಿಹರು ೩೬

ತೋರಮಲ್ಲಿಗೆಯ ಮುಗುಳ ಮೂಗುತಿಯನು
ಸೇರಿಸಿ ನಾ[2]ಶಿಕಾ[2]ಗ್ರದೊಳು
ಹಾರಮನೆಳಲಿಕ್ಕಿ ಬಕುಳದೊ[3]ಳ್ಗಲರಿಂ[3]ದ
ವಾರನಾರಿಯರಿಹರಲ್ಲಿ ೩೭

*ಸಿರಿಸ ಪೊಂದಾವರೆಯಲರ್ವುಡಿಗಳನಂಗ
ಕಿರದಣ್ಪಿಟ್ಟು ರಸಿಕರ
ಕರಣಮ ಕಾಮಾನಲನಿಂದ ಕಟ್ಟನೆ
ಕರಗಿಸುತಿಹರವರಲ್ಲಿ ೩೮

ಪಾದರಿಯಲ[4]ರ್ದಂಡೆ[4]ಗಂಕಣದಿಂದ ಹೊಂ
ಗೇದಗೆಯೆಸಳೋಲೆಯಿಂದ
ಕಾದಲರ್ಗಿರದೆ ಕಾತರವ ಪುಟ್ಟಿಸುತ ವಿ
ನೋದದಿಂದಿ[5]ರುತಿಹ[5]ರಲ್ಲಿ ೩೯

ಚರಣದೊಳಗೆ ಮಿಗೆ ಮೆಱೆವ ಸಂಪಗೆಯ ನೂ
ಪುರಗಳಿಂದೆಳೆ ಮಾಂದಳಿರ
ಸುರುಚಿರ ಕಾಂಚೀದಾಮಗಳಿಂದಲ್ಲಿ
ಕರಮೆಸೆದಿಹರು ಕಾಂತೆಯರು ೪೦

[6]ಎಸಳಲರಲರ್ವುಡಿ[6] ಮಿಸುಪ ಮಿಡಿಗಳಿಂದ
ಪಸದನವಡೆದು ನೀಱೆಯರು
ಕುಸುಮಬಾಣನ ಕುವಲಯನೇತ್ರೆ[7]ಯರಂ
ತೆ[7]ಸೆದರಾ ಬನ[8]ವೆಡೆಯೊಳಗೆ[8] ೪೧

---

[1] ಚಲ್ಲೆ (ಎ) ಚೆಲ್ಲೆ (ಐ ಗ) [2] ಸಾ (ಐ) [3] ಳಲರಿಂ (ಅ ಇ) ಳರವಿಂ (ಐ) [4] ರ್ವಿಂಡ (ಅ ಇ ಉ ಎ ಕ) [5] ಹರವ(ಉ ಎ ಕ ಗ) [6] ಎಸಳ ಅಲರ್ವುಡಿ (ಅ) ಪೊಸಅಲರ್ವುಡಿಯಿಂದ (ಎ ಗ) [7] ಯಂತೆ ಕಣ್ (ಅ ಕ) [8] ದೇವಿಯರು (ಉ) ದ ನೀಱೆಯರು (ಕ) * ಈ ಪದ್ಯ (ಉ) ಪ್ರತಿಯಲ್ಲಿಲ್ಲ.

*ಸೋಗೆಗಾಟಮನೆರಗಿಳಿಗೆ ನುಡಿಯು[1] ಬಣ್ಣ
ಗೋಗಿಲೆವೆಣ್ಗಂ[1]ಚರವ
ಆಗಿಸುವೆಂಬುಜಾಕ್ಷಿಯರಲ್ಲ ಕಣ್ಗಂ
ಬಾಗಿಹರೇನ ಬಣ್ಣಿಪೆನು ೪೨

ಗೇಯಮನಳಿಗರಸಂಚೆಗೆ ನಡೆಯ ವಿ
ಡಾಯಮನೆಣೆವಕ್ಕಿಗಳಿಗೆ
ಕಾಯಜಾಗ್ನಿಯ ಕಾಟವನೊರೆವುತ [2]ಕಮ
ಲಾ[2]ಯತಾಕ್ಷಿಯರಿಹರಲ್ಲಿ ೪೩

ಸುರವಿತತಿಗೆ ವನದೇವತೆ ಪೊನ್ನ[3]ತಂ
ಗರಗಗ[3]ಳಟಿವಟ್ಟಿಗೆಯನು
ವಿರಚಿಸಿದಳು ಗಗನದೊಳೆನೆ ಚೆಂದೆಂಗು
ಮರಗಳಾ ಬನದೊಳೆಸೆದವು ೪೪

ವಸುಮತಿಯೊಳಗಿರ್ದ ಮಿಸುನಿಯ ಫಲದಂ
ತೆಸೆದಿಹ ಮಾ[4]ದು[4]ಫಲಗಳ
ವಿಸರವಾ ಪುರದ ಬಹಿರ್ವನದೊ[5]ಳಗೆ[5] ರಂ
ಜಿಸಿದುದು ರಸಿಕರ ಕಣ್ಗೆ ೪೫

ಸುರುಚಿರ ರತ್ನಗರ್ಭೆಯೊಳಿಪ್ಪ ರನ್ನಗ
ಳುರುತರ ಫಲಗಳಿವೆನಲು
ಬಿರಿದಿನಿವಣ್ಗ[6]ಳಿಮ್ಮೆ[6]ಱೆವ ದಾಡಿಂಬದ
ಮರಗಳೆಸೆದವ[7]ದಱೊ[7]ಳಗೆ ೪೬

*ಅಲರ್ಗಳಿಂ ಫಲವನೆಯ್ದುವ ಮರಗಳನಂ
ಡಲೆವುತ ಗಿಳಿನುಡಿಯಿಂದ
ಸಲೆಮೆಱೆದವು ಪಣ್ತ ಬಕ್ಕೆವಲಸುಗಳ
ಬಳಗವಾ ಬನದೆಡೆಯೊಳಗೆ ೪೭

---

[1] ಗಂಡುಕೋಗಿಲೆಗಳಿಗಿಂ (ಎ ಗ) [2] ಕಂಜಾ (ಎ ಗ) [3] ತಣ್ಣದಿರಗ (ಅ)
[4] ಧ (ಇ ಐ) [5] ಳು (ಎ) [6] ಳಿಂಮ್ಮೆ (ಇ ಎ ಐ ಗ) [7] ನದೊ (ಇ ಎ)
*ಈ ಪದಗಳು (ಉ) ಪ್ರತಿಯಲ್ಲಿಲ್ಲ.

ಅಲರ್ವಿಲ್ಲನ ಪಸಿರ್ವ[1]ರಲ[1] ಮಿಟ್ಟೆಗಳ ಜಂ
ಗುಳಿಯಂತೆ ಮೆಱೆವ ಬಿಣ್ಗೊನೆಯ
ತಳೆದಿರ್ಪಡಕೆಯ ಮರದ ಸಾ[2]ಲ್ಗಳು[2] ಕ
ಣ್ಗೊಳಿಸಿ[3]ಹ[3]ವೇನ ಬಣ್ಣಿಪೆನು   ೪೮



ಪೂಗಣಿಯನ ಜಯಲಕ್ಷ್ಮಿಯ ಮೊಗಸಿರಿ
ಯಾಗಿಪ್ಪ ನಾಗವಲ್ಲಿಗಳ
[4]ಅಗರವಲ್ಲಿ ಬಟ್ಟೆಗರಿಗೆ ಮದನಾನು
ರಾಗವ ಪುಟ್ಟಿಸುತಿಹವು[4]   ೪೯

ತರಣಿಗಗಿದು ಕಳ್ತಲೆ ತನ್ನ ಮಱಿಗಳ
ನಿರಿಸಿದುದೀಯೆಡೆಯೆನಲು
ಕರಮೆಸೆವೊಳ್ವಣ್ಣ ಗ[5]ಳಾ[5] ನೇಱಿಲ
ಮರಗಳಾ ಬನದೊಳೊಪ್ಪಿ[6]ಹ[6]ವು   ೫೦

*ಬಿಲ್ಲೊಂದಱಿಂದ ವಿರಹಿ[7]ಜಯವಲರ್ವಿಲ್ಲ
ಗಿಲ್ಲೆಂ[7]ದವನ ಚಾಪಗಳಿಗೆ
ನಿಲ್ಲದೆ ವನದೇವಿ ಸಲಹುತಿರ್ದಪಳೆನ
ಲಲ್ಲಿ ಕರ್ವುಗಳೆಸೆದಿಹವು   ೫೧

ಮಿಗೆ ಮೋಹಿಸಿದ ನಲ್ಲರನಗಲಿದ ಬಲು
ವಗೆಗಳೆದೆಯ ಸೀಳ್ವಂಗಜನ
ಹೊಗರೊಗುವಾಣಿ ಗರಗಸಗಳಂತಲ್ಲಿ
ಸೊಗಯಿಸಿದವು ಕೇ[8]ದಗೆ[8]ಗಳು   ೫೨

ಅಳಿಯಂಚೆ ಕೋಗಿಲೆ ಕೊಳರ್ವಕ್ಕಿ ಪಾರಿವ
ಗಿಳಿ ಪೊಣರ್ವಕ್ಕಿ ಪುರುಳಿಯ
ಕಳರವವಲ್ಲಿ ಕಾವನ ಸೇನೆಯ ಕಳ
[9]ಕಳ[9]ದಂತೆ ಮೋಹಿ[10]ಸುತಿಹು[10]ದು   ೫೩

---

[1] ಲರ (ಏ ಐ ಕ)  [2] ಲ್ಗಳಲಿ (ಐ)  [3] ದ (ಉ ಐ ಕ)  [4] ಅಗರುವಲ್ಲಿಕೆಯ ಮರಗಳಸಾಲ್ಗಳು ಕಂಗೊಳಿಸಿದವೇನಬಣ್ಣಿಪೆನು (ಉ)  [5] ಳುಳ್ಳ (ಇ ಉ ಐ ಕ) [6] ದ (ಐ ಕ)  [7] ಗಳನೆಸಲಲರ್ವಿಲ್ಲೊಂ (ಏ ಗ)  [8] ದಕೆ (ಅ) ತಕಿ (ಉ)  [9] ರವ (ಇ)  [10] ಪು (ಇ)  * ಈ ಪದ (ಉ) ಪ್ರತಿಯಲ್ಲಿಲ್ಲ.

ಎಳೆದುಂಬಿ ಗಾವರ ಗಾನ ಕೋಕಿ[1]ಳಕ[1]ಳ
ಕಳನಾದ ವಾದ್ಯ ಶಿಖಿಗಳ
ನಲಿದಾಟ ನರ್ತನವಾಗಲಾ ವನ ನಾಟ್ಯ
ನಿ[2]ಳೆ[2]ಯದಂತೆಸೆದುದಂಗಜನ ೫೪

*ಒಡೆದೊಸರ್ವೆಳನೀರ್ಗಱೆವ ಚೆಂದೆಂಗು ಕಂ
ಪಿಡಿದ ಪೊಂಬಳೆಗಳಿಂದೆಸೆವ
ಅಡಕೆ ಬೆ[3]ಳಗ[3]ಬೆದಱಿಸುವೆಲೆವಳ್ಳಿಯ
ಗಡಣವೆಸೆದವು ಕಣ್ಗಳಿಗೆ ೫೫

ಅಂಗಜಗಜವಿರ್ಪ ತಾಣ ಲಕ್ಷ್ಮಿಯ ಲಾಸ್ಯ
ರಂಗ [4]ಕ[4]ಣ್ಬೊಂಬೆಯಾಟಗಳ
ಮಂಗಲಸದನವಿದೆಂಬಂತೆ ಬೇಱೆ ಬೆ
ಡಂಗಾದುದಾ ವನ ಕಣ್ಗೆ ೫೬

ವಡಬಾಗ್ನಿಗಗಿದು ಕನಕಶೈಲವ ಶರ
ಣ್ಬಡೆದುದು ಶರನಿಧಿಯೆನಲು
ಕಡುರಯ್ಯಮಾದುದಾ ಪೊಳಲ ಪೊಂಗೋಂಟೆಯ
ನಡರ್ದು ಮೆಱೆವ ನೀರಗಳು ೫೭

ಮಗಳನಗಲ್ದಿರಲಾಱದೆ ಮುನ್ನೀರು
ಬಗೆಗೊಂಡು ಬಂದುದೆಂದೆನಲು
ಮಿಗೆ ಕಣ್ಗೆವಂದುದಾ ಪೊಳಲ ಪೊಱಗಣ ನೀ
ರಗಳದನೇನ ಬಣ್ಣಿಪೆನು ೫೮

*ಪಡಿಮಾತೇನೆನ್ನ ವಸ್ತುಗಳಿದಱೊಳ
ಗಿಡಿದಿವೆಯೆಂದಾ ಪೊಳಲ
ಕಡಲು ಕವಿದು ಬಳಸಿದುದೆನೆ ನೀರಗ
ಳ್ಪಡೆದುದು ಕಣ್ಗೆ ಕೌತುಕವ ೫೯

[1] ಲೆಗ (ಎಗ) ಲಕ (ಐ ಕ) [2] ಳ (ಇ) [3] ಳೆಗಳ (ಐ ಕ) [4] ಪೆ (ಇ)
* ಈ ಪದಗಳು (ಉ) ಪ್ರತಿಯಲ್ಲಿಲ್ಲ.

ಜಂಬೂದ್ವೀಪವನುಱೆ ಬಳಸಿದ ಲವ
ಣಾಂಬುನಿಧಾನವಿದೆನಲು
ತಾಂ ಬೆ[1]ಡ[1]ಗಾದುದು ಪೊಳಲ ಕೋಂಟೆಯನವ
ಲಂಬಿಸಿ ಮೆಱೆವ ನೀರಗಳು    ೬೦

ಅಂಬುಧಿಗಳ್ಗೆ ಭೇದವನಱಿವ[2]ರೆ[2] ಲವ
ಣಾಂಬುವದಿದು ಸವಿನೀರು
ಎಂಬುದಱಿಂದಲ್ಲದಗಲದಿಂದಾಳದಿಂ
ದಂ ಬಗೆವಡೆ ಭೇದ[3]ಮಿ[3]ಲ್ಲ    ೬೧

ಕಂಡರಿಸಿದರೊ ಕನಕಶೈಲವ ಮಯ
ಮಾಂಡವ್ಯರಿಳೆಗೆ ಕೆಮ್ಮುಗಿಲ
ತಂಡವಿಳಿದು ಮಂಡಳಿಸಿತೋಯೆನೆ ಬಗೆ
ಗೊಂಡುದಾ ಪೊಳಲ ಪೊಂಗೋಂಟೆ    ೬೨

ವಸುಧೆಯ ಮಿಸುನಿ ಬೆಳೆದು ತೆನೆವೋದುದೆಂ
ಬೆಸಕವನೀಕ್ಷಿಸುವರಿಗೆ
ಪೊಸ[4]ಯಿಸುತಾ ಪುರವರದ ಪೊಂ[4]ಗೋಂಟೆ ಕ
ಣ್ಗೆಸೆದುದನೇನ ಬಣ್ಣಿಪೆನು    ೬೩

*ನೀರಗಳಿರಲಾಲವಾಲಂಬೊಲಿಳೆಯ ಮ
ಹಾರಜತಮ ಬೀಗಿ ಬೆಳೆದು
ಓರಂತೆ ತೆನೆ[5]ವೋ[5]ದುದೆನಲಾ ಪೊಂಗೋಂಟೆ
ತೋರದೆನೆಗಳಿಂದೆಸೆದುದು    ೬೪

ತಾರೆಗಳಿಗೆ ತೆನೆಗೆಲದೊತ್ತಿನೊಳಗೆ ಸಂ
ಚಾರವೆಯ್ದುವೊಡುಷ್ಣಕರಗೆ
ದಾರಿಯಿಲ್ಲದೆ ದಕ್ಷಿಣೋತ್ತರಾಯಣವೆನ
ಲಾರಳವದು ಬಣ್ಣಿಸಲು    ೬೫

---

[1] ಳ (ಐ)  [2] ಡೆ (ಉ ಐ ಕ ಗ)  [3] ವಿ (ಐ ಕ)  [4] **ಬಗೆಯಿಂ ಸೊಗಯಿಸುತ ಪುರ** (ಇ ಎ ಗ) ಯಿಸುತಾಪುರದಗಳ ಪೊಂ (ಐ)  [5] ಯಾ (ಐ)  * ಈ ಪದ (ಉ) ಪ್ರತಿಯಲ್ಲಿಲ್ಲ.

ಮಂದರವೆಂದು ಬಗೆದು ವೃಂದಾರಕ
ವೃಂದವಾನಂದದಿಂ ಬಂದು
ನಿಂದು ನಿಟ್ಟಿಸಿ ನಾಣ್ಚುವುದೆನೆ ಗೋಪುರ
ದಂದವನೇನ ಬಣ್ಣಿಪೆನು ೬೬

ಮುಗಿಲಿಂದಟ್ಟಳೆಗಟ್ಟಳೆಯಿಂ ತೆನೆ ತೆ
ನೆಗಳಿಂದಾಳ್ವೇರಿ[1]ಯಿಂದ[1]
ನಗರಿಗಿಳಿದು ಸುರರಾ ಪಟ್ಟಣದ ಚೆಲ್ವ
ಮಿಗೆ ನೋಡುತಿಹರು ಮೆಯ್ವೆರ್ಚಿ ೬೭

ಬಟ್ಟೆಯೊಳಾದ ಬಳಲ್ಕೆಯ ಭರವ ಬಾಂ
ಬಟ್ಟೆಗರಿಂದುಕಾಂತಗಳ
ಅಟ್ಟಳೆಗಳ ಮೇಲೆ ಕ[2]ಳೆ[2]ವರೆಂದೆನಲವು
ದಿಟ್ಟಿಸಲಳವೆ [3]ನರರಿಗೆ ೬೮

ಮುಸುಕಿದ ಮುಗಿಲ್ಗಳಿಂದಾಳ್ವೇರಿ ಸಂಜೆಯೊ
ಳೆಸೆ[4]ದು[4]ದು ನೋಳ್ಪರ ಕಣ್ಗೆ
ಒಸೆದಾಗಸದೊಳಮರರಿಟ್ಟ ಪೊಂಬಟ್ಟೆ
ವಸರದಂತೇನ ಬಣ್ಣಿಪೆನು ೬೯

*ಅಗಳಿಗವಧಿ ಪಾತಾಳ ಕೋಟೆಗೆ ಸೀಮೆ
ಗಗನಾಂತ[5]ವಾ[5] ವೀಥಿಗಳಿಗೆ
ದಿಗಧೀಶ್ವರರೆಡೆ ಮರ್ಯಾದೆಯೆನಲಾ
ನಗರಿಯ ಪೆಂಪನೇನೆಂಬೆ ೭೦

ಸುರಸಿಂಧುವಿನ ಪರಿಕಾಲ್ಗ[6]ಳಂತಾ[6] ಪುರ
ವರದ ಪೊಂಗರುಮಾಡಗಳೊಳು
ಕರಮೆಸೆದಿರ್ಪವು ಕಣ್ಗೆ ದುಕೂಲದ
ವರವೈಜಯಂತಿ ಕೋಟೆಗಳು ೭೧

---

[1] ಗದಱಿಂದ (ಅ ಐ ಎ ಗ) [2] ಳಿ (ಉ ಎ ಐ ಕ) [3] ಕಣ್ಬಱಿದು (ಎ ಗ) [4] ವು (ಇ ಎ ಐ) [5] ನೀ (ಇ ಕ ಗ) [6] ಳಿಂದಾ (ಐ) * ಈ ಪದ (ಉ) ಪ್ರತಿಯಲ್ಲಿಲ್ಲ.

ಮುಗಿಲನಳ್ಳಿಱಿವ ಪತಾಕೆ ಕಳಸ ಕೋ
ಟೆಗಳಿಡಿದಿದರ್ಗಗಸದೊಳು
ಬಗೆಯೆ ಚಂದ್ರಾದಿತ್ಯರಿಗೆ ಸೋಮ ಸೂರ್ಯವೀ
ಥಿಗಳೊಳಲ್ಲದೆ ಬಟ್ಟೆಯಿಲ್ಲ ೭೨

ಗೋಡೆ ಗೋಮೇದಿಕರತ್ನದಿಂ ಬಾಗಿ
ಲ್ವಾಡ ಬಾಂಬಳಿಕಿಂದ ಜಗಲಿ
ವೈಡೂರ್ಯದಿಂ ಮತ್ತವಾರಣಮಣಿಯಿಂದ
ನಾಡೆ ಕಣ್ಗೆಸೆದಿ[1]ಹವ[1]ಲ್ಲಿ ೭೩

ಇವು ಕೆಳಗವು ಮೇಲೆಂಬುದಱಿಂದಲ್ಲ
ದ[2]ವಿವೆಂದು[2] ರಚನೆಗ[3]ಳಿಂದ[3]
ಹವಣಿಸಬಾರದಾವಂಗವಮಾ ಪುರವರ
ಭವನ ದಿವಿಜಭವನಗಳ ೭೪

ಪಚ್ಚೆಯ ಲೋವೆ ಮಾಣಿಕದ ಮದನಿಕೆ ಕ
ಣ್ಮುಚ್ಚಿದಂತೆಸೆವ ನೀಲಗಳ
ಮುಚ್ಚು[4]ಳ[4]ವಲಗೆ ಮೆಱೆ[5]ಯೆ[5] ಕರುಮಾಡಗ
ಳಚ್ಚರಿಯಾಗಿರುತಿಹವು ೭೫

ನೀರೊಳಿರ್ದೊಡೆ ಬೆಲೆವಡೆಯೆವಾವೆಂದು ಮು
ನ್ನೀರನುಳಿದು ಬಂದಂತೆ
ನೀರನುಗುಳುತೆಸೆದವು ಮುತ್ತುವಸರ[6]ಗ
ಳ್ನೀ[6]ರೊಱೆಯಲು ಬಾಯಿ ಜನ[7]ದ[7] ೭೬

ಕಲ್ಲೊಳಿರ್ದೊಡೆ ಭೋಗಿಜನಭೋಗಯೋಗ್ಯವಾ
ವಲ್ಲೆಂದು ಕನಕಾದ್ರಿಯನು
ಒಲ್ಲದೆಳ್ತಂದವೆಂಬಂತೆಸೆದವು ಕೆಂ
ಗಲ್ಲ[8]ಪ[8]ಸರವದಱೊಳಗೆ ೭೭

---

[1] ಹುದ (ಇ ಎ ಐ ಗ)  [2] ವಿದೆಂದು (ಅ) ವಿರಳ (ಇ)  [3] ಳೊಳಗೆ (ಐ)
[4] ಳು (ಐ)  [5] ಯಲು (ಅ ಐ ಗ)  [6] ಗಳು ನೀ (ಎ ಗ)  [7] ರ (ಅ ಉ ಎ ಗ)
[8] ವ (ಐ).

ತಾರಾಗ್ರಹಗಳಾಕಾಶದಿಂದಿಳೆಗಾ
ಧಾರವಿಲ್ಲದೆ ಕೆ[1]ಡೆದಂ[1]ತೆ
ಓರಂತೆ ಕಣ್ಗೆಸೆದವು ಕಂಚುಗಾಱರ
ಭೂರಿವಸರ[2]ಗಳದಱೊಳು[2]

ಕಾವನ ಕೀರ್ತಿವಲ್ಲರಿಯ ದಳಂಗಳ
ಭಾವನೆಯನು ಕೋವಿದರಿಗೆ
ಈವುತೆಸೆದವು ಬೆಳ್ಳೆಲೆವಸರಗಳಲ್ಲಿ
ಭಾವಕ[3]ರೊಲಿದು[3] ಪೊಗಳಲು ೭೯

ಪಲವು ವರ್ಣದ ಮುಗಿಲಾಗಸದಿಂದಿಳೆ
ಗಿಳಿದು ಸಾಲಿ[4]ಟ್ಟವೆಂ[4]ದೆನಲು
ಪಳಿಯ ಪಟ್ಟೆಯ ದುಕುಲದ ಚೀನಾಂಬರ
ದೊಳುವಸರಗಳು ಮೆಱೆದವು ೮೦

ತರಣಿಕಿರಣದಿಂದ ಕರಗಿ ಕನಕಶೈಲ
ಪರಿದುದಾಯೆಡೆಗೆಂದೆನಲು
ಕರಮೆಸೆದವು ಕಣ್ಗೆಡೆವಿಡದಲ್ಲಿ ಬ
[5]ಚ್ಚ[5]ರವಸರಗಳೇನನೆಂಬೆ ೮೧

*ಸಸಿಕಲೆಗಳ ಖಂಡಗಳೊ ಕಾವದೇವನ
'ಜಸವಳ್ಳಿಯ ಬೆಳ್ವಿ[6]ತ್ತುಗಳ
ವಿಸರವೊ ಮೇಣೆನಲೆಸೆದವು ಕರ್ಪೂರ
ವಸರಗಳಾ [7]ಪುರದೊ[7]ಳಗೆ ೮೨

ತರಳ[8]ತ[8]ರಾಪಾಂಗದ ಬೆಳ್ಪೆಳಗಿಂದ
ಸಿರಿಖಂಡದಂತೆ ಕಣ್ಗೆಸೆಯೆ
ಸರಸಿಜನೇತ್ರೆಯರಲ್ಲಿ ಬೇಟವ ಬೀಱು
ತಿರದೆ ಕತ್ತುರಿ ಮಗುಳ್ಚುವರು ೮೩

---

[1] ಡೆವಂ (ಅ ಐ) ಡದಂ (ಎ ಗ) [2] ವದಱೊಳಗೆ (ಅ) [3] ರಲ್ಲಿ (ಐ)
[4] ಟ್ಟುದೆಂ (ಉ) [5] ಜ್ಜ (ಐ) [6] ಝುಸದ ವೆಳ್ಳಯ ಬಿಳ್ವಿ (ಅ) ಝುಷವೆಳ್ಳಿಯ ಬೆಳ್ವಿ (ಇ) ಜಸವಳ್ಳಿಯ ಬಿ (ಎ ಗ) [7] ಪೊಳಲೊ (ಎ ಗ) [8] ತಾ (ಇ ಎ ಐ)
* (ಉ) ಪ್ರತಿಯಲ್ಲಿಲ್ಲ.

ಇಟ್ಟಡೆ ಮೊಲೆ[1]ಯಿಾ[1]ಡಾಡೆ ಮೇಲುದನೊಸೆ
ದಿಟ್ಟಿಸುತಿರೆ ಕೋವಿದರು
ಘಟ್ಟಿಮಗುಳ್ಚುವುದಂಗನಾಜನವಲ್ಲಿ
ಪಟ್ಟದಾನೆಗಳಂತಂಗಜನ　　　　　೮೪



ಮೊಲೆ ಕದಕದಿಸೆ ಕುರುಳ್ಕುಣಿದಾಡೆ ಕ
ಣ್ಕಲಹವನೆಸಗೆ ಮದನನ
ಅಲರ್ಗಣೆ[2]ಗಳೊಳ[2]ಲ್ಲಿ ಘಟ್ಟಿಮಗುಳ್ಚುವ
ರಲಘುನಿತಂಬಬಿಂಬೆಯರು　　　　　೮೫

ಪೊಂಗಳಸಂಗಳ ಕಾಂತಿಯಿಂ ಬಿಸಿಲ ಬೆ
ಳ್ದಿಂಗಳ ನೆಲೆವಾಡಗಳ
ತುಂಗಪತಾಕಾಕಲಿತ ಧವಳವಸ
ನಂಗಳಿಂ [3]ಪೊಳೆ[3]ವುದಾ ಪೊಳಲು　　　　　೮೬

ಅಲುಗುವ ಪುರ್ಬು ಕಬ್ಬಿನ ಬಿಲ್ಲೆವೆ ತುಂಬಿ
ಗೊಲೆ ನೋಟವಲರ್ಗಣೆಯಾಗೆ
ಬೆಲೆವೆಣ್ಗಳೆಸೆದಿಹರಂಗಜವೀರನ
ಬಲದಂತಾ ನಗರಿ[4]ಯೊಳು[4]　　　　　೮೭

ಅಂಗಜನಲರ್ಗಣೆ ಬಿಲ್ ಪಳಯಿಗೆಯಾದ
ಪಾಂಗದ ಪುರ್ಬಿನ ಮುಡಿಯ
ಭೃಂಗನೇತ್ರೆಯರಲ್ಲದಲ್ಲಿ ಸಾಮಾನ್ಯವೇ
ಶ್ಯಾಂಗನೆಯರು ನೋಡಲಿಲ್ಲ　　　　　೮೮

ಹರಿಣಿ ಮೇನಕಿ ರಂಭೆ ಮೊದಲಾದ ಸಗ್ಗದ
ಸುರಸುದತಿಯರಿವರೆನಲು
ಕರಮೆಸೆದಿರ್ಪರು ಕರುಮಾಡದಗ್ರದೊ
ಳೆ[5]ರಳೆಗಣ್ಣೆಳೆವೆಣ್ಗಳಲ್ಲಿ　　　　　೮೯

---

[1] ಗಳೀ (ಐ)　[2] ಯೊಡನ (ಇ ಐ ಗ) ಯೊಡವ (ಎ ಕ)　[3] ಪಡೆ (ಅ ಇ ಎ ಝ ಗೆ)　[4] ಯಲಿ (ಐ)　[5] ಮೇಲೆ (ಐ).

ಬಿಡದೆ ನೋಡಿದ[1]ರ್ಗೆ ತಪ್ಪದು ವಿರಹಾಗ್ನಿಯಿಂ[1]
[2]ದೊಡನ[2]ನಲರೆಲರ್ಕೋಳನ
ಪಡೆದನೆಂದೆನಲಲ್ಲಿಯ ಬೈಲೆವೆಣ್ಗಳ
ಬೆಡಗನದೇನ ಬಣ್ಣಿಪೆನು ೬೦

ಇಂತೆಸೆವಾ ಪಂಪಾಪುರಿಯೊಳಗಂತ
ಕಾಂತಕನಗಜಾ[3]ಪ[3]ತಿಯು
ಕಾಂ[4]ತ[4]ನಿವಾಸ ಮೆಱೆವುತಿಹುದದನಂ
ತಿಂತೆಂದು ಪೊಗಳಲೆನ್ನಳವೆ ೬೧

ಕಡಿದಿರಿಸಿದರೊ ಕನಕಶೈಲವನುಱೆ
ಬಿಡುಗಂಡ[5]ರಣಿ[5]ಗೆಯ್ದಿಲ್ಲಿ
ಮಡಗಿದರೋ ಮಂದರಾದ್ರಿಯನೆನಲದು
ಪಡೆದುದು ಕಣ್ಗೆ ಕೌತುಕವ ೬೨

ಪ[6]ಳಿಕಿನ ಪಟ್ಟಿಗೆ[6] ನೀಲದ ನೆಲೆ[7]ಕ[7]ಟ್ಟು
ಕುಲಿಶದ ಕೊಟ [8]ಪಚ್ಚೆಗಳ[8]
ಪಳಯಿಗೆ ಪದ್ಮರಾಗದ ಪಟ್ಟಶಾಲೆ ಕ
[9]ಣ್ಗೊಳಿ[9]ಸಲೆಸೆದುದಾ ನಿಳೆಯ ೬೩

ಮುತ್ತಿನ ಮತ್ತವಾರಣ ಪುಷ್ಯರಾಗದ
ಪುತ್ತಳಿ ಪಚ್ಚೆಯಱೆಗಳ
ಉತ್ತಮವೇದಿಕೆ ರತ್ನದುಪ್ಪರಿಗೆ ಮ
ಯ್ವೆತ್ತಿರೆ ಮೆಱೆದುದಾ ಭವನ ೬೪

ಶೋಣಮಣಿಯ ಸೋಪಾನದಿಂ ಶೋಭಿಪ
ಮಾಣಿಕ್ಯದುರುಮಂಟಪಗಳು
ಮಾಣದೆ ಮೆಱೆದವು ದಿವಿಜವಿಮಾನ
ಶ್ರೇಣಿಯಂತಾ ಭವನದೊಳು ೬೫

---

[1] ವರ್ಗೆ ವಿರಹ ತಪ್ಪ (ಎಗ) [2] ದಡರ್ವುದೆಂದಂಗಜ (ಎ ಗ) [3] ಧಿಪ (ಇ)
[4] ತಿ (ಅ) [5] ರಣೆ (ಅ) ರೆಣೆ (ಐ) [6] ಳುಕಿನ ಪಟ್ಟಿಕೆ (ಇ ಉ ಎ ಐ ಗ)
[7] ಗ (ಎ ಕ ಗ) [8] ಪವಳದ (ಉ ಎ ಗ) [9] ಣ್ಗೆಳ (ಅ ಉ).

[1]ಸಂಗತಿ[1] ವಡೆದ ಮತಂಗಾದ್ರಿ ಮೊದಲಾದ
ತುಂಗಪರ್ವತ ಚಕ್ರಕೋಟೆ
ತುಂಗಭದ್ರಾನದಿಯುಗಳಾಗಲಾ ಶಿವ
ಲಿಂಗನಿ[2]ಳ[2]ಯು ಕಣ್ಗೆಸೆದುದು ೯೬

ಪೊಂಗೋಂಟೆಯ ಪೊಳಪಿಂದಿಂದುಕಾಂತದು
ತ್ತುಂಗಶಿಖರಕಾಂತಿಯಿಂದ
ಗಂ[3]ಗೆ ಶೋಣಿ[3]ಗಳೀಶಾಭಿಷೇಕಕೆ ಬಂದ
ಭಂಗಿಯಂತಿಹುದಾ ತಾಣ ೯೭

ನಾನಾರತ್ನಕಲಿತ ಶಿಖರದ ಕಾಂತಿ
ತಾನಲ್ಲಿ ಪರ್ವಿ [4]ಮೆಱೆ[4]ದುದು
ಆ ನಿಳೆಯದ ಮುಂದೆ [5]ಸಮೆದ ಕುಸುಮಕಾಯ[5]
ಮಾನದಂತೇನ ಬಣ್ಣಿಪೆನು ೯೮

ಎಳೆಗಾಳಿಯಿಂದೊಲೆದಾಡುವ ದು[6]ಕು[6]ಲದ
ಪಳಯಿಗೆ ಗಗನಾಂಗಣದೊಳು
ಎಳಸಿದವೀಶನ ಬಲಗೊಂಬಾಮರಿಯರ
ಚಲಚೇಲಾಂಚಲದಂತೆ ೯೯

ಪುದಿದೊಪ್ಪಿದವು ರನ್ನ ಮುತ್ತು [7]ನೀಲಂಗಳ[7]
ಕದಿರು ಮುಕ್ಕಣ್ಣನಿದಿರೊಳು
ಒದೆದು ವೈರವನಲ್ಲಿ ಬಿಸಿಲ್ಬೆಳ್ದಿಂಗಳ್ತಲೆ
ಮುದಮಿಗೆ ಕೂ[8]ಡಿದಂದದಲಿ[8] ೧೦೦

ಎ[9]ಳ[9]ವಿಸಿಲಂತೆ ಬೆಳ್ದಿಂಗಳಂತೆಸೆವ ಪೊಂ
ಗಳಸದ ಬಿಳಿಯುಪ್ಪರಿಗೆಯ
ಬೆಳಗಿಂದ ಪಗಲಿರುಳಬ್ಜ ಕುಮುದಕುಲ
ವಲ[10]ರ್ದಿರ್ಪುವಲ್ಲಿ ಕೊಳದೊಳು[10] ೧೦೧

---

[1] ಸಿಂಗರ (ಎ ಗ) [2] ಳೆ (ಐ) [3] ಗಾಶ್ರೇಣಿ (ಎ ಗ) [4] ಬೆಳೆ (ಐ)
[5] ಸದ ಕುಸುಮಕಾಯ (ಎ ಗ) ಸಮೆದ ಕುಸುಮಸಾಯಕ (ಕ) [6] ಗು (ಎ ಐ)
[7] ನೀಲಗಳಿಂದ (ಅ) [8] ಡಿದಂತಲ್ಲಿ (ಐ ಗ) [9] ಳೆ (ಐ) [10] ದಿರ್ಪ ........ (ಇ)
ದಿರ್ಪವಂತವರಲ್ಲ (ಎ ಗ) .... ಕೊಣದೊಳು (ಕ).

ಮುಗುಳ್ವ[1]ರಳ್ವ[1]ಬ್ಜ ಕುಮುದಗಳಿಂದಲ್ಲದೆ
ಪಗಲಿರುಳೆಂಬುದನಲ್ಲಿ
ಮಿಗೆ ತಿಳಿಯಲ್ಬಾರದು ರತ್ನ ವಜ್ರ ಕೂ
ಟಗಳ ಕೂಟದ ಬೆಳಗಿಂದ ೧೦೨

ಪಳಯಿಗೆಗಳ ಗಾಳಿಯಿಂದ ಚಿರಿದ ಮುಗಿ
[2]ಲ್ವಳಗದಿ[2] ಸುರಿವ ಮುತ್ತುಗಳ
ಮಳೆಯಂತೆಸೆದವಾ ಶಿವನಿಳಯದೊಳೆಳ
ಲ್ವೆಳೆಮುತ್ತಿನ ಲಂಬಣಗಳು ೧೦೩

[3]ಸಸಿ[3]ಗಲ್ಲ ಕಂಭಂಗಳ ಮೇಲಿರಿಸಿದ
ಪೊಸರನ್ನದ ದೀವಿಗೆಗಳು
ಎಸೆದವೀಶನ ಮೂರ್ತಿಯ ಬಹುರೂಪಿನ
ನೊಸಲುರಿಗಣ್ಗಳೆಂಬಂತೆ ೧೦೪

ಉರಿಗ[4]ಣ್ಣಿನ[4] ಪೊಂಗಳಸವಿರ್ಪಕ್ಕದೊ
ಳಿರೆ ರವಿ ಶಶಿ ತ್ರಿಯಂಬಕನ
ಪರಿಯಂತೆ ಪೌರ್ಣಮಿಯುದಯಕಾಲದೊಳಿರ್ಪು
ದುರುಶಿ[5]ತ[5]ಗೋಪುರವಲ್ಲಿ ೧೦೫

ಇಂತು ಕಣ್ಗತಿಶೋ[6]ಭಾವಹಮಾಗಿರ್ದ[6]
ಕಾಂತ ನಿಶಾಂತರಾ[7]ಳ[7]ದೊಳು
ಅಂತಕಾಂತಕನಗಜಾಪತಿಯಿರ್ಪನ
ನಂತಮಹಿಮೆಗಳನಾಂತು ೧೦೬

ಆ ದಿ[8]ವ್ಯ[8] ಮಣಿಮಯ ಮಂದಿರಮಧ್ಯದೊ
ಳಾದಿಮಧ್ಯಾಂತರಹಿತನು
ವೇದಾಂತವೇದ್ಯನಭವನಕ್ಷಯನಿರ್ಪ
ನಾದರದಿಂ ವಿರೂಪಾಕ್ಷ ೧೦೭

---

[1] ಲರ್ವ (ಐ) [2] ಲ್ವರಳಿಂ (ಕ) [3] ಶಶಿ (ಐ) [4] ಣ್ಣಿಗೆ (ಎ ಗ) [5] ವ (ಇ)
[6] ಭನಮಾಗಿರ್ದಂತ (ಎ ಗ) [7] ಗ (ಐ) [8] ತ್ಯ (ಅ ಐ).

ಯೋಗಿಹೃತ್ಕಮಲ[1]ದೊ[1]ಳಿರ್ಪಂತಾ ದಿ
ವ್ಯಾಗಾರ ಮಣಿವಿಷ್ಟರದೊಳು
ರಾಗರಹಿತರಜತಾದ್ರಿನಿಲಯನನು
ರಾಗದಿಂದಿರ್ಪನೀಶ್ವರನು　　೧೦೮

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೊಂದನೆಯ
ವಿದಿತಾಶ್ವಾಸದೊಳ್ಮೂರನೆಯದು ಸಂಧಿ
ಮೃದುಪದಚಯಸಂಬಂಧಿ　　೧೦೯

---

[1] ಮಧ್ಯದೊ (ಎ ಗ)　*(ಅ ಎ ಐ ಕ ಗ ಚ ಟ) ಗಳಲ್ಲಿಲ್ಲ.

# ನಾಲ್ಕನೆಯ ಸಂಧಿ

## ಕೊಸವುಲೆಯ ವರ್ಣನೆ

ಸೂಚನೆ: ಮುಗಿಲನಳ್ಳಿಱುವ ಕೋ[1]ಡು[1]ಗಳಿಂದ ಹೊಸದುರ್ಗ
ಸೊಗಯಿಸುತಿಹುದು ಕಣ್ಗಳಿಗೆ

ಆ ವಿರೂಪಾಕ್ಷನ ನಿ[2]ಳೆ[2]ಯದ ದಕ್ಷಿಣ
ಭೂವ[3]ಳೆ[3]ಯದೊಳು ಮೃಗಗಳ
ಆವಾಸದಂತಿರ್ಪುದು ಹೊಸವುಲೆಯದ
ನಾವನೊಲಿದು ಬಣ್ಣಿ[4]ಪೆ[4]ನು ೧

ಕುಳಿ ದರಿ ಪ[5]ಳ್ಳ[5] ಪೆರ್ಗಾಡು ಮುಳ್ಮರ ಗಿಡು
ಮೆಳೆದುಱುಗಲ್ಪುದಿ ಹೊದಱು
ಬೆಳೆಗಾಡು ಗುಂಡು ಗು[6]ಗ್ಗ[6]ರಿಗಲ್ಮೊರಡಿಗಳ
ಭ್ಳಗದಿಂ ಮೆಱೆ[7]ದು[7]ದಾ ವಿಪಿನ ೨

ಮುರವಾಯ್ದು ಕೊರ್ಬಿ ಬೆಳೆದ ಬಳ್ಳಿ ಬಿದಿರ್ಗಳ
ನೆರ[8]ವಿಂ[8]ದ ಕಳ್ತಲೆ ರವಿಗೆ
ಬಿರಿದಿಕ್ಕಿ ಬಿಂಕದಿಂದಾ ಬಿಂಜದಡವಿಯೊ
ಳ್ಪರಿದಿರ್ಪುದದು ದೆಸೆದೆಸೆಗೆ ೩

[9]ಲಲಿ[9]ತ ತಮಾಳ ಕಾಳೋರಗ ಶಬ[10]ರೀ[10]
[11]ಲುಳಿತಾಳಕದಿ ಭ[11]ಲ್ಲೂಕಗಳ
ಬಳಗದ ಬಲುಕಾಂತಿಯಿಂದ ಕಳ್ತಲೆಯಲ್ಲಿ
ಬೆಳೆದುಱೆ ಪರ್ವಿದಂತಿಹುದು ೪

ನೆಲ್ಲಿ ನೇಱಿಲು ಕಕ್ಕೆ ಬಿಕ್ಕೆ ತಂಡಸಿ ತಾಱೆ
ಕಲ್ಲತ್ತಿ ಕರಿಬೇವು ಕಡವ
ಚಿಲ್ಲ ಚ[12]ನ್ನಂಗೆ[12] ಚಂದನ ಚಂಪಕಗಳಿಂದ
ನಿಲ್ಲದೆ [13]ಮೆಱೆ[13]ವುದಾ ವಿಪಿನ ೫

---

[1] ಚೆ (ಐ) [2] ಳ (ಇ ಐ) [3] ಳ (ಇ) [4] ಸುವ (ಇ ಉ ಎ ಐ ಕ ಗ)
[5] ಳು (ಇ) [6] ಗು (ಇ ಐ ಕ) [7] ವು (ಇ ಐ ಗ) [8] ದಿ (ಅ) [9] ತಳಿ (ಉ)
[10] ರಿಯ (ಎ ಕ ಗ) [11] ರುಲವ ಪಿಕದ ಬ (ಎ ಕ ಗ) [12] ನ್ನಗಸೆ (ಎ ಗ) ನ್ನಗೆ
(ಕ) [13] ಸೆ (ಎ).

ಅಳಿಲೆಯರಳಿಯತ್ತಿಯಂಕೋಲೆ ಬಿಳಿಯತ್ತಿ
ಬಿಳಿಲಾಲ ಬೇಲ ಹೆ[1]ಬ್ಬೇವು[1]
ಮೊಳಗುವ ಮು[2]ತ್ತುಗ[2] ಮೊದಲಾದ ಮರಗಳ
ಬಳಗದಿಂ[3]ದದು ಕಣ್ಗೆಸೆದುದು[3] ೬

ಇಡಿಕಿಱಿದಿರ್ದ ನಾನಾಕುಜಕುಲದಿಂದ
ಗಿಡು ಮೆಳೆ ಪಳ್ಳ ಕೊಳ್ಳಗಳ
ಗಡಣದಿಂದೆಲರಡಿಯಿಡದಲ್ಲಿ ರವಿ ಕೈ
ದುಡುಕಲಮ್ಮನು ಪೇಳ್ವೆನೇನ ೭

ಕಾಡುಕೋಣಂಗಳ ಪ[4]ಟ್ಟಿ[4] ಪೆರ್ಬುಲಿಗಳ
ಗೂಡು ಕರಡಿಯು ಜಂಗುಳಿಯ
ಬೀಡು ಮೃಗಂಗಳ ನಾಡೆಂದೆನಲಾ
ಕಾಡು ಕಣ್ಗೆಸೆದಿರುತಿಹುದು ೮

ಧರಣೀಶ್ವರಸಭೆಯಂತದು ಭಾವಿಸೆ
ಸರಳಾಶೋಕ ಪುನ್ನಾಗ
ವರವೇಶ್ಯಾವಾಟವೇದಿಕೆಯಂತದು
ಪರಿಕಿಸೆ ವಿಟಪಿವಿಭಾಸಿ ೯

ಸುರಲೋಕದಂತಸ್ತ್ರಮಂದಿರದಂತೆ ಬಂ
ಧುರಗಗನಾಂಗಣದಂತೆ
ವರಭೋಗಭೂತಳದಂತದು ಹರಿ ಖಡ್ಗ
ಶರಭ ಭೋಗೀಂದ್ರವಿಭಾಸಿ ೧೦

ರಾಜೇಂದ್ರನಂತೆ ಜರಾಸಂಧನಂತಹಿ
ರಾಜಕೇತನವೈರಿಯಂತೆ
ರಾಜಿಸುತಿಹು[5]ದದು[5] ಭಾವಿಸೆ [6]ವ[6]ರಭೂಜ
ರಾಜಿಯಿಂದೇನ ಬಣ್ಣಿಪೆನು ೧೧

---

[1] ಬ್ಯಾಲೆ (ಇ ಎ ಐ) ಬ್ಯಾಲಸು (ಕ) [2] ತ್ತಕ (ಇ ಎ ಐ) [3] ದೆಸೆವುದು ಕಣ್ಗೆ (ಐ) [4] ಟ್ಟಿ (ಇ) [5] ದಂತೆ (ಐ) [6] ಕ (ಇ).

ಸುರಲೋಕದಂ[1]ತಸ್ತ್ರಮಂದಿರ[1]ದಂತಂ
ಒರದಂತೆ ವೈಕುಂಠದಂತೆ
ಧರೆಯಂತೆ ಹಯಶಾಲೆಯಂತೆ ಸಲಿಲದಂತೆ
ಹರಿನಿಷ್ಠವದು ಭಾವಿಸಲು ೧೨

ಆ [2]ಗ[2]ಹನಾಂತರದೊಳಗಿ[3]ರ್ಪ[3]ದೊಂದು ಮ
ಹಾಗಿರಿ ದುರ್ಗವಂಬರವ
ತಾಗುತ ತಳರ್ವ ತರಣಿಯ ಕುದುರೆಗಳಿಂ
ಗಾಗಿಹುದದು ತಾಗು[4]ದಾ[4]ಣ ೧೩

ಆ ಗಿರಿದುರ್ಗದ ಮೇಲಿರ್ಪ ನರರನು
ರಾಗದಿಂ [5]ರಾ[5]ಕಾಧಿಪತಿಯ
ಮೇಗಣ ನಿರ್ಮಳ ನಿಷ್ಕಳಂಕಾಂಚಿತ
ಭಾಗವ ನಿಟ್ಟಿಸುತಿಹರು ೧೪

ಪಸಿರೆಲೆ ಪಸಿರ್ಗಲ್ಲು ನನೆವಜ್ರ ನಿರ್ಮಲ
ಕುಸುಮ ಮುತ್ತೆ[6]ಸೆವೆ[6]ಳೆದಳಿರು
ಕಿಸುಗಲ್ಲಾಗಲಾ ಗಿರಿ ನವರತ್ನದ
ಪೊಸಗಿರಿಯಂತೊಪ್ಪುತಿಹುದು ೧೫

ಸಸಿಗಲ್ಲ ಬಟ್ಟಯೆಗಳ ಮೇಲೆರಳೆಗಳು
ನಸುನಿದ್ರೆಯಿಂದೊಱಗಿರಲು
ಒಸೆದು ನಿಟ್ಟಸುವರಿಗಾ ಗಿರಿ ಚಂದ್ರಗಿರಿಯಂತೆ
ಪೊಸಬಗೆವೆತ್ತೊಪ್ಪುತಿಹುದು ೧೬

ಕಾಡ ಕುದುರೆಗಳಾ ನಗದಿನಕಾಂತದ
ಕೋಡುಗಲ್ಗಳ ಕೆಳಗಿರಲು
ನೋಡೆ ಪಗಲೊಳದು ಮೆಱೆವುದು ತರಣಿಗ
ಳಾಡುಂಬೊಲದಂತೆ ಕಣ್ಗೆ ೧೭

---

[1] ತೆ ರಸಾತಳ (ಇ ಉ ಎ ಐ ಕ) [2] ಗಾ (ಅ) [3] ಹು (ಅ) [4] ತಾ (ಉ)
[5] ನಾ (ಅ ಇ) [6] ಸಿವೆ (ಅ) ಸೆದೆ (ಇ).

ನೀರೇಱಿದ ನೀರದಂಗಳ ಮೇಲೆ ಮ
ಯೂರಗಳೊಲಿದು ನರ್ತಿಸುತ
ಓರಂತಿಹವೆನಲದಱುನ್ನತಿಕೆಯ
ದಾರಳವಭಿವರ್ಣಿಸುವ[1]ರೆ[1] ೧೮

ಪಿರಿದು ಮಾತೇನಾ ದುರ್ಗದ ಮೇಲಣ
ಮರಗೊಂಬುಗ[2]ಳ ಪಾಯ್ದೊದೆ[2]ದು
ಸುರಿವವು ಮುಗಿಲ ಮುತ್ತುಗಳನೆಂದೆನಲದ
ಱಿರವನದೇನ ಪೇಳುವೆನು ೧೯

*ಸೋಗೆಯ ಸೊ[3]ರ್ಕಾ[3]ಟದ ಸೊಂಪಿಂಗೆನು
ರಾಗಿಸುತೊಸೆದು ಮೆಯ್ಮೆಱೆದು
ಪೋಗದೆ ನಿಂದವೆಂಬಂತೆಸೆದಿಹವಭ್ರ
ಪೂಗವಾ ಗಿರಿದುರ್ಗದೊಳಗೆ ೨೦

ಮರದೆ[4]ಡೆ[4]ದುಱುಗಲೆಡೆಗಳೊಳಿಪುರ್ಡುಗಳ
ನರಲೆಂದು ಬಗೆದು ಬಾಲೆಯರು
ಕರೆದು ಕಾಂತರಿಗೆ ಕೈಯೆತ್ತಿ ತೋಱುವರೆನ
ಲಿರವನೇನೆಂಬೆ ನಾನದಱ ೨೧

ಸುರತಸುಖವನಱಿಯದೆ ಚಂದ್ರನೊಳಗಿರ್ಪ
ಹರಿಣ[5]ಗೆ[5]ದೆಯೊಳಿಕ್ಕಿ ನ[6]ಸಿ[6]ಯ
ಬರಿಸಿಕೊಂಡಾ ಗಿರಿಯೊಳು ಹರಿ[7]ಣ[7]ಗಳೊಡ
ವೆರಸಿಹವದಱೊಡನೊಸೆದು ೨೨

ಕಡುನೇಹದಿಂದ ಕಿನ್ನರಿಯರಲ್ಲಿಯ ಕಲ್ಲ
ಪಡೆಗಳೊಳಗೆ ನಲ್ಲರೊಡನೆ
ಬಿಡದೆ ರತಿಯೊಳಿರೆ ಬರೆ ನ[8]ರ[8]ರಲ್ಲಿಗೆ
ಕಡುಮಿಂಚಿನಂತೆಯುದ್ದಿತಿಹರು ೨೩

---

[1] ಡೆ (ಐ ಕ ಗ) [2] ಳು ಪಾಯ್ದೊಡೆ (ಉ) [3] ಕ್ರಾ (ಐ) [4] ರೆ (ಇ ಐ ಕ)
[5] ನೆ (ಐ) [6] ಸೆ (ಐ ಗ) [7] ಣ (ಅ ಇ ಊ ಐ) [8] ಲ್ಲ (ಐ) * (ಉ) ಪ್ರತಿಯಲ್ಲಿಲ್ಲ.

ಲೇಸುಮಾಡಿದ ನಲ್ಲರೊಡನೆ ಕಿಂಪುರುಷವಿ
ಲಾಸಿನಿಯರು ಲೀಲೆಯಿಂದ
ಆಸಱಿಲ್ಲದೆ ಕೂಡುತಿಹರು ಕಂದರ್ಪ [1]ಕ್ಕೆ
ವೀಸಿದಂತಾ[1] ಗಿರಿಯೊಳಗೆ ೨೪

ಲೀಲೆಯಿಂದಲ್ಲಿಗೆಯ್ತರ್ಪ ವಿದ್ಯಾಧರ
ಲೋಲಾಕ್ಷಿಯರ ಸೋರ್ಮುಡಿಯ
ಮಾಲೆಯ ಕಂಪಿಗೆ ಮನ[2]ವನಿ[2]ಕ್ಕುವರಲ್ಲಿ
ಬಾಲವಿಟರು ನಡೆಗೆಟ್ಟು ೨೫

ಗರುಡನಗರಿಗೆ ಗಂಧರ್ವಪುರಿಗೆ ಕಿ
ನ್ನರಪಟ್ಟಣಕ್ಕೆ [3]ಚೆಲ್ವಿಂ[3]ದ
ಸರಿ ದೊರೆ ಪಡಿಯೆಂದೆನೆ ಪೊಳಲೊಂದಾ
ಗಿರಿ[4]ಯ ಮೇಲಿಹುದೊಪ್ಪವೆತ್ತು[4] ೨೬

ಅಳುಕಿ ದಾನವರಟ್ಟುಳಿಗಮರಾವತಿ
ಯಿಳಿದುದಾ ದುರ್ಗಕೆಂದೆನಲು
ಪೊಳೆವ ಪೊಂಗಳಸದುಪ್ಪರಿಗೆಯ ನಿಳಯಸಂ
ಕುಳದಿಂದ ಮೆಱೆವುದಾ ನಗರಿ ೨೭

ಅದು ಗುಹ್ಯಕೇಶನಿಕರವೈಭವಮೆಂದು
ತ್ರಿದಶಜನಾನ್ವಿತಮೆಂದು
ಬೆದಱಿಪುದಿಂದ್ರಕುಬೇರಪುರಿಗಳ ಸಂ
ಪದದಿಂದ ಬಹುಜನದಿಂದ ೨೮

*ಬಿದಿ ತೂಗೆ ತೊಲೆಯಿಂದ ಸುರಪುರ ಲಘುತೆಯಿಂ
ದೊದವಿ ಪೋದುದು ಬಾನೆಡೆಗೆ
ಇದು ನೆಲಸಿತ್ತು ಗೌರವದಿಂದ ದುರ್ಗದ
ತುದಿಯೊಳೆಂದೆನಲೇನನೆಂಬೆ ೨೯

---

[1] ವಿಲಾಸದಿಂದಾ (ಐ) [2] ವಿ (ಇ ಎ ಗ) [3] ಚೆಲ್ವಿನಿಂ (ಐ) [4] ಗಿರಿಯೊಳಲ್ಲಹುದ ಚೆಲ್ವಾಗಿ (ಎ ಗ) * (ಉ) ಪ್ರತಿಯಲ್ಲಿಲ್ಲ.

ಪುರಲಕ್ಷ್ಮಿ ನ[1]ಟಿ[1]ಯಾಟಕೆ ತೆಱಪೀ ಪುರ
ವರದೊಳಿಲ್ಲೆಂದಜ ಸಮೆದ
ಉರುರಂಗಮಂಟಪದಂತೆ ಪುರದ ಬಹಿಃ
ಪುರವೆಸೆದಿಹುದು ಚೆಲ್ವಿಂದ ೨೦

ನಂದನಚೈತ್ರರಥಗಳಂತೆ ಕಣ್ಗಾ
ನಂದವನಿರದೆ ಪುಟ್ಟಿಸು[2]ತ[2]
ಅಂದವಾಗಿಹುದುಪವನ[3]ವ[3]ಲ್ಲಿ ಫಲತತಿ
ಕುಂದದ ತರುಚಯದಿಂದ ೨೧

ಗಿಳಿಗಳೋದುವ ಮತ್ತ ನವಿಲ್ಗಳ ನರ್ತನ
ನಿಳಯವಂಚೆಗಳಿಕ್ಕೆದಾಣ
ಅಳಿಗಳ ಭೋಜನಶಾಲೆಯೆಂದೆನಲಾ
ಪೊಳಲುಪವನಮೆಸೆದಿಹುದು ೨೨

ನಾಗವಲ್ಲಿಯು ನಾ[4]ಳಿಕೇರ[4] ನಾರಂಗ ಪು
ನ್ನಾಗ ಪುಂಡ್ರೇಕ್ಷು ಪೂಗಗಳ
[5]ಪೂಗದಿಂದದು[5] ಪಥಿಕರ ಬಗೆಗಿರದನು
ರಾಗವ[6]ನೀಳಿಸು[6]ತಿಹುದು ೨೩

ಎಳೆವಳ್ಳಿ [7]ಏ[7]ಲಾಲತೆ ಮಲ್ಲಗೆ ಪಾವು
ಬಳ[8]ಸ[8]ದ ಕೌಂಗು ಚೆಂದೆಂಗು
ಎಳೆಮಾವು ಸಿರಿಖಂಡ[9]ವ[9]ರಗಳಾ ನಂದನ
ದೊಳ[10]ಗೆ[10]ಲ್ಲವೆನಲೇನೆಂಬೆ ೨೪

ಗಿರಿಶಿಖರವ ಸೋಂಕಿ ತಳರ್ವ ತರಣಿಕಯ್ಯ
ಸರಸಿಜವಿಕ್ಕಿ ಸಲಹಿದ
ಪರಿಯಂತೊಪ್ಪುತಿಹವು ಪದ್ಮನಿಕರವಾ
ಪುರದ ಬನದ ಕೊಳಗಳೊಳು ೨೫

---

[1] ಡೆ (ಐ) [2] ವ (ಉ ಕ) [3] ದ (ಐ) [4] ಠಕೇಳ (ಇ) [5] ಆಗಾರದಿಂದ (ಐ) [6] ಪುಟ್ಟಿಸು (ಎ ಗ) [7] ಯೋ (ಅ ಇ ಎ ಗ) [8] ಸಿ (ಇ ಎ ಗ) [9] ಮ (ಉ) [10] ಗಿ (ಉ) ಗ (ಐ).

ಅಲರ್ವಿಲ್ಲನಳಿವುತ ಬಿಲ್ಲನಾ [1]ಬ[1]ನದೆಡೆ
[2]ಗೊ[2]ಲಿದಿಡಲದು ಮಿಗೆ ಪ[3]ರ್ವಿ[3]
ಸಲೆ ಪೆರ್ಚಿ ಬೆಳೆದಂತಿಹವಲ್ಲಿ ಕರ್ವಿನ
ಬಲುದೋಂಟಗಳು ಚ[4]ಲ್ವಿಂ[4]ದ ೩೬

ತಡೆಯದೆ ಚಂದ್ರನಿಂದೊಸರ್ದೊಸರ್ದಮೃತಮೆ
ಮಡುಗಟ್ಟಿ ನಿಂದುದೆಂಬಂತೆ
ಕಡುಸೊಗಯಿಸಿದವು ಸಿತವಾರಿಯಿಂ ಸವಿ
ವಡೆದ ತಣ್ಗೊಳಗಗಳದಱೊಳು ೩೭

*ನಂದನದಿಂದುದುರಿದ [5]ವನ[5]ಬೀಜಗ
ಳಿಂದಾದ ವಿಟಪಿ ವಿತತಿಯು
ಸಂದಣಿಯಲ್ಲದಾ ಪುರವ[6]ನ[6]ದೊಳಗೆ ಬೇ
ಱೊಂದು ವಿಫಲತರುವಿಲ್ಲ ೩೮

ತೆಂಗು ಚೆಂದೆಂಗು ಮಾವಿಮ್ಮಾವು ಪಲಸು ಮ
ನಂಗೊಳಿಸುವ ಬಕ್ಕೆವಲಸು
ಪಿಂಗದಲೆವ ಗಾಳಿ [7]ತಂ[7]ಗಾಳಿಯೆನಲಾ
ವಂಗಳವದು [8]ಬಣ್ಣಿ[8]ಸಲು ೩೯

*ನವಿ[9]ಲೇಱಿದ[9]ನ ನವಿಲ್ಗಾದ ನವಿಲ್ಗಳ
ನಿವಹವಬ್ಜಜನಂಚೆಗೊಗೆದ
ನವಹಂಸವಿತತಿ ನಲಿವುತೆಡೆಯಾಡುತ
ತವೆ ರಾಜಿಸುತಿಹವಲ್ಲಿ ೪೦

ಚಂಡಕರನ ಕರಖಡ್ಗದಿಂದುಱೆ ತುಂಡು
ತುಂಡಾಗಿ [10]ಬೀಳ್ದ[10] ಕತ್ತಲೆಯ
ಖಂಡಗಳೆಂಬಂತೆ ಕಣ್ಗೆಸೆದವು ತುಂಬಿ
ವಿಂಡಾ ಬನದೆಡೆಯೊಳಗೆ ೪೧

---

[1] ವ (ಇ ಎ ಐ) [2] ಪೊ (ಎ) [3] ಬರ್ (ಇ ಎ ಐ) [4] ಲ್ವಿನಿಂ (ಅ ಇ ಉ)
[5] ನವ (ಎ ಗ) [6] ರ (ಗ) [7] ತೆಂ (ಇ) [8] ಭಾವಿ (ಉ) [9] ಲೆಱೆಯ (ಇ ಎ ಐ ಗ)
[10] ದ್ದ (ಐ) (ಉ) ಪ್ರತಿಯಲ್ಲಿಲ್ಲ.

*ವಿರಹಿಗಳೆ[1]ರ್ದೆವಡೆದಂ[1]ತಲರಂಬನ
ಬರಿದನೋದುವ ಪಾಠಕರ
ಪರಿಯಂತೆ ಮೆಱೆವ[2]ರ[2]ಗಿಳಿವಿಂಡಾ ಪುರ
ವರದುಪವನದೊಳೆಸೆದವು ೪೨

*[3]ಬಿಡು ಬೇಡೀ[3] ವನದಾಸೆ ನಿನ್ನಸುವಿಗೆ
ತೊಡುವುದಿದೆಂದು ವಿರಹಿಗೆ
ಬಿಡದೆ [4]ಸಾಱುವ[4] ಪಡಿಯಱರಂತೆಸೆದವಲ್ಲ
ಪಡಿಯಱವಕ್ಕಿಗಳಲ್ಲಿ ೪೩

ಓದುವ ಗಿಳಿ ನರ್ತಿಸುವ ನವಿಲಿರದು
[5]ನ್ಮಾ[5]ದಿಪ ಕೆಂಗಣ್ವಕ್ಕಿ
ಆದರದಿಂ ನೆರೆವೆಣ್ವಕ್ಕಿ ವಿರಹಿಗು
ನ್ಮಾದವ [6]ಪುಟ್ಟಿ[6]ಸುತಿಹವು ೪೪

*ತಳಿರ್ವೂಯಿಲಿಂದ ನಿಲು[7]ತ[7] ತಿಳಿಗೊಳದೊಳ
[8]ಗಿಳಿದೀಸಾಡುತಂಬುಜದ[8]
ದಳದೊಳಪೊಗುತ ಮೆಲ್ಲನೆ ತಣ್ಣನೆ ಕಮ್ಮ
ನಲೆವುದು ತಂಬೆಲರಲ್ಲಿ ೪೫

*[9]ಅಲರ್ಗಳಿಂದಲ್ಲೊಗುವಮಲಸುಧೂಳೀ[9]
ಜಲದೊಳು ನಾಂದು[10]ಮೆಯ್ಮ[10]ಱೆದು
ಪೊಲಬಱಿಯದೆ ಪಲ್ಮೊಱೆವಂತ ಮೊಱೆವಳಿ
ಕುಲಗಳಾ ಬನದೊಳೆಸೆದವು ೪೬

ಅಲಸದೆ ಮೊರೆವಾಱಡಿವಱಿಗಳ ಕಳ
ಕಳವನಾಲಿಸಿ ವಿರಹಿಗಳು
ಸಲೆ ಬೆರ್ಚಿ ತಳಹೊಳಗೊಳುತಿಹರಂಗಜ
ನಲರ್ವಿಲ್ಲ ಜೇವಡೆಯೆಂದು ೪೭

---

[1] ದೆಯೊಡೆವಂ (ಇ ಐ) [2] ರೆ (ಇ ಐ, [3] ಬಿಡಬೇಡಿ (ಅ) ಬಿಡು ಬಿಡೀ (ಎ ಗ) [4] ನುಡಿವ (ಎ ಗ) [5] ನ್ಮಾ (ಅ ಉ) [6] ನೇಳಿ (ಇ ಎ ಐ) [7] ವ (ಇ) [8] ಗೀಸಾಡಿಯಂಬುಜದ (ಇ) ಗೀಸಾಡಿಯಂಬುಜದಲರ (ಐ) [9] ಅಲರ್ಗಳಿಂದ ವೊಗುವಮದಂಧೂಳೀ (ಎ) ಲ್ಲೊಗುವ ಮಲಮಧೂಳಿ (ಇ ಐ) ಅಲರ್ಗಳಿಂದಲ್ಲೊಗುವ ಮಧುಧೂಳೀ (ಗ) [10] ಮ್ಯೆಮ (ಅ) * (ಉ) ಪ್ರತಿಯಲ್ಲಿಲ್ಲ.

ವಿರಹಿಜನದ [1]ಮೆಯ್ಯ[1] ಸುಯ್ಯ ದಳ್ಳುರಿ ಸೋಂಕ
ಲಿರದದು ಕಂದಿತೆಂಬಂತೆ
ಕರಮೆಸೆವಂಗದ ಗಂಡುಗೋಗಿಲೆಗಳಿಂ
ಚರಗಳಾ ಬನದೊಳೆಸೆದವು ೪೮

ಉರುಪಿಕ ಚಂಚೂ[2] ಹ[2]ತಿಯಿಂದೊಗುವ ಮಾ
ಮರ [3]ಸೋ[3]ನೆಯ ಸೋನೆಯೊಳಗೆ
ಇರಲಾಱದೆ ಪಣ್ತ ಬಕ್ಕೆವಲಸಿ[4]ಗೇಳ್ವ[4]
ಪು[5]ರು[5]ಳಿಗಳೆಸೆದವದಱೊ[6]ಳು[6] ೪೯

ಲಳಿಯೆದ್ದು ಲಲ್ಲೆ ಮೆಲ್ನುಡಿಗಳ ರತಿಕೇಳಿ
ಯೊಳಗುಚ್ಚರಿಸುವ ನೀಱೆಯರ
ಕಳಕಳನಿನದವಿಲ್ಲದ ನವಮಲ್ಲಿ[7]ಕಾ[7]
ನಿಳೆಯವಿಲ್ಲಾ ಬನದೊಳಗೆ ೫೦

ಪಿಕ ಚಕ್ರವಾಕ ಚಕೋರ ಸಾರಸ ಹಂಸ
ಬಕ ಕುರವಕ ಕಾರಂಡ
ಶುಕ ನೀಲಕಂಠ ಪಾರಾವತ ಮಧುಕರ
ನಿಕರದಿಂದದು ಸೊಗಯಿಪುದು ೫೧

ಎಳಲತೆವನೆಯೊಳು ತಳಿರ್ವೊದಱೆಡೆಯೊಳು
ಕಳಿರ್ವ ಕುಜಗಳ ತಳದೊಳು
ಎಳೆಜವ್ವನೆಯುರಂಗಭವತಾಪ[8]ವನ[8]ಲ್ಲಿ
ಕ[9]ಳೆ[9]ವುತಿಹರು ನಲ್ಲ[10]ರಗಲೆ[10] ೫೨

ನಱುಸು[11]ಯ್ಗಂ[11]ಪಿಗಳಿಗಳರಗಿಳಿಗಳು
ಮೊಱೆದಪ್ಪಿ ನುಡಿವ ಮೆಲ್ನುಡಿಗೆ
ಎಱಗೆ ಮೇಲಂಗಜಕೇಳಿಯೊಳಿಹರಲ್ಲಿ
ಸಱುಮಿಂಡಿಯರು ನಲ್ಲರೊಡನೆ ೫೩

---

[1] ಮಯ್ಯ (ಅ ಇ) [2] ಪಹ (ಅ ಉ) [3] ದ ಸೋ (ಇ) ಕೋ (ಎ ಗ) [4] ಗಳ್ವ (ಎ) [5] ರಿ (ಅ ಎ) [6] ಳಗೆ (ಎ ಗ) [7] ಲ್ಲೀ (ಇ) [8] ದಿಂದ (ಅ) [9] ಳಿ (ಇ ಗ) [10] ರೊಡನೆ (ಇ) [11] ಯಿಂಗಂ (ಐ).

ನಳಿನ ಪುಳಿನ ಪಲ್ಲವ ಚೂತ ಚಂಪಕ
ಲಲಿತ ಲತಾಗೃಹ[1]ಗಳ[1]ಗೆ
ಎಳಸಿ ಪೋಗದೆ ಮನೆಗಳಿಗೆಳೆವೆಣ್ಗಳು
ಬಳಸುತಿಹರು ಬನದೊಳಗೆ ೫೪

ಅಲ್ಲಿ ವಿವಿಧವಿಟಪಿಗಳ ವೀಥಿಗಳೊಳು
ನಿಲ್ಲದೆ ನೀರಜಾಕ್ಷಿಯರು
ಮೆಲ್ಲಡಿಯಿ[2]ಡುತೆ[2]ಡೆಯಾಡುತಿಹರು ತಮ್ಮ
ನಲ್ಲರೊಡನೆ ನಲ್ಮೆಯಿಂದ ೫೫

ನಳಿನಾಕರದೊಳೇಲಾವನದೊಡ್ಡಿನೊ
ಳೆಳೆಲತೆವನೆಯೊಳಸುಗೆಯ
ತಳಿರ್ವೊದಱೆಡೆಯೊಳಗವಿದೆಳವೆಣ್ಗಳು
ಮುಳಿದಿನಿಯರ ಕಾಡುತಿಹರು ೫೬

ಮುಳಿದೆಳವೆಣ್ಗಳಗಲದೊಡಿಗೆಯನಿತ್ತು
ತಿಳಿಪಿ ಕಾಲ್ವಿಡಿದು ಕಾದಲರು
ತಳುವದೆದೆಗೆ ಕಾ[3]ತ[3]ರವ ಪುಟ್ಟಿಸಿ ಕಾಮ ೫೭
ಕಲಹದೊಳಿಹರವರೊಡನೆ

ನಱುಸುಯಿಗಂಪಿಗೆ ಮೇಲೆ ಬಂದೆಱಗುವ
ಮಱಿದುಂಬಿಗಳ ದಾಳಿಗಳ್ಕಿ
ಸಱಿಮಿಂಡಿಯರು ಪೂತ ಸಂಪಗೆ[4]ವ[4]ರಗಳ
ಮಱೆಗೊಳುತಿಹರು ಬೇಗದೊಳು ೫೮

ಕೃತಕಾದ್ರಿಗಳೊಳು [5]ಕುಂಜ[5]ದೆಡೆಗಳೊಳು
ಲತೆ[6]ವನೆಗಳೊ[6]ಳು ತ[7]ಣ್ಪುಳಿಲ[7]
ಕ್ಷಿತಿತಳದೊಳಗಂಗಜಕೇಳಿಯೊಳು ದಂ
ಪತಿಗಳಿಹರು ಲೀಲೆಯಿಂದ ೫೯

---

[1] ದೊಳ (ಐ) [2] ಡದೆ (ಐ) [3] ತು (ಇ ಎ ಐ) [4] ಮ (ಇ ಐ)
[5] ಕುಜಂಗ (ಅ) ಕುಜ(ಎ ಗ) [6] ವನದೊ (ಅ ಇ ಎ) [7] ಣ್ಪೊಳಲ (ಅ ಎ).

ನಡೆಯ ಮೆಲ್ಪಿಂದ ರಾಯಂಚೆವೆಣ್ಗಳ ಸೋ
ರ್ಮುಡಿಯ ಸೊಂಪಿಂದ ಸೋಗೆಗಳ
ನುಡಿಯ ನುಣ್ಪಿಂದ ಗಿಳಿ[1]ಗಳ[1]ನೇಳಿಸುತಲ್ಲಿ
ಬಿಡದಿಹರೆಳೆಜವ್ವನೆಯರು ೬೦

ತೊಡೆಯ ಚೆಲ್ವಿಂ ಪೊರೆಗಳೆದೆಳೆವಾಳೆಯ
ನಡಿಯ ಚೆ[2]ಲ್ವಿಂ[2] ಕೆಂದಳಿರ
ಕ[3]ಡೆ[3]ಗೆ ಸಾರೆಂಬ ಕಮಲನೇತ್ರೆಯರಲ್ಲಿ
ಕಡುಗಾಡಿಯಿಂದಾಡುತಿಹರು ೬೧

*ಮುಳಿವ ತಿಳಿವ ಮುದ್ದುಗೆಯ್ವ ಮುಂಡಾಡುವ
ತಳರ್ವ ತಲ್ಲಣಿಪ ಕಲೆಗಳ
ತಿಳುಪುವ ತಿಳಿ[4]ದ[4] ವೇಶ್ಯಾಂಗನೆಯರು ಬಗೆ
ಗೆಳಸಿಹರೆಳೆಜವ್ವನಿಗರ ೬೨

ಅಳಿಗಲರ್ಗೊಂಚಲ ಗಿಳಿಗೆ ಮಾಮಿಡಿಗಳ
ಕಳಹಂಸೆಗಬ್ಜಕಂದಗಳ
ಎಳೆಗೋಗಿಲೆಗೆ ಕೊನರ್ಗಳನೀವು[5]ತಾ[5] ಬನ
[6]ದೊಳಗಿಹರಂಬುಜಾಕ್ಷಿಯರು[6] ೬೩

†ಪಲಸಿನ ಮಾವಿನ ಬಾಳೆ [7]ಕಿತ್ತಿಳೆ ನೇ
ಱಿಲ ತನಿವಣ್ಗಳ[7] ಸವಿದು
ಅಲರ್ವಸೆಯೊಳ್ನಲಿದಲಸಿಕೆಗಳನಲ್ಲಿ
ತೊಲಗಿಸುತಿಹರು ಪಥಿಕರು ೬೪

ಅಳಿಗಳ ಜೇವಣಶಾಲೆಯಂಗಜವೀರ
ನಲಗಿನ ಶಾಲೆ [8]ಬಾಲೆ[8]ಯರ
ಬೆಳುನೋಟ [9]ಸಿರಿ[9]ಯ ಬಿನದಶಾಲೆಯೆನಲಾ
ಪೊಳಲ ಪೂದೋಂಟವೆಸೆದುದು ೬೫

---

[1] ಯ (ಅ) [2] ಲ್ವಿಂದ (ಐ) [3] ಡ (ಅ ಉ ಎ) [4] ವ (ಉ ಗ) [5] ತ ಬನ (ಇ) ತ (ಐ) [6] ಬೆಲೆವೆಣ್ಗಳಿಹರಾ ವನದೊಳು (ಐ) [7] ಯೀಳೆಯ ನೇಱಿಲ ತನಿವಣ್ಗಳ (ಇ ಗ) ಯ ನೇಱಿಲ ಕಳಿವಣ್ಗಳ ನೆಱೆ (ಐ) [8] ಸತಿ (ಉ) [9] ಸವಿ (ಐ)
* (ಐ) ಪ್ರತಿಯಲ್ಲಿಲ್ಲ † (ಉ) ಪ್ರತಿಯಲ್ಲಿಲ್ಲ.

ನಳ ನೀಲ ಕುಮುದ ಕು[1]ಶಾಂ[1]ಚಿತಗಳು ರಘು
ಕುಲತಿಲಕನ ಸೇನೆಯಂತೆ
[2]ತಳಿತಾನಂತಕಮಲಗಳಚ್ಯುತನಂತೆ
ಕೊಳಗಳಾ ಪುರದುಪವನದ[2]　　　　೬೬

ಕೆಱೆ ಬಾವಿ [3]ಬಗರೆಗೆ[3] ಡೊಣೆ ಡೋ[4]ಣೆ[4] ದೀರ್ಘಿಕೆ
ಯೊಱತೆ ಕಾಲುವೆ ಬೆಂಚೆ ಪಳ್ಳ
ಮೆಱೆದಿರುತಿಹವಾ ಹೊಸಮಲೆದುರ್ಗದ
ಪೊಱವಳಲೆಂಟುದೆಸೆಯೊಳು　　　　೬೭

ಪೊಳಲ ಪೊಱಗಣ ನಾಲ್ಕುಂದೆಸೆಗಳೊಳಾನೆ
ಗಳ ಕುದುರೆಗಳ ವಾಹಕರ
ಕಳಕಳರವದಿಂದ ಕಣ್ಗೆಸೆದವು ಪೈ
ಹಳಿಯ ಕಳಗಳೇನನೆಂಬೆ　　　　೬೮

ಮೃಗ [5]ಮಂ[5]ದಭದ್ರ ಸಂಕೀರ್ಣ ಜಾತಿಗಳೆಂಬ
ಬಗೆಯಱಿದಱಿದಾನೆಗಳ
ಮಿಗೆ ನಿಯಮಿಸುತಿಹರಲ್ಲಿ ಮಾವಟಿಗರು
ಪೊಗಳೆ ಬಲ್ಲವರು ಭಾಪೆಂದು　　　　೬೯

ಸುರಿಯೆ ಬೆಮರು ಸೊಕ್ಕು ಸರಿಯೆ ಕುಂಭಸ್ಥಲ
ಬಿರಿಯಲಂಕುಶದ ಹೊಯಿಲಿಂದ
ಬರಿಸುತಿಹರು ಸಾಧನೆಯನಂಕದ ಮದ
ಕರಿಗಳಿಗಲ್ಲಿ ಕೋವಿದರು　　　　೭೦

ಬಿಟ್ಟ[6]ರೆ[6] ಪರಿವ [7]ಹೋ[7]ಯೆಂದ[8]ರ[8]ರಸಿನಾಣೆ
ಯಿಟ್ಟಂತೆ ನಿಲ್ವ ಸಾಧನೆಯ
ಪಟ್ಟದಾನೆಗಳು ಕಣ್ಗೆಸೆದವು ಮದದಿಂದ
ಪುಟ್ಟಿಸುತಲ್ಲಿ ಕೋಳ್ಗೆಸಱ　　　　೭೧

---

[1] ಸಾಂ (ಅ ಇ ಗ)　[2] ಕರವೆಸೆವಂಗದ ಗಂಡುಗೋಗಿಲೆಗಳಿಂ। ಚರಗಳಾ ಬನದೊಳೆಸೆದವು (ಐ)　[3] ಬಗೆರಗೆ (ಇ ಎ ಐ ಗ)　[4] ಣೆ (ಇ ಐ)　[5] ಮ (ಇ ಎ ಐ ಗ)　[6] ಡೆ (ಇ ಐ)　[7] ವೋ (ಐ)　[8] ಡ (ಇ ಐ ಗ).

ನವರತ್ನಗಳನಂಗರುಚಿಯಿಂದ ಪವನನ
ಜವದಿಂದ ರವಿತುರಗಗಳ
ಅವಯುವ[1]ಗು[1]ಣದಿನಲ್ಲೆನಿಪಶ್ವಗಳನಲ್ಲಿ
ತವೆ ತಿದ್ದುತಿಹರು ವಾಹಕರು ೭೨

[2]ಹೊ[2]ಳೆವ ಹೊಮ್ಮುವ ನಿಲ್ವ ಸೀಳ್ವೇಳ್ವ ಸುತ್ತುವ
[3]ಬಿ[3]ಳುವ [4]ಝಾಡಿ[4]ಸುವಶ್ವಗಳನು
ತಳುವದೆ ಕೋಲುನೇಣಿಂ ತಿದ್ದು[5]ತಿಹ[5]ರಲ್ಲಿ
ಬಳಿಸಂದು ಬಲು[6]ಸಾಣಿಗಳು[6] ೭೩

*ತಳಿಯ ಮೇಳೆಯ[7]ದ ಸಂ[7]ಚರಿಪ ಪತಾಕಾ
ಕುಳದಿಂದುರುವೀರಲಕ್ಷ್ಮಿ
ಕಲಿ[8]ಗ[8]ಳ ಕೈವೀಸಿ ಕರೆ[9]ವಂತಿಹವ[9]ಲ್ಲಿ
ಕ[10]ಳ[10]ಗಳಂಕದ ಕಾಳಗದ ೭೪

ನುಡಿದ ಪಂಥದ ಮಾತ ಮಱೆಯದೆ ಮನದೊಳ
ಗಡಿಯು ತೆಗೆಯದೆ ಹಿಂದಕ್ಕೆ
ಕಡುಗಲಿಗಳು ಕಾದುತಿಹರಭ್ಯಾಸದ
ಪಡಿಯಚ್ಚಿನಂತೆ [11]ಕಳದೊ[11]ಳು ೭೫

ಪುರದ ಬಹಿರ್ವಳೆಯದೊಳೆಣ್ದೆಸೆಯೊಳು
ಗರುಡಿಗಳಿಹವದಱೊಳಗೆ
ಬಿ[12]ರಿ[12]ದಿನ ಬಂ[13]ಟರ್ಗೆ[13] ಬಿಡದೆ ಪಾಡುಗಳನು
ಬರಿಸುವಭ್ಯಾಸಿಗಳಿಹರು ೭೬

*ಸೂಡಿನ ಕಾ[14]ಳ[14]ಗದವರ ಕೊಱೆತೆವಾತ
ನಾಡೆ ವಹಿಸಿ ಕಾದುವ[15]ರ[15]
ಪಾಡಿನ ಕಾ[16]ಳ[16]ಗದವರ ಕೋಳಾಹಳ
ವೀಡಿಱಿದುದು ದೆಸೆಗಳನು ೭೭

---

[1] ಗ (ಅ) [2] ವೊ (ಅ ಇ ಗ) [3] ಬೀ (ಇ) [4] ರೂಢಿ (ಐ) [5] ವ (ಐ) [6] ಸಾಣಗಳು (ಅ) ಸಹಣಿಗರು (ಐ) ಸಹಣಿಗಳು (ಇ ಉ) ಸಹಣಿಗಳಲ್ಲಿ (ಎ ಗ) ಸಾಹಣಿಯರು (ಕ) [7] ಸಂ (ಎ ಗ) [8] ವೀರಗ (ಎ ಗ) [9] ದಂತಿಹರ (ಇ) [10] ಲಿ (ಅ) [11] ಖಣದೊ (ಇ) ಕಣನೊ (ಕ) [12] ರು (ಐ) [13] ಟಿಕೆ (ಎ) [14] ಳೆ (ಇ ಐ ಗ) [15] ವರು (ಅ) [16] ಳೆ (ಐ) *(ಉ) ಪ್ರತಿಯಲ್ಲಿಲ್ಲ.

*ಕೋಡುಗಳಿಗೆ ಸೂನಗಿಗಳ [1]ಸೇರಿಸಿ[1]
ಜೋಡಿಸಿ ಪಣೆಗೆ ಕೂರಲಗ
ಕೂಡೆ ಕಾದಿಸುವರು ಕೋಣಗಳನು ಜೂ
[2]ದಾಡೆ[2] ಪುಲಿಗಳೊ[3]ಡ[3]ನಲ್ಲ ೭೮

ಇತ್ತರ[4]ದೊಳು[4] ಜೂದುಗಾಱರು ಕವಳವ
ತುತ್ತಿ ನಿಂಬೆಯು ಪಣ್ಪುಳಿಯನು
ನೆತ್ತಿಗೂರಸಿ ಖೋಯೆಂದಾರಿ ತಗರಿನ
ಪೊತ್ತವನಲ್ಲಿ ಕಾದಿಪರು ೭೯

*ಬಿಲ್ಲಾಳು ಗುಱಿ[5]ಗಳ[5]ನೆ[6]ಸು[6]ವ ಬಯಲು ಬಲು
ಮಲ್ಲರು ಹೆಣಗುವ ಬಯಲು
ಪಲ್ಲಮಱಿಯ ಸಾಧನೆಯ ಬಯಲು ಕ
ಣ್ಗಲ್ಲಲ್ಲಿ ಕ[7]ರಮೆ[7]ಸೆದಿಹುದು ೮೦

ಎಳಗನ ಪಾಹಳಿಗಳ ರಾ[8]ಯು[8]ಕುವರರ
ಕಳಕಳದಿಂದರಸುಗಳ
ವಿಳಸಿತ ವರವಾಜಿಗಳ ವಾಹಳಿಗಳಿಂ
ದೆಳಸಿಹುದಾ ಬಹಿರ್ವ[9]ಳೆಯು[9] ೮೧

ಹರಿಕಾಱರ ಖಂಡೆಯಕಾಱರ ಬಲು
[10]ಹರಿಗೆಕಾ[10]ಱರ ಸಬಳಿಗರ
ಸುರಗಿಕಾಱರ [11]ಬಿಲುಗಾಱರ ವಾಹಳಿ[11]
[12]ಪುರದ ಪೊಱಗೆ ಕಣ್ಗೆಸೆದವು[12] ೮೨

*ಮುಂಚುವ [13]ಮನ[13]ದಿಂದ ಮುಗಿಲ ಮುಟ್ಟುವ ಹಯ
ಸಂಚಯವನು ಸಹಣಿಗಳು
ಪಂಚಧಾರೆಯೊಳು ಷಡಂಗದೊಳಲ್ಲಿ ಕೈ
ಸಂಚಿನಿಂದೊಲಿದೇಱುತಿಹರು ೮೩

---

[1] ಜೋಡಿಸಿ (ಐ) [2] ಜಾಡಿ (ಇ ಐ) [3] ಡ್ಡಿ (ಇ) [4] ದಲ (ಇ ಎ ಗ)
[5] ಯು (ಇ) [6] ಸೆ (ಐ) [7] ಣ್ಗೆ (ಅ) [8] ಜ (ಅ) [9] ಳಲು (ಅ ಎ ಗ)
[10] ಹರಕಾ (ಉ) [11] ಹರಿಗೆಯ ಕಾಱರ ವಾಹಳಿ (ಅ) ವಾಹಳಿಯ ಬಯಲು
ಪುರಕಂ (ಎ ಗ) [12] ಹೊರಗೆ ಕಣ್ಗೆಸೆದಿರುತಿಹುದು (ಎ ಗ) [13] ಹಯ (ಅ)
* (ಉ) ಪ್ರತಿಯಲ್ಲಿಲ್ಲ.

*ಉಂ[1]ಚಯು ಪಡ[1]ತೆಯು ಪ[2]ರಿಜು ಚೆಟ್ಟಡಕಿ[2]ಗ
ಳಂ ಚದುರರು ತಂದಲ್ಲಿ
ಹಿಂಚುಮುಂ[3]ಚ[3]ಗೆ ಪಾಱಿಸುತಿಹರೊಡ್ಡದ
ಸಂಚುವಂಚನೆಗಳನಱಿದು ೮೪

ಇಂತು ವಿಚಿತ್ರ ನಾನಾವಿಧರಚನೆಯು
ನಾಂತೆಸೆವಾ ಪೊಱವೊಳಲ
ಅಂತರಾಳದೊಳಿರ್ಪುದೊಂದು ಕೋಟಾಚಕ್ರ
ವಂತರಿಕ್ಷವ ಚುಂಬಿಸುತ ೮೫

ಸ್ಥಲವಲ್ಲ ನಿಲಲಾಗಸ[4]ವೆಂ[4]ದು ಬೆಳ್ಮುಗಿ
ಲಿಳಿದು ಬಂದಾ ದುರ್ಗವನು
ಬಳಸಿ ನಿಂದಂತಿರೆ ಧವಳಪರಿಧಿ ಕ
ಣ್ಗೊಳಿಸಿ[5]ದು[5]ದೇನ [6]ಬಣ್ಣಿಪೆನು[6] ೮೬

ಚಂಡಮಾರಿಯು ನಸುದೆಱೆದ ಬಹಳಮುಖ
ಮಂಡಲಗಳ ಶಂಕೆಯನು
ಕಂಡರ ಮನಕೆ ಪುಟ್ಟಿಸುತ ಸಾಲ್ವಿಡಿದಂಬು
ಗಂಡಿಗಳಿಹ[7]ವದ[7]ಱೊಳಗೆ ೮೭

ಅಂಬುಜದೆಲೆವೊದರ್ಗಳೊಳುಳು ರಥಾಂಗ ಕ
ದಂಬ [8]ನಲಿಯೆ[8] ಚಂಡಕರನ
ಬಿಂಬವೊಯ್ಯನೆ ಸಿಕ್ಕಿ ಸಿಡಿಮಿಡಿಗೊಳುತಿಹು
ದಂಬುಗಂಡಿಗ[9]ಳೊಳಗಲ್ಲಿ[9] ೮೮

ಎಡಬಲದೊಳಗಲ್ಲದೆ ಬಟ್ಟೆ ಪೋಪ[10]ಡೆ[10]
ನಡುವೆ ತರಣಿಗಿಲ್ಲೆನಲು
ನುಡಿ ನೋಟದ ಪವಣಾ ಕೋಟೆಯಗ್ರದೊ
ಳಡಿಯಿಡಲೇನಾರ್ತಪುದೆ ೮೯

---

[1] ಚೆಯು ಪರ (ಇ) ಚಯು ಪದ (ಐ) [2] ರಜು ಬೇಡಕ್ಕಿ (ಅ) ರಿ ಜೂಜಿಟಡಕಿ (ಇ ಐ) [3] ಚಾ (ಎ ಗ) [4] ಕೆಂ (ಅ) ವೆಂ (ಉ) [5] ಹು (ಅ ಉ ಎ) [6] ಪೇಳುವೆನು (ಇ ಎ ಐ ಕ ಗ) [7] ವವ (ಐ) [8] ವಲಿಯೆ (ಅ) ಗರಿಯೊ (ಐ) [9] ಳಹವಲ್ಲಿ (ಐ) [10] ರೆ (ಇ ಎ ಐ ಗ) * (ಉ) ಪ್ರತಿಯಲ್ಲಿಲ್ಲ.

ತರಣಿಯ ರಥದ ಕುದುರೆಯ ಕಾಲಾಟದ
ಪರಿಯನೀಕ್ಷಿಸುವರಾ ಪುರದ
ಪರಿಧಿಯನೇಱ ಪರೀ[1]ಕ್ಷಿಪ[1]ರೆನಲದ
ಱರವನದೇನ[2]ನೊರೆವೆ[2]ನು　　೬೦

ಪೊಳಲ ಸಿರಿಯ ಬಿನದಕೆ ಬನದೇವಿಯ
ರೆಳಸಿ ಸಮೆದ ಮಲ್ಲಿಗೆಯ
ಬೆಳರ್ವಂದರೋಳಿಯಂತೆಸೆದವದಱೊಳು ತೆ
[3]ಳ್ಪೆಳು[3]ಕಿನ ನಿಡಿಯುಪ್ಪರಿಗೆಗಳು　　೬೧

ಪೊಳಲ ಗಾಡಿಯ ನೋಡ ಬಂದ ದೇವತೆಗಳ
[4]ಪೊಳೆವ[4] ವಿಮಾನ ವಿತತಿಯ
ಪೊಳಹಿನಂತುಱೆ ಕಣ್ಗೊಳಿಸಿದವಲ್ಲಿ ನು
ಣ್ಬಳುಕಿನ ಮುಗಿಲಟ್ಟಳೆಗಳು　　೬೨

ಮುಗಿಲ[5]ಮಂಡಲ[5]ವಾಕಾಶಮಂಡಲದೊಳು
ಮಿಗೆ ಮಂಡಳಿಸಿ ನಿಂದವೆಂಬ
ಬಗೆಯ ನಿಟ್ಟಿಸಿ ನೋಳ್ಪರಿಗೆ ಪುಟ್ಟಿಸುತ ನಿಡು
ಮುಗಿಲಟ್ಟಳೆಗಳು ಮೆಱೆ[6]ದ[6]ವು　　೬೩

ತರುಣತರಣಿಮಂಡಲದಿಂದೆಸೆವ ಪೂರ್ವ
ಧರಣೀಧರ[7]ದಂತೆ[7] ಕಣ್ಗೆ
ಕರಮೆಸೆ[8]ದುದು[8] ರತ್ನ ಕಳ[9]ಶಾಂ[9]ಚಿತ ಗೋ
ಪುರವಾ ಗಿರಿದುರ್ಗದೊಳಗೆ　　೬೪

ಸುಳಿವ ತುರಂಗಾ[10]ಳಿ[10] ತೆರೆ ನೊರೆ ಬೆಳ್ಗೊಡೆ
ಘುಳುಘುಳುರವ ಪುರಜನದ
ಕಳಕಳವಾಗಲಾ ಪುರಿ ಕಡಲಂತೆ ಕ
ಣ್ಗೊಳಿಸಿದುದೇನ ಬಣ್ಣಿಪೆನು　　೬೫

---

[1] ಕ್ಷಕ (ಅ ಉ ಎ ಗ) ಕ್ಷತ (ಇ)　[2] ಬಣ್ಣಿಪೆ (ಉ)　[3] ಳ್ವೆಳಿ (ಅ ಉ) ಳ್ವೆಳಿ (ಇ ಗ) ವಳು (ಐ)　[4] ಇಳಿವ (ಉ) ಪೊಳವ (ಐ)　[5] ಬಳಗ (ಇ ಐ) [6] ದಿಹ (ಎ ಗ)　[7] ತೇಜ (ಉ)　[8] ದವು (ಅ)　[9] ಸಾಂ (ಐ)　[10] ವಳಿ (ಅ).

ಕೇರಿಗಳ್ದನಮನೋಹಾರಿಗಳ್ಸುಮಸಂ
ಹಾರಿಗಳ್ತುರಂಗಬಲದ
ದಾರಿಗಳ್ಪರಿಮಳಭೂರಿಗಳ್ಬಹುವಾರ
ನಾರಿ[1]ಗಳಾ ಪುರವರದ[1] ೯೬

ಪಳುಕಿನ ಪಚ್ಚೆಯು ನೀಲದ ಕೆಂಗಲ್ಲ
ಬೆಳಗಿನ ಲಹರಿಯಿಂದೆಸೆವ
ನಿಳಯಗಳಿಂದಾ ಪುರದ ಕೇರಿಗಳು ಕ
ಣ್ಗೊಳಿಸಿ[2]ದು[2]ವತಿಶೋಭೆವೆತ್ತು ೯೭

ಪುರಲಕ್ಷ್ಮಿಗಿರದೆ ಪಿಡಿದ ಬೆಳ್ಗೊಡೆಗಳಂತೆ
ಧರಣಿಗಿಳಿದು ಮಂಡಳಿಸಿ
ನೆ[3]ರೆ[3]ದ ಬೆಳ್ಮುಗಿಲಂತೆಸೆದವು ಸೌಧೋ
ತ್ಕರಗಳಾ ಗಿರಿದುರ್ಗದೊಳಗೆ ೯೮

ಅಲ್ಲಿ ಮುಗಿಲನಳ್ಕಿಱಿವ ಮಾಡಗಳಗ್ರ
ದಲ್ಲಿಹ ದೀಹದೇಣಗಳು
ನಿಲ್ಲದೆ ನೆರೆಯಲೆಣಿಸುವವು ಮೃಗಧರ
ನಲ್ಲಿ ಮೆಱೆವ ಮೃಗದೊಡನೆ ೯೯

ತಳಿರುಯ್ಯಲೆಳೆಮಾವು ಕಳಸ ಕನ್ನಡಿ ಗುಡಿ
ತಳಿರ್ದೋರಣ ಚಿತ್ರಭಿತ್ತಿ
ಪಳುಕಿನ ಜಗಲಿ ಯಂತ್ರದ ಬಾವಿಯಿಲ್ಲದ
ನಿಳಯವಿಲ್ಲಾ ನಗರಿಯಲಿ ೧೦೦

*ಚಾಟುವಚನ ಮೋಹನ ವಿದ್ಯಾನಟಿ
ನಾಟಕಶಾಲೆ ರಸಿಕರ
ಬೇಟದ ಬೆಳೆವೊಲನೆನಲಲ್ಲಿ ವೇಶ್ಯಾ
ವಾಟ ವಿಡಾಯವೆತ್ತಿಹುದು ೧೦೧

[1] ಗಳಾಪುರವರದ (ಅ) ಗಳಾಪುರದೊಳಗೆ (ಇ ಗ) ಯರಾಪುರಜನದ (ಐ)
[2] ದ (ಇ) [3] ರ (ಉ ಎ ಐ) * (ಉ) ಪ್ರತಿಯಲ್ಲಿಲ್ಲ.

*ಹುರುಡಿನ ಹು[1]ತ್ತು[1] ಹುಸಿಯುಹುದಿ ಗ[2]ದುಗಿ[2]ನ
ಗರುಡಿ ಗನ್ನದ[3]ಗಡಿ ಹೊರೆಯು[3]
ಹೊರಳಿ ಹೋರಾಟದ ಹೊಲ[4]ನೆನೆ[4] ಕಣ್ಗಲ್ಲಿ
ಕರವೆಸೆದುದು ಸೂಳೆಗೇರಿ ೧೦೨

ಸಗ್ಗದ ಸೂಳೆಯ[5]ರಿಂದ[5] ಸಾಸಿರ್ಮಡಿ
ವೆಗ್ಗಳವಹ ಚಲ್ವಿಕೆಯು
ಸುಗ್ಗಿಯ ಸೂಳೆಯರಿಹರಲ್ಲಿ ನೋಟದಿಂ
ಮುಗ್ಗಿಸಿಕೊಳುತ ಮುನಿಗಳ ೧೦೩

ಅಲರಂಬಿನಿಂದೆಚ್ಚು ಕೆಡಹಿ ಮದನ ಕಾಮಿ
ಕುಲವ ಕೋಳ್ಗೊಳಲೆಂದು ತೆಗೆದ
ಅಲಗಿನಂತೆಸೆದರಾ ಕೇರಿಯೊಳಗೆ ವಾರ
ಲಲನೆಯರೇನ ಬಣ್ಣಿಪೆನು ೧೦೪

ಮುಗುಳ್ನಗೆಯಿಂದ ಮುನಿಗಳ ಬೆಳ್ನುಡಿಯಿಂದ
ಬಿಗುಹುಕಾಱಿರ ಬಲ್ಮೆಯಿಂದ
ಬಗೆಗಾಱಿರನೆದೆಗೆಡಿಸುವರಲ್ಲಿಯು
ಬಗಸೆಗಂಗಳ ಬಾಲೆಯರು ೧೦೫

ಲಲಿತವಿಲಾಸ ಬಿಬ್ಬೋಕ ವಿಭ್ರಮಗುಣ
ಕಿಲಕಿಂಚಿತಲೀಲೆಗಳು
ತೊಲಗದೆ ಸಲೆ ನೆಲಸಿಹವಾ ಕೇರಿಯ
ಬೆಲೆವೆಣ್ಗಳೊಳಗೆ [6]ಮೆಯ್ವೆತ್ತು[6] ೧೦೬

ಅಸಮಸಾಯಕಗೆ ಬಿಲ್ಲಾಗದ ಪುರ್ಬಿನ
ಕುಸುಮಕೋದಂಡದ ಭಟಗೆ
ಎ[7]ಸು[7]ವಂಬಾಗದ ನೋಟದ ಗಣಿಕಾ
ವಿಸರವಿಲ್ಲಾ ಕೇರಿಯೊಳು ೧೦೭

---

[1] ಟ್ಟು (ಕ) [2] ದುಕಿ (ಇ) ದಿಕಿ (ಎ ಗ ಟ) ದಕಿ (ಚ) [3] ಗಾಡಿಹೊಯ್ಯೆ (ಎ ಗ) [4] ನೆಂದು (ಎ) [5] ಗರ್ಂದ (ಐ) [6] ಮೆಲ್ಮಾತು (ಎ ಗ) [7] ಸೆ (ಅ)
* (ಉ) ಪ್ರತಿಯಲ್ಲಿಲ್ಲ.

ಬಾರದೊಡಱಿಯೆನು ಬಂದು ಜಯಂತನಾ
ಕೇರಿಯ ಕೆಲ್ಲನೋಟಗಳ
[1]ವಾರವಧುಗಳ ಕಂಡಡೆ ದಿವ್ಯ[1]ವೇಶ್ಯಾ
ನಾರಿಯರಿಗೆ ಮೋಹಿ[2]ಸುವನೆ[2] ೧೦೮

ಸುಳಿಯ[3]ದೊಡ[3]ಱಿಯೆನಾ ಕೇರಿಗೆ ಮೂದೇವ
ರಳವಿನಿಂದೆಯ್ತಂದಡವರು
ಉಳಿದು ಪೋಪರೆ ಯಜ್ಞಸೂತ್ರೇಂದುಖಂಡ ಕೋ
ಮಳಕೌಸ್ತುಭ[4]ಮಣಿ[4]ಯಿಂದ ೧೦೯

ನಡವಳಿಕಾಱರ ನಂಟರ ಪರದರ
ಕಡುಗಲಿಗಳ ಕರಣಿಕರ
ಮಡಿವಾಳ ಮಾಲೆಗಾಱರ ಕೇರಿಕೇರಿಗ
[5]ಳ್ಬಿಡದೆ[5]ಸೆದವು ದುರ್ಗದೊಳಗೆ ೧೧೦

ಪ[6]ಡೆವಳ್ಳ[6]ರ ಪಗರಣಿಗರ [7]ರಸಿಕರ[7]
ಗಡಿಯ ಮನ್ನೆಯರ ನಾಯಕರ
ಅಡಪವಳ್ಳರ ಪಡಿಯಱ[8]ರ[8]ಡಂಗಾಯ್ತರ
ನಿಡುಗೇರಿಗಳೊಪ್ಪಿದವು ೧೧೧

*ಘುರವಟಿಗರ ಗಜವಾಜಿವಾಹಕರ ವಾ
ಗ್ವರರ ವಣಿಗ್ವಲ್ಲಭರ
ಗರುಡಿಯಾಚಾರ್ಯರ ಗಮಕರಕ್ಕರಿಗರ
ಪಿರಿಯ ಕೇರಿಗಳೊಪ್ಪಿದವು ೧೧೨

ನಚ್ಚಣಿಗರ ನಗೆಗಾಱರ ಬಗೆಯು ಬ
[9]ಲ್ಲಿ[9]ಚ್ಚೆಗಾಱರ ಕೋವಿದರ
ಅಚ್ಚುಗಾಱರ ಬಣ್ಣಗಾಱರ ಕೇರಿಗ
ಳಚ್ಚರಿ ಮಿಗೆ ಕಣ್ಗೆಸೆದವು ೧೧೩

---

[1] ವಾರಣನಡೆಯ ನಾರಿಯರ ಕಂಡರೆ (ಎ ಗ) [2] ಪರೆ (ಅ) [3] ದರ (ಅ)
[4] ಚೂಣಿ (ಇ) [5] ಳೊಡನೆ (ಇ ಉ ಎ ಐ) [6] ಡಿವಾರ (ಐ) [7] ರಸುಗಳ (ಎ ಗ)
[8] ರಡಂ (ಉ ಎ ಐ ಗ) [9] ಲ್ಲಿ (ಇ ಉ ಎ) * (ಉ) ಪ್ರತಿಯಲ್ಲಿಲ್ಲ.

ಕಂಚುಗಾಱರ ಕಲ್ಕುಟಿಗ ಬಡಗಿಗಳ
ಸಂಚುಗಾಱರ ಕಮ್ಮಱರ
ಅಂಚುಗಾಱರ ಸಮ್ಮಗಾಱರ ಸದನದ
ಸಂಚಯವೆಸೆದುದದಱೊಳು ೧೧೪

*ಮಜ್ಜನ[1]ವಾಳ[1]ರ ಮಣಿಹಗಾಱರ [2]ಚಿ[2]ಲು
ಬೆಜ್ಜರ ಬೆಸದಾಳುಗಳ
ಅಜ್ಜರ ಕೇರಿ ಕೇರಿಗಳಿಂದಾ ಪುರಿ
ಪಜ್ಜಳಿಸುತ ಮೆಱೆದಿಹುದು ೧೧೫

ಬೆಲೆವೆಣ್ಗಳಾಡುಂಬೊಲ ಬೆಸವೆಣ್ಗಳ
ನೆಲದಾಣ ಬಿಡುವೆಣ್ಣುಗಳ
ನಿಳಯವೆನಿಸಿ ಮೆಱೆದಿಹುದಾ ದುರ್ಗದ
ಕಲಕಲರವ ರಾಜವೀಥಿ ೧೧೬

ಬಸಿವ ಸೊರ್ಕಿಂದಾನೆಗಳ ವಾಜಿವದನದಿಂ
ದೊಸರ್ವ ಲಾಲಾಜಲದಿಂದ
ಬೆಸಮಕ್ಕಳೊಗುವ ಮೈಬೆಮರಿಂದಾ ಬೀದಿ
ಕೆಸರ್ವಡೆದಿಹುದನವರತ ೧೧೭

*ಧರಣೀಶ್ವರನೋಲಗಕೆ ಬರ್ಪರಸುಮಕ್ಕ
ಳೊರಸೊರ[3]ಸಿಂ[3] ಪೊಂದೊಡಿಗೆಯ
ಪರಿಕಲಿಸಿರ್ದ ಪರಾಗದಿಂ ಹೊಮ್ಮಿಗ
ಪರಿದಂತಿಹುದಾ [4]ಬೀದಿ[4] ೧೧೮

ಎಲೆ ರಾಯ ನಿನ್ನ ಸೇನಾಪದಧೂಳಿಗೆ
ನೆಲೆಮಾಡಬೇಡೆನ್ನನೆಂದು
ಜಲಧಿ ಗೋಳಿಡುವಂತೆ ಮದಕರಿ ಹಯ ಭಟ
ಕಲಕಲವೆಸೆದಿಹುದಲ್ಲಿ ೧೧೯

---

[1] ವಳ್ಳ (ಇ ಗ)   [2] ಕ (ಅ ಎ ಕ ಗ ಟ) ಚೆ (ಚ)   [3] ಸೊಂ (ಇ)
[4] ಭೂಮಿ   * (ಉ) ಪ್ರತಿಯಲ್ಲಿಲ್ಲ.

ಪುರವೆಂಬ ಪುಂಡರೀಕದ ನಟ್ಟನಡುವಣ
ವರಕರ್ಣಿಕೆಯಿದೆಂಬಂತೆ
ಸಿರಿಯಿಂದ ಸಿಂಗರದಿಂದರಮನೆ ಕಣ್ಗೆ
ಕರಮೆಸೆದಿಹುದು ಚೆಲ್ವಿಂದ ೧೨೦

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳ[1]ಗೆ ಒಂ[1]ದನೆಯ
ವಿದಿತಾಶ್ವಾಸದೊಳ್ನಾಲ್ಕನೆಯದು ಸಂಧಿ ೧೨೧
ಮೃದುಪದಚಯಸಂಬಂಧಿ

---

[1] ಗೊಂ (ಉ) * (ಅ ಎ ಕ ಗ ಚ ಟ) ಪ್ರತಿಗಳಲ್ಲಿಲ್ಲ.

# ಐದನೆಯ ಸಂಧಿ

## ಕಂಪಿಲನ ವಿಭವ

ಸೂಚನೆ: ಜಸದಿಂದ ತೇಜದಿಂ ವಿನಯದಿಂ ವಿಭವದಿಂ
ದೆಸೆದನಾ ಕಂಪಿಲ ನೃಪತಿ

ಪಟ್ಟಣವೆಂದೆಂಬ ಪಾರಾವಾರದ
ನಟ್ಟನಡುವೆ ಲಂ[1]ಘಿಸಿದ[1]
ಕಟ್ಟಿದ ಪಳಯಿಗೆಗಳ ಪಡಗಿನ ಸಮು
ಕಟ್ಟಿ[2]ನಂತೆ[2]ಸೆದುದಾ ನಿಳಯ ೧

ಕರಿಶಾಲೆ ಹಯಶಾಲೆ ನಿಶಿತಾಯುಧಶಾಲೆ
ಸುರುಚಿರ ನಾಟಕಶಾಲೆ
ವರಚಿತ್ರಶಾಲೆ ಮಂತಣಶಾಲೆಗಳಿಂ
ದರಮನೆ ಕಣ್ಗೆ[3]ಡ್ಡವಾಯ್ತು[3] ೨

ವಿನುತವಿದ್ಯಾಮಂಟಪ ಮಣಿಮಯಮೋ
ಹನಮಂಟಪ ರನ್ನವೆ[4]ಸದ[4]
ಘನತರ ಭದ್ರಮಂಟಪಗಳಿಂದಾ ರಾಯ
ಮನೆ ರಾರಾಜಿಸುತಿಹುದು ೩

ಕರುಮಾಡ ಕಂಡರಿಸಿದ ಗೋಪುರ ಪೊಂ
ಬರಹದ ಲೋವೆ ಪವಳದ
ಪರಿ[5]ಣಯ[5]ಮಂಟಪ ಮಣಿವಾಗಿಲೆಸೆಯೆ ಕ
ಣ್ಗರಮನೆ ಗಾಡಿವೆತ್ತಿಹುದು ೪

ಕುಸುಮ ಹಜಾರ ದಿವಾಣ ಚಾವಡಿ ಹೊನ್ನ
ಕುಸುರಿವೆಸದ ಮಾಡಗಳ
ವಿಸರವೆಸೆಯಲರಮನೆ ಕಣ್ಗೆ ರಾರಾ
ಜಿಸುತಿಹುದೇನ ಬಣ್ಣಿಪೆನು ೫

---

[1] ಬಿಸುವ (ಅ ಐ) [2] ನಿಂದೆ (ಐ) [3] ವಂದಿಹುದು (ಕ) [4] ಸೆವ (ಅ ಐ ಚ) ಸವ (ಉ) ಸೆದ (ಇ ಎ ಕ ಗ ಚ ಟ) [5] ಯಣ (ಐ).

*ಕಲಭಬೃಂಹಿತ ಹಯಹೇಷಾರವ ಭಟ
ಕಳಕಳನಿನದ ಯಾಚಕರ
ಉಲುಪೆಸೆದಿರಲರಮನೆಯ ಬಾಗಿಲು ಶಬ್ದ
ಕುಲದಿಂದ[1]ಸಮೆದ ವೊಲಿಹುದು[1] ೬

ದೆಸೆದೆಸೆಯವನಿಪರಟ್ಟಿದುಪಾಯನ
ವಿಸರವ[2]ನೃ[2]ಪಮಂತ್ರಿಗಳಿಗೆ
ಒಸೆದೊಪ್ಪಿಸುವ ರಾಯಭಾರಿಗಳಿಂ ಬಾಗಿ
ಲೆಸೆದಿಹುದಾ ನರಪತಿಯು ೭

ಬಂದುದಿಲ್ಲಿವರು ಬಹಳದಿನದಿಂದೆಂದು
ತಂದ ಕಪ್ಪವನೊಪ್ಪಿಸುವರ
ಮುಂದುಗೆಡಿಪ ಮುಖ್ಯಮಂತ್ರಿಗಳಿಂ ಕಣ್ಗೆ
ವಂದಿಹುದಾ ನೃಪನಿಳಯು ೮

ಕಲಹಂಸ ಕಮಲಾಕರದೊಳಿರ್ಪಂತಾ
ವಿಲಸಿತ ರಾಜಗೃಹದೊಳು
ನೆಲಸಿರ್ಪನಹಿತಕದಳಿಕಾನನಕರಿ
ಕಳಭ ಕಂಪಿಲನೆಂಬ ನೃಪತಿ ೯

*ಉರುತರ ವಿಂಧ್ಯಾಟವಿಯೊಳು ಸಿಂಹನಂ
ಬರದೊ[3]ಳಮಲರವಿಬಿಂಬ[3]
ಕರಮೆಸೆವಂತಾ ನಿ[4]ಳ[4]ಯದೊಳರಿಹರಿ
ಶರಭ ಕಂಪಿಲನೊಪ್ಪುತಿಹನು ೧೦

ನಿರ್ಣೀತಸಪ್ತೋಪಾಯ ನಿಪುಣ ಸಂ
ಪೂರ್ಣವಿಭವನುರುದಾನಿ
ಚೂರ್ಣೀಕೃತ ರಿಪುಗಿರಿದುರ್ಗನಿಹನಲ್ಲಿ
ಕರ್ಣಾಟಪತಿ ಕಂಪಿಲನು ೧೧

---

1 ವೊಲಿದಿರುತಿಹುದು (ಇ) 2 ನು (ಐ ಗ) 3 ಳು ರವಿಯಿರ್ಪ ತೆಱದಿ (ಇ) 4 ಳೆ(ಎ) * (ಉ) ಪ್ರತಿಯಲ್ಲಿಲ್ಲ.

ನಿಡಿದೋಳ್ಪೆತ್ತ ವಿಕ್ರಾಂತಿ ಸೊಬಗನಾಂತೆ
ಕಡುಶೌಚಗುಣ ನಾಲಗೆಯು
ಪಡೆದ ಸುವಿದ್ಯೆ ಜೀವಂಬೆತ್ತ ಜಸಮೆಂದು
ನುಡಿವರಾ ನೃಪನ ಬಲ್ಲವರು  ೧೨

ಉರಗ [1]ದಿಗಿಭ[1] ಕೂರ್ಮಗಳು ಪೆಡೆ ಪೆಗಲು ಬೆ
ನ್ನಿರಿಯೆ ಪೊತ್ತುದಱಿಂದೇನೆಂದು
ಧರಿಸಿದನಾಜ್ಞಾರೂ[2]ಪದಿಂ[2] ಕಂಪಿಲ
ನರಪತಿ ನಿಖಿಳಭೂಮಿಯನು  ೧೩

ಎಳೆವಿಸಿಲಂತೆ ಪವಳದ ಪೊಳಪಿನಂತೆ
ತಳಿರಂತುದಯರವಿಯಂತೆ
ತೊಳಪ ಕೆಂಬಲರಂತವನ ತೇಜ ವೈರಿಭೂ
ತಳದೊಳಿಹುದು ಪರಿಕಲಿಸಿ  ೧೪

*ತವೆ ಕಾಯ್ದುರ್ಕ್ಕಿನುರುಳಿ ಕಳ್ಳ ಬೆಳ್ಳರ
ನಿವಹದೊಳೆಂತಿಹುದಂತೆ
ಅವನುಗ್ರತೇಜಮಿತ್ರಾರಿಗಳಿಗೆ ಸಂ[3]ತ
ಸವನುಬ್ಬೆಗವ[3] ನೀವುತಿಹುದು  ೧೫

ಆ ರಾಯನ ಕೀರ್ತಿತೇಜಗಳಿಂದೀ
ಧಾರುಣಿ ಕಣ್ಗೆ ಸೆ[4]ದಿಹುದು[4]
ಭೂರಮೆ ತೊಟ್ಟ ಕೆಂಗಲ್ಮುತ್ತು [5]ದೊಡವಿನ[5]
ಚಾರುಕಾಂತಿಗಳಿವೆಂಬಂತೆ  ೧೬

ಅವನ ತೇಜೋಗ್ನಿಯಿಂ ಕಾಯ್ದರಿನೃಪರಾ
ಹವಕ್ಕೈತಂದವನಸಿಯ
ನವಧಾರಾಜಲದೊಳ್ಮಿಂದು ನಾಕದ
ಯುವತಿಯರೊಡ[6]ನೊ[6]ಸೆದಿಹರು  ೧೭

---

[1] ದಿಗ್ಗಜ (ಇ)  [2] ಪಿನಿಂ (ಐ)  [3] ತೋಷವ ಭೇದದಿ (ಎ ಗ)  [4] ದತ್ತು (ಇ ಐ) ಯಿತ್ತು (ಉ) ದಿತ್ತು (ಎ ಗ)  [5] ವಸರದ (ಇ)  [6] ನೆ (ಇ ಉ ಚ ಟ)
* (ಉ) ಪ್ರತಿಯಲ್ಲಿಲ್ಲ.

ಇದು ತಾರೆಯಿದು ತಾರಾಚಲವಿದು ಚಂದ್ರ
ನಿದು ಸವಿಗಡಲಿದು ಹಾರ
ಇದು ಹಿಮವೆಂದು ತಿಳಿಯಬಾರದಾ ರಾಯ
ನುದಿತ ಕೀರ್ತಿಯ [1]ಬೆಳ್ಪ[1]ನಿಂದ ೧೮

*ಪೊಱಗೊಳಗಿಡಿಯಲವನ ಕೀರ್ತಿಯ ಬೆಳ್ಪು
ಮೆಱೆದುದು ಕಮಲಭವಾಂಡ
ಮಿಱುಪಂಚೆವೆಣ್ಣಿನ ಗರ್ಭದತತ್ತಿಯು
ತೆಱದಂತೇನ ಬಣ್ಣಿಪೆನು ೧೯

ತಿಳಿಜೊನ್ನದ ನಟ್ಟನಡುವೆ ಸಂಪೂರ್ಣೇಂದು
ಥಳಥಳಿಸುವ ಮಾಳ್ಕೆಯೊಳು
ತೊಳಗಿದುದಾ ನೃಪತಿಯ ಕೀರ್ತಿರುಚಿಯೊಳು
ಮುಳುಗಿದ ಕಮಲಭವಾಂಡ ೨೦

ಕುಸುಮಶರನ ಕಾಂತೆಯ ಬಹುರೂಪಿನಂ
ತೆಸೆವ ರಾಣಿಯರು [2]ಪ[2]ಲಬರು
ಪೊಸಗಾಡಿವಡೆದಿರುತಿಹರಾ ಕ[3]ರ್ನಾ[3]ಟ
ವಸುಧಾಧೀಶ ಕಂಪಿಲಗೆ ೨೧

ರೂಪು ಲಾವಣ್ಯ ವಿಲಾಸ ಸರಸಸ
ಲ್ಲಾಪದಿಂದಮರಧರಣಿಯ
ಚಾಪಲಾಕ್ಷಿಯರನೇಳಿಪ ಚ[4]ದುರೆ[4]ಯರಾ
ಭೂಪತಿಗಿಹರು [5]ಪ[5]ಲಬರು ೨೨

ಬೇಟ ಬೆಡಗು ಬಿಂಕದಿಂ ಬಿಡುಗಣ್ಗಳ
ಬೇಟಕಾರ್ತಿಯರ ನೇಳಿಸುವ
ನಾಟಕಶಾಲೆಯು ಪೆಣ್ಣಿಹುದಾ ಕ
ರ್ನಾಟಪತಿಗೆ ಕಂಪಿಲಗೆ ೨೩

---

1 ಬಿಳ್ಪ (ಅ ಎ ಗ ಚ) ಬಲ್ಪ (ಇ) 2 ಕೆ (ಅ) 3 ರ್ಣಾ (ಗ) 4 ತುರತೆ (ಅ) 5 ಕೆ (ಐ) * (ಉ) ಪ್ರತಿಯಲ್ಲಿಲ್ಲ.

ನಾಕನಾಯಕನ ನರ್ತನದ ನೀಱೆಯರ ನಿ
ರಾಕರಿಸುವ ನೃತ್ಯದಿಂದ
ಜೋಕೆವೆತ್ತೆಸೆವ ನಚ್ಚಣಿಯರಾ ರಾಯಗ
ನೇಕವಿಹುದು ಪೇಳ್ವೆನೇನ ೨೪

ಸಂಗೀತ ಸಾಹಿತ್ಯ ಭರತಕಲಾನೀಕ
ದಂಗವಱಿವ ನೀಱೆಯರ
ವಂಗಡವಲ್ಲದಾ ನರಪತಿಗಿಲ್ಲ ಮು
ಗ್ಧಾಂಗನೆಯರು ಭಾವಿಸಲು ೨೫

ನಸುನಗೆ ನಱುನಾಣು [1]ಮೆಲ್ನಡೆ[1] ನುಣ್ನುಡಿ
ಪೊಸಗಾಡಿವಡೆದ ಸಿಂಗರದ
ಎಸಕವಾ ರಾಯನಂಗನೆಯರೊಳಗೆ ಸೊಗ
ಯಿಸುತಿಹವೇನ ಬಣ್ಣಿಪೆನು ೨೬

ಇರಲಿಂತನಂತ [2]ವನಿತೆ[2]ಯರಾ ನೃಪಗಂತ
ಪು[3]ರದೊಳು ಸೊಗಯಿಸುತಿಹಳು
ಹರಿಹರದೇವಿಯೆಂದೆಂಬ ಪೆಸರ ಪಟ್ಟ
ದರಸಿ ಗುಣಾಂಬು[4]ಜಸರಸಿ[4] ೨೭

ರತಿಯ ಚೆಲ್ವಿಕೆ ಭಾರತಿಯ ವಿವೇಕ ಪಾ
ರ್ವತಿಯ ಬೆಡಂ[5]ಗಿಂ[5]ದಿರೆಯ
ಅತಿಶಯಭಾಗ್ಯ ಸೀತೆಯ ಪಾತಿವ್ರತ್ಯವಾ
ಸತಿಯೊಳಗೊಂದಿ ಮೆಱೆ[6]ದವು[6] ೨೮

ವಯ್ಯಾರದಿಂದೊಲ್ಮೆಯಿಂ ಚತುರತೆಯ ವಿ
ಡಾಯದಿಂ ಪತಿಭಕ್ತಿಯಿಂದ
ರಾಯನೆದೆಯ[7]ನೆಳ[7]ಕುಳಿಗೊಳುತಾ [8]ಹರಿ
ಣಾಯತೇಕ್ಷಣೆ[8]ಯೊಪ್ಪಿದಳು ೨೯

[1] ಮೆಲ್ನುಡಿ (ಉ) ಮೇಲ್ನಗೆ (ಐ) [2] ನೀಱೆ (ಐ) [3] ತಃಪು (ಇ ಗ) [4] ಜವದನೆ (ಐ) ಧಿ ಸರಸಿ (ಗ) [5] ಗಿನಿಂ (ಐ) [6] ವುದು (ಅ) ದುದು (ಉ) [7] ನೆಳೆ (ಉ) ನೇಳ (ಅ ಉ) [8] ಕಂಜಾಯ (ಅ).

ಶಚಿ[1]ಯೊಙ್[1]ಯಗೆ ಮಂತ್ರಿಯಾದಂತೆ ವಾಕ್ಪತಿ
ಯಚಲಿತನನ್ವಯಾಗತನು
ಶುಚಿ ಶುದ್ಧಗುಣಿ ಬೈಚಪ್ಪನೆಂಬವನುರು
ಸಚಿವನಾಗಿಹನಾ ನೃಪಗೆ ೩೦

ಸಪ್ತೋಪಾಯಸಮನ್ವಿತನಪಗತ
ದೃಪ್ತಾರಿಷಡ್ವರ್ಗನಿವಹ
ಗುಪ್ತಮಂತ್ರಾಲೋಚನನವ[2]ನವನಿಪ[2]
ಗಾಪ್ತಸಚಿವನಾಗಿಹನು ೩೧

ಯುವರಾಜನಣ್ಣಭೈರವದೇವನೆಂದೆಂಬ
ಕುವರವೆರಸು ಕಂಪಿಲನು
ಅವನಿಯೆಲ್ಲವನುಙ್ ಬಾಯಿಕೇಳಿಸಿ ಕೀರ್ತಿ
ಯುವತಿಗಿತ್ತನು ದಿಕ್ತಟ[3]ಗಳ[3] ೩೨

ಲೆಕ್ಕಸಬಾರದಳಿಯದಿರು ಮಕ್ಕಳು
ಮಿಕ್ಕ ಸಿರಿಯ ಮನ್ನೆಯರು
ಯೆಕ್ಕಟಿಗರು ರಾವುತರು ಬಲ್ನಾಯಕ
ಮಕ್ಕಳೊಪ್ಪಿ[4]ದ[4]ರಾ ನೃಪಗೆ ೩೩

ಬೇಡಿದ ವಸ್ತುಗಳನು ಬೇಗದೊಳಿತ್ತು
ನಾಡೊಳಗುಳ್ಳ ಸುಭಟರ
ಕೂಡಿದನಂದಿನ ಶೂದ್ರಕನಂತೆ ಬಾ
ಯ್ಗೊಡಿ ಬಣ್ಣಿಸೆ ಬಲ್ಲವರು ೩೪

ಎಲ್ಲಿ ಸುಭಟರುಂಟೆಲ್ಲಿ ಕಲಿಗಳುಂ
ಟೆಲ್ಲಿ ಮಹಾವೀರರುಂಟು
ಅಲ್ಲಿಗಲ್ಲಿಗೆ ಬೇಡಿದ ವಸ್ತುಗಳನಟ್ಟಿ
ನಿಲ್ಲದವರ ಬರಿಸುವನು ೩೫

---

[1] ಯ ರಾ (ಅ) [2] ನೀಪತಿ (ಗ) [3] ವನು (ಅ ಇ ಎ) [4] ಹ (ಉ ಐ ಕ).

ಸಿಡಿಲ [1]ಕ[1]ಡುಪಿನಂತೆ ಸಿಂಗದೇಳಿಗೆಯಂತೆ
ವಡಬಾಗ್ನಿಯ ಕೋಪದಂತೆ
ಅಡವಿಯ ಕಿಚ್ಚಿನಾರ್ಭಟೆಯಂತಿಹ[2]ರರಿ[2]
[3]ವಡೆಗಾ ನೃಪನ ಸುಭಟರು[3] ೩೬

ಭೀತಿಯೆಂಬುದು ಕರಿದೋ ಬಿಳಿದೋ ತಣ್ಪೊ
ಮಾತೇನುರಿಯೊ ಪೇಳೆಂದು
ಭೂತಳಾಧಿಪನನಂಜದೆ ಬೆಸಗೊಂಬ ನಿ
ರ್ಭೀತ ಸುಭಟರಿರುತಿಹರು ೩೭

ಜವನ ಜಗಳಕೆ ಕರೆವ ಹೆಮ್ಮಾರಿಯ
ನವಗಡಿಸುವ ಭೈರವನ
ಬವರಕೆ ಬರಹೇಳಿ [4]ಬಂಟ[4]ರನಟ್ಟುವ
ತವ[5]ಕದ ತುಳಿಲಾಳಿಹರು[5] ೩೮

ಒಡಲಿಂದಸುವ ಬಿಡುವ[6]ರೆ[6]ಣಿಸದ ಮುನ್ನ
ನುಡಿದ ಪಂಥದ ಮಾತುಗಳನು
ಬಿಡ[7]ದ[7] ಬೀರರು ನೃಪತಿಯ ಬೀರಸಿರಿಗೆ ಮು
ಯ್ಯೊಡವಾಗಿಹರೇನನೆಂಬೆ ೩೯

ಕಲಹವೆಂದರೆ ಕಡುಹರುಷವನ್ನೈದುವ
ಬಲುದೋಂಟಿಯೆಂ[8]ದರೆ[8]ದೆಯೊಳು
ನಲಿವ ಸುಭಟರಿಹರಾ ಕಂಪಿಲಗೆ ಮಾ
ರ್ಮಲೆವರೆದೆಯ ಶೂಲದಂತೆ ೪೦

ಎಲ್ಲಿ ನೋಡಿ[9]ದೊಡ[9]ಲ್ಲಿ ಪಂಥದ ಮಾತು ಮ
ತ್ತೆಲ್ಲಿ ನೋಡಿ[9]ದೊಡ[9]ಲ್ಲಿ ಜಗಳ
ಎಲ್ಲಿ ನೋಡಿದಡಲ್ಲಿ ಕಾ[10]ಳ[10]ಗವಾ ದುರ್ಗ
ದಲ್ಲಿಹ ವೀರಭಟರಿಗೆ ೪೧

---

[1] ಕು (ಅ ಉ ಎ ಗ) [2] ರಲ್ಲಿ (ಇ) ರು (ಎ ಗ) [3] ವೊಡೆಗಾ ನೃಪನ ಸುಭಟರು (ಅ) ಒಡೆಯನ ನೃಪನ ಸುಭಟರು (ಇ) ಪೊಡವಿಪ ಕಂಪಿಲನೃಪಗೆ (ಎ ಗ) [4] ಭಟ (ಅ ಉ ಎ ಕ ಗ) ಭಂಟ (ಇ) ಭಟ್ಟ (ಐ) [5] ಕಿಗಳಿಹರಂದಲ್ಲಿ (ಇ) [6] ನೆ (ಇ) [7] ದೆ (ಇ ಎ ಐ) [8] ದೊಡೆ (ಇ ಎ ಗ) [9] ದರ (ಇ) [10] ಳೆ (ಇ ಎ ಐ ಗ).

ಇಂತಪ್ಪ ವೀರಶೂರರು ನಾಯಕರು ಸಾ
[1]ವಂ[1]ತರು ರಾಯರಾವುತರು
ಅಂತಿಂತಾಗಿಸುತಿಹರು ಕಂಪಿಲ ಭೂ
ಕಾಂತಗೆ ಮಲೆವ ಮನ್ನೆಯರ ೪೨

ಹೊಕ್ಕಿಱಿವನು ಬಲ್ಲಾಳನ ರಾಜ್ಯವ
ನೊಕ್ಕಲಿಕ್ಕುವನೋರುಗಲ್ಲ
ಎಕ್ಕತುಳದ ವೀರರುದ್ರನ ರಾಜ್ಯವ
ಮಿಕ್ಕವರೆಣೆಯೆ ಕಂಪಿಲಗೆ ೪೩

ಡಿಳ್ಳಿಯ ಸುರುತಾಳನ ರಾಜ್ಯ[2]ವೆಲ್ಲವ[2]
ಕೊಳ್ಳೆಗೊಂಬನು ಕೋಪಿಸಿ[3]ದೊಡೆ[3]
ತಳ್ಳಂಕ[4]ಗೊಳಿಸುತಿಹ[4]ನು ಗಜಪತಿರಾಯ
ಗುಳ್ಳ ದೇಶವನೆಲ್ಲವನು ೪೪

ಬಲ್ಲಿದ ಸು[5]ರುತಾಳ[5]ನಿಕ್ಕಿದ [6]ಠಾಣ್ಯವ[6]
ನೆಲ್ಲವ ಹೊಕ್ಕಿಱಿದಿಱಿದು
ಚ[7]ಲ್ಲ[7]ಪಿಲ್ಲಿಯ ಮಾಡಿ ಖಾನಖಾನರಿಗೆದೆ
ದಲ್ಲಣವಾಗಿರುತಿಹ[8]ನು[8] ೪೫

ಲಾಳ ಹಮ್ಮೀರ ಘುರ್ಜರ ವಂಗ ಬರ್ಬರ
ಮಾಳವ ಮಗಧ ದೇಶಗಳ
ಧಾಳಿಯಿಟ್ಟಿಱಿವನು ಸುದ್ದಿ ಮುಟ್ಟಲು ಸುರು
ತಾಳಗೆ ಕಂಪಿಲನೃಪತಿ ೪೬

[9]ತೆಲುಗಾಣೆ[9]ಯ ತೇರಬೀದಿ [10]ತಿಗುಳ[10] ನಾಡು
ತಿಳಿದೆಡೆಯಾಡುವ ದಾರಿ
ಹೊಲದ ಪೆರ್ಬಟ್ಟೆ ಹೊಯ್ಸಳದೇಶವೆನೆ ಮಿಕ್ಕ
ನೆಲನಿದಿರೇ ಧಾಳಿ[11]ಗವನ[11] ೪೭

---

[1] ಮಂ (ಎ ಐ) [2] ವನೆಲ್ಲ (ಎ ಐ ಗ) [3] ದರೆ (ಗ) [4] ವೆಯ್ದುಸುವ (ಇ ಐ ಕ ಗ) [5] ರಿತಾಳ (ಇ) ರುತ್ರಾಣ (ಇ) ರತಾಳ (ಕ) [6] ಠಾಣೆಯ (ಇ ಎ) ಠಾಣಯ (ಐ) [7] ಲ್ಲಿ (ಐ) [8] ರು (ಅ ಉ ಎ) [9] ತಿಗುಳಾಣ (ಅ) [10] ತೆಲುಗ (ಅ) [11] ಯವಗೆ (ಉ).

ಎರೆದುದನಿತ್ತು ನಿಜಾನ್ವಯಾಗತಮಪ್ಪ
ಧರಣಿಯೊಳಿಹ ಭೂಮಿಪರ
ನೆರವಿಯಲ್ಲದೆ ಕಂಪಿಲಗಿದಿರಾಗಿ ಬಾ
ಳ್ವರಸುಗಳುಂಟೆ [1]ನೆಲದೊ[1]ಳು ೪೮

ಮಣಿದರೆ ಸಾಕರಿರಾಯರ ಹೊನ್ನು
ಹಣಕಾಶೆಯ ಮಾಡುವನೆ
ಎಣಿಸಬಹುದೆ ಕಂಪಿಲನೃಪತಿಯ ಲೋಭ
ಗುಣಯುತ ರಾಜವರ್ಗದೊಳು ೪೯

[2]ಒರೆದ[2]ನೆ ಕೊಟ್ಟಪೆನೆಂದದು ನೊಸಲಿ[3]ನ[3]
ಬರ[4]ಹ[4] ನಂಬೆಂದು ನುಡಿದನೆ
ಧರಣಿಯು ಹೊ[5]ಯ್ದು[5] ಕಯ್ಯೆದು ಕಂಪಿಲಗೆ ಪ
ಸ[6]ರಿ[6]ಯ ದೊರೆಗಳು ಪಾಸಟಿಯೆ ೫೦

ಮಲಯಜಮಿನಿದಾದಂದಿಂದು ಕಱೆಯಿಂದ
ತೊಲಗಿದಂದಮೃತವೀ ನೆಲಕೆ
ಇಳಿದಂದು ಮುತ್ತತಿ ಮೃದುವಾದಂದವ
ನೊಳುಗುಣಕೆಣೆಯೆಂಬೆನವನ ೫೧

ಕಡುಗುಣ್ಪು ಪೆಂಪಿನಿಂದೆಣೆಯಾದಡೇನು ಪಾ
ಲ್ಗಡಲು ದಿವಿಜರ ಕಯ್ಯಿಂದ
ಕಡೆಯಿಸಿಕೊಂಡುದಾ ನೃಪಗಾನದನೆಂತು
ಪಡಿಯಿಡುವೆನು ಗುಣದಿಂದ ೫೨

ಚಾಗಕೆ ನೆಱೆಯರು ಯಾಚಕರುರುಗುಣ
ಪೂಗನು[7]ತಿ[7]ಗೆ ಕವಿವರರ
ವಾಗಾಡಂಬರ ಸಾಲದೆಂಬೀ ಕೀರ್ತಿ
ಗಾಗರವಾದನಾ ನೃಪತಿ ೫೩

---

[1] ಭೂಮಿಯೊ (ಇ) ಲೋಕದೊ (ಉ) [2] ಒರೆದೆ (ಅ ಎ ಗ) [3] ಲ (ಅ)
[4] ದ (ಅ ಎ ಗ) [5] ಯ್ಯದ (ಐ) ಯಿದ (ಕ) [6] ರೆ (ಇ ಐ) [7] ಡ (ಕ).

*ಮಾಸದ ಮನುಜರ ಕಂಡವರಿಗೆ ಬಹ
ಳೈಸಿರಿಯುಂಟೆಂದು ಬಗೆದು
ಓಸರಿಸದೆ ಪೊರ್ದಿದರ ಕೆಡಿ[1]ಸುವ[1] ನೃಪಾ
ಭಾಸನೆ ಕಂಪಿಲ ನೃಪತಿ ೫೪

†ಇದು ಪರದಾರ ಸೋದರ ರಾಮನಾಥನ
ಪದಕೃತಿಯೊಳಗೊಂದನೆಯ
ವಿದಿತಾಶ್ವಾಸದೊಳೈದನೆಯದು ಸಂಧಿ
ಮೃದಪದಚಯ ಸಂಬಂಧಿ ೫೫

‡ಇದು ಯದುಕುಲಾಮಾತ್ಯ ವಂಶದೊಳಗುದಯಿಸಿದ
ಸದಮಳಯಶೋವಿರಾಜಿತ ವಿಜಯನೃಪತನುಜ
ವಿದಿತ ವಿತರಣ ವಿ'ನ[2]ಯ ವಿಕ್ರಮವಿಭಾಸಿಯೆಂದೆನಿಪ ಮಾಧವನಾಮನ
ಉದರಾಬ್ಧಿಭವಚಂದ್ರ ನಂಜುಂಡನೊಲಿದೊರೆದ
ಕದನಕಲಿಕಾಲ ಕಪಿಕೇತು ಕಲಿ ಶುಚಿ ರಾಮ [೫೬
ನುದಿತಕೃತಿ ಬಂಧದೊಳ್ಮೃದು ಪದನ್ಯಾಸದೊಳಗಾಶ್ವಾಸ ಮೊಂದನೆಯದು

---

[1] ಸದೆ (ಎ ಗ) [2] ಜ (ಅ) * (ಉ) ಪ್ರತಿಯಲ್ಲಿಲ್ಲ † (ಅ ಎ ಐ ಗ ಚ ಟ) ಗಳಲ್ಲಿಲ್ಲ ‡ (ಇ ಎ ಕ ಗ) ಗಳಲ್ಲಿಲ್ಲ.

# ದ್ವಿತೀಯಾಶ್ವಾಸ

(ಒಂಬನೆಯ ಸಂಧಿ)

## ಆರನೆಯ ಸಂಧಿ

### ಈಶ್ವರನ ಒಡ್ಡೋಲಗ

**ಸೂಚನೆ :** ಪುರಹರನೋಲಗದೊಳು ಗಿರಿಜೆಯು ಮುಂದೆ
ನರನನೂರ್ವಶಿ [1]ನಿಂದಿ[1]ಸಿದಳು

ಇತ್ತ ಕಂಪಿಲನೃಪನಿಂತು ಧರಿತ್ರಿಯ
ನೊತ್ತಿಯಾಳುತ ಸುಖವಿರಲು
ಅತ್ತ ತಾರಾಚಲ ಶಿಖರಾಗ್ರದೊಳು ದೇ
ವೋತ್ತಮನೊಂದು ದಿನದೊಳು ೧

ಶರಣಜನಾನುಗ್ರಹದಿಂದ ದೇಹ[2]ವ[2]
ಧರಿಸಿ ಸರ್ವಾವಸರವನು
ಇರ[3]ದಿ[3]ತ್ತು ಬಂದನೋಲಗಶಾಲೆಗೆ ಮುಂದೆ
ಬರೆ ಭೃಂಗಿ ನಂದಿಕೇಶ್ವರರು ೨

ನಿಗಮನಿಶ್ಚಯದ ಬೊ[4]ಬ್ಬಾ[4]ಟಕೆ ಶಾಸ್ತ್ರದ
ಸಗ[5]ರಗ[5] ತನಕಾಗಮಗಳ
ಬಗೆಗೊಳಗಾಗದ ಬಯ[6]ಲು[6] ಮೂರ್ತಿಯನಾಂತು
ಮಿಗೆ ರಂಜಿಸಿ[7]ತೋಲಗದೊಳು[7] ೩

ಯೋಗಿಹೃತ್ಕಮಲಮಧ್ಯದ ಕರ್ಣಿಕಾಗ್ರದ
ಮೇಗೆ ನಿಂದಿರದಚ್ಚಬೊಮ್ಮ
ಬೇಗದಿಂ ಮಂಡಿಸಿದುದು ಸಿಂಹಪೀಠದೊ
ಳಾಗಮ ನಿಗಮಗಳ್ಪೊಗಳೆ ೪

ಶರಣರಚಿಕೆ ಯೋಗಿಗಳ ಬಯಕೆ ಮುನಿ
ವರರಿಷ್ಟಸಿದ್ಧಿ ವೇದಗಳ
ಶಿರದಚಿವಂಗಮನಾಂತು ಸಿಂಹಾಸನ
ಕಿರದ್ವೈತಂದುದೇನೆಂಬೆ ೫

---

[1] ಥಂಗಿ (ಅ ಉ) [2] ಮ (ಗ) [3] ವಿ (ಎ) [4] ಬ್ಬೇ (ಎ ಗ) [5] ರೆಗೆ (ಅ) ರೆಗ (ಇ ಎ ಗ) [6] ಲ (ಅ ಇ ಉ) [7] ದನೋಲಗದಿ (ಉ) ದುದೋಲಗ ದೊಳು (ಐ) ದನೋಲಗದೊಳು (ಗ).

ಉದಯುಗಿರಿಯ ಶಿಖರದ ಮೇಲೆ ತಾರಾ
ಸುದತೀಶ್ವರನಿ[1]ರ್ಪಂ[1]ತೆ
ಸದಮಲತರ ಕಾಂಚನಪೀಠದ ಮೇಲೆ
ವಿದಿತನೊಪ್ಪಿದನಂಧಕಾರಿ ೬

ಶರಣಜನದ ಮೇಗ[2]ಣ[2]ನುರಾಗವೆ ಮೇಲೆ
ಹುರಿಗೊಂಡು [3]ಪೊಱಪೊಣ್ಮಿದಂತೆ[3]
ಕರಮೆಸೆದವು ಕೆಂಜೆಡೆಗಳಾ ಜಗದೀ
ಶ್ವರನ ಮಸ್ತಕವ[4]ಳೆ[4]ಯದೊಳು ೭

ಸುರತರಂಗಿಣಿಯ ಮಧ್ಯದ ಕೆಂಜೆಡೆಗಳ ಮೇ
ಲ[5]ರ[5]ವೆಱೆ ರಾರಾಜಿಸಿದುದು
[6]ಶರಧಿ[6]ಯ ನಡುವಣ ವಿದ್ರುಮಲತೆಗಳಿಂ
ದಿರದೇಳ್ವ ಚಂದಿರನಂತೆ ೮

ಕೆಳೆಯುನೊಡ[7]ಲ[7] ಕೆಂಡಗಣ್ಣ ಕೇಸುರಿ ಸುತ್ತೆ
ಜಲವ ಪೊಕ್ಕೆತ್ತಿದ ತಲೆಯು
ನಳಿನಾರಿಯಂತೆ ಗಂಗಾಧರಮಸ್ತಕ
ದೊಳಗೆಸೆದುದು ಚಂದ್ರ[8]ಖಂ[8]ಡ ೯

ಹವಳದ ಬಳ್ಳಿಯ ಹರಹಿನೊಳಗೆ ನಿಂದು
ತವೆ ಮೆಱೆವಂಬೋನಿಧಿಯ
ವಿವರಣದಂತೆ [9]ವಿಯನ್ನದಿ[9] ಮೆಱೆದುದು
ಶಿವನ [10]ಜೆಡೆಗಳೆಡೆಗಳೊಳು[10] ೧೦

ಮುಪ್ಪುರವನು ಸುಟ್ಟು ಮುಳಿದಲರಂಬನ
ನಪ್ಪಿಕೊಂಡುಳಿದುಗ್ರತೆಯನು
ಒಪ್ಪವೆತ್ತೆಸೆವ ಕುಂಕುಮದ ಲಲಾಮ[11]ದಂ[11]
ತೊಪ್ಪಿತು ಪಣೆಗಣ್ಣಭವಗೆ ೧೧

---

[1] ಪ್ಪ (ಅ ಐ) [2] ಲ (ಅ) [3] ಬೆಳೆದುದೆಂಬಂತೆ (ಐ) [4] ಳ (ಇ ಎ ಗ) [5] ರೆ (ಇ) [6] ಸರದಿ (ಅ) [7] ನೆ (ಎ) [8] ಖಾಂ (ಇ) [9] ವಿನಯನದಿ (ಇ) ವಿನಯುದಿ (ಎ ಗ) [10] ಜೆಡೆಯೊಳೆಡೆವಿಡದೆ (ಇ) ಶಿರದ ಜೆಡೆಗಳೊಳು (ಎ ಗ) [11] ದಿಂ (ಎ).

ಬಗೆವಿಡಿದಿರ್ದ ಭಕ್ತರ ಪಾಪಚಯವೆಂಬ
ಮೃಗಗಳ[1]ನಿರ[1]ದೆ ಬೆದಱಿಪ
ಸೊಗಯಿಪ ನೀಲದ ಬಡಿಕೋಲ್ಗಳಂತೆ ಪು
ರ್ಬುಗಳೆಸೆದವು ಪುರ[2]ಹರನ[2] ೧೨

ಅಸುರರ ಕೊಂದಮರರ ಮೂಗನುಳುಹಿದ
ಬಿ[3]ಸು[3]ಗಣ್ಣನುರುನಾಶಿ[4]ಕಕೆ[4]
ವಸುಧೆಯೊಳಿಲ್ಲುಪಮಾನವೆಂದದನಾ
ನೊಸೆದು ಕೊಂಡಾ[5]ಡಿದು[5]ದಿಲ್ಲ ೧೩

ಉರು[6]ಕಂ[6]ಬಳಾಶ್ವತರರ ಗಾನರಸವೆಂಬ
ಶರನಿಧಿಯನು ಬಳಸಿರ್ದ
ವರಮೇಖಲೆಗಳೆಂದೆನಲು ಕ[7]ರ್ಣಂ[7]ಗಳು
ಕರಮೆಸೆದವು ಕಾಲಹರಗೆ ೧೪

ಪಿಂಗಡೆಯಿಂ ಬಂದು ಕಾಳಿ ಕಯ್ಯಿಂ ಕಂಠಾ
ಲಿಂಗನವನು ಮಾಡಿದಂತೆ
ಸಿಂಗರವಡೆದುದೀಶನಕೊರಳೊಳು ಗರ
ಳಂ ಗಾಡಿವೆತ್ತು ಕಣ್ಗಳಿಗೆ ೧೫

ಪಳುಕಿನ ಕನ್ನಡಿಯಂತಿಂದುಬಿಂಬದ
ಪೊಳಪಿನಂತಮರಪಾದಪದ
ಬೆಳ[8]ರ್ದ[8]ಳಿರಂತೆ ಬೆಡಂಗು[9]ವೆತ್ತೆಸೆದುದು[9]
ತೆಳುಗದಪುಗಳೀಶ್ವರನ ೧೬

ಪೊಡವಿಯ ನೀರೇ[10]ಳ[10] ಮಾಳ್ಪಂದು ಬಿದಿ ನಟ್ಟು
ಕಡೆದ ನೀಲದ ಕಂಭದಂತೆ
ಕಡುರಯ್ಯಮಾದುದಾ ಕಾಳಕೂಟದ ಕ
ಮ್ಮಡುಗೊರಲಾ ಪರಶಿವನ ೧೭

---

[1] ಬಿಡ (ಐ) [2] ಹರಗೆ (ಇ) ರಿಪುಗೆ (ಗ ಐ) [3] ಸಿ (ಎ ಐ) [4] ಕೆಗೆ (ಇ ಗ) [5] ಡುವು (ಉ) [6] ಗಂ (ಅ) [7] ರ್ಣ (ಅ ಗ ಎ) ಣ್ಣ (ಇ) [8] ದಿರ್ದ (ಅ) [9] ವೆತ್ತಸುದುದಾ (ಅ) ವೆತ್ತಸೆವುದು (ಐ) [10] ಳು (ಉ).

ಮೂಱುಲೋಕಕ್ಕೆ ಮುಕ್ಕಣ್ಣನಲ್ಲದೆ ಮತ್ತೆ
ಬೇಱಿನ್ನು ದೈವವಿಲ್ಲೆಂದು
ಸಾಱು[1]ವಂತಿರ್ದವು[1] ಕೊರಲ ಮೂರೇಖೆಗ
ಳಾಱುಮುಖ[2]ದ[2]ನಯ್ಯಂಗೆ ೧೮

ಕೆಲನೆ[3]ರ[3]ಡಱೊಳಿಪ್ಪ ಹರಿವಿಧಿಗಳ ಚಿತ್ತ
ಕಳಭವ ಕಟ್ಟಿ ಸಲಹುವ
ಪಳುಕಿ[4]ನಾಲಾಣೆ[4]ಗಳಂತೆಸೆದವು ಪರಮನ
ನಳಿತೋಳುಗಳು ನೋಳ್ಪರಿಗೆ ೧೯

ಚಳಿವೆಟ್ಟುಮುಗಳ ಕಣ್ಬೊಂಬೆಗಳಿರ್ಪೊಳು
ಪಳುಕಿನ ಪಾಸಱೆಯೆನಲು
ಎಳೆಸಿದುದೆದೆ ನೋಳ್ಪರ ಕಣ್ಗೆ ಬಾಂದೊಱೆ
ದಳೆದಗೆ ಭಕ್ತವತ್ಸಲಗೆ ೨೦

ಇಂತವಯವಶೋಭೆನಡೆದೋಲಗದೊಳಂತ
ಕಾಂತಕನಿರಲಾಯೆಡೆಗೆ
ಕಾಂತಾಸೀಮಂತಮಣಿ ಜಗದಂಬಿಕೆ
ತಾಂ ತಳರ್ದಳು ಲೀಲೆಯಿಂದ ೨೧

ಬಂದಿನಿಸಗ[5]ಲ[5]ಲಾಱದೆ ಗಿರಿ[6]ರಾಜನ[6]
ನಂದನೆ ಪರಶಿವನೆಡೆಗೆ
ಹಿಂದೆ ಮುಂದೆಡಬಲದೊಳು ಬರೆ ಸ[7]ತಿ[7]ಯರು
ಬಂದಳದೊಂದು ಬಿಂಕದೊಳು ೨೨

ಮುಡಿ ಮೊಲೆಯಾಂತೆ[8]ಳ[8]ಲತೆಯಂತೆ ನಡೆನುಡಿ
ವಡೆದ ರನ್ನದ ಬೊಂಬೆಯಂತೆ
ನಡೆದು ಬಂದಳು ನಲವಿಂ ನೀಲಕಂಠನಿ
ರ್ದೆಡೆಗೆ ನೀಱೆಯರಧಿದೇವಿ ೨೩

ಈ ರೂಪುಮೀಲಾವಣ್ಯಮಿಲ್ಲದೊ[9]ಡೀ[9]
ನಾರಿಗೆ ಜಗದಂಬಿಕೆಗೆ
ಸೇರಿಸುವನೆ ದೇಹಾರ್ಧಮನೀಶನೆಂ
ದೋರಂತೆ ಪೊಗ[10]ಳ್ದ[10]ರಮರರು ೨೪

---

[1] ವಂತಿರ್ದುದು (ಉ) [2] ದವ (ಎ ಗ) [3] ವೆ (ಎ ಗ) [4] ನಲಳಿ (ಉ)
[5] ಲರ(ಐ) [6] ಜಾ (ಎ ಕ ಗ) [7] ಖಿ (ಇ ಐ) [8] ಳೆ (ಎ ಐ ಕ) [9] ಡ ತಾ(ಅ) [10] ಳಲ (ಇ).

ಕಡೆದು ಕಂಡರಿಸಿದ ನೀಲದ ಬೊಂಬೆಗೆ
ಪಡೆದನಸುವನಜನೆನಲು
ನಡೆದು ಬಂದಳು ಗುಜ್ಜುವೆ[1]ಟ್ಟಿಂದೊ[1]ಯ್ಯನೆ ದೇವ
ರೊಡೆಯನೋಲಗಕಗಜಾತೆ ೨೫

ಇರುಳಾ[2]ಣ್ಮ[2]ನೆಡೆಗೆ ರೋಹಿಣಿ ನವತಾರಾ
ತರುಣಿಯರೊಡನೆ ಬರ್ಪಂತೆ
ಗಿರಿಜೆ ಗೀರ್ವಾಣಸಖಿಜನವೆಯ್ತರೆ
ಗಿರಿಶನೋಲಗಕೆಯ್ದಿದಳು ೨೬

ವಿಜಯೆ ಜಯಾಂಗನೆ ಸಿರಿ ವಾಣಿ ಮೊದಲಾದ
ನಿಜಸಖಿಯರು ಬರೆ ಬಳಸಿ
ತ್ರಿಜಗನ್ಮಾತೆ ಮೆಲ್ಲನೆ ನಡೆತಂದಳು
ಭುಜಗಭೂಷಣನೋಲಗಕೆ ೨೭

ಸುರ[3]ಸತಿಯರು[3] ಸಪ್ತಮಾತೃಕೆಯರು ಋಷಿ
ತರುಣಿಯರುರಗನಾರಿಯರು
ವರತಾರಾಲಲನೆಯರೊಡ[4]ನೇಳ್ತರೆ[4]
ಗಿರಿಜೆ ಬಂದಳು ಶಿವನೆಡೆಗೆ ೨೮

ಸುರಸಿಂಧು ಮೊದಲಾದ ನದ್ಯಂಗನಾಜನ
ವರರುದ್ರಕನ್ಯಾನಿವಹ
ಪರಮಚತುಃಷಷ್ಟಿಯೋಗಿಣಿಯರು ಬ[5]ರೆ[5]
ಹರನೆಡೆಗಗ[6]ಜೆ[6]ಯೆಯ್ದಿದಳು ೨೯

ಮಡದಿಯ ಕಂಡು ಮಹೇಶ್ವರನಾನಂದ
ವಡೆದಮರ್ದಪ್ಪಿಕೊಂಡವಳ
ಎಡದ ತೊಡೆಗೆ ತೊಡವೆನಿಸಿದನಿ[7]ನೆ[7]ಯಳ
ಬಿಡಲಾರ್ಪರೆ ಕೂರ್ತವರು ೩೦

ಮಂದಾರವನಡರಿದ ಕಲ್ಪಲತಿಕೆಯೆಂ
ಬಂದದೊಳಾ ಪರಶಿವನ
ಅಂದವಡೆದ ವಾಮಭಾಗದೊಳೆಸೆದಳಾ
ನಂದ ಕೈಮಿಗಲಗಜಾತೆ ೩೧

---

[1] ಟ್ಟಿನೊ (ಎ) [2] ಳ್ಮ (ಐ) [3] ಸುದತಿಯರು (ಗ) [4] ನೆಯ್ತರೆ (ಐ)
[5] ರೆ ಪುರ (ಐ) [6] ಜಾತೆ (ಅ) [7] ನಿ (ಐ ಗ)

ಅರಲದೊಡಂಬೆಯೊಳಾವೋದ ರನ್ನದೊ
ಳುರುಕಾಂತಿ ಚಂದ್ರಬಿಂಬದೊಳು
ಸ[1]ರುಚಿರಚಂದ್ರಿಕೆ ಮೆಱೆವಂತೆ[1]ಸೆ[1]ದಳಾ
ಗಿರಿಜೆ ಗಿರೀಶನಂಗದೊಳು ೩೨

*ಬಾಗಿಲಿಂ ನಂದಿಕೇಶ್ವರ ಬಿಡಲೊಳಪೊಕ್ಕು
ಪೋಗಿಯುಭವನಡಿಗಳಿಗೆ
ರಾಗದಿಂ ಮೆಯ್ಯಿಕ್ಕಿ ಬಿಳ್ವೇಳ್ವ ಗಣಗಳಿಂ
ದಾಗಳೋಲಗ ರಂಜಿಸಿದುದು ೩೩

ಹರಿಹರವಿಧಿಗಳಿಂ ಗುಹಗಣಪತಿಗಳಿಂ
ಸುರನರೋರಗ ಕಿನ್ನರರಿಂ
ಗರುಡ ಗಂಧರ್ವರಿಂ ಗಣನಾಥರಿಂದೀ
ಶ್ವರ ಸಭೆ ಕಣ್ಗೆಡ್ಡಮಾಯ್ತು ೩೪

ಪನ್ನೀರ್ವರಾದಿತ್ಯರಿಂ ನವಗ್ರಹಗಳಿಂ
ಪನ್ನೊರ್ವರಧಿರುದ್ರರಿಂದ
ಸನ್ನುತ[2]ಮ[2]ಪ್ಪೆಣ್ಬ ರಾಶಾಪತಿಗಳಿಂ
ಚೆನ್ನಾದುದಾ ಸಭೆ ಕಣ್ಗೆ ೩೫

ಪದಿನಾಲ್ವರು ಮನುಗಳು ನವಸಂಖ್ಯೆಯ
ಬಿದಿಗಳು ಸಪ್ತಋಷಿ[3]ಗಳು[3]
ವಿದಿತದಶಾವತಾರದ ಮೂರ್ತಿಗಳು
ಮುದದಿಂದ ಮುಸುಕಿರ್ದರಲ್ಲಿ ೩೬

ಯಕ್ಷರಾಕ್ಷಸಸಿದ್ಧಸಾಧ್ಯ [4]ಕಿಂಪುರುಷ[4] ಮು
ಮುಕ್ಷುವಿದ್ಯಾಧರರಿಂದ
ನಕ್ಷತ್ರ ನಳಿನಾರಿ ವಸುಗಳಿಂದಾ ನಿಟಿ
ಲಾಕ್ಷನ ಸಭೆ ಕಣ್ಗೆಸೆದುದು ೩೭

ಸನಕ ಸನಂದ[5]ನ ನಾರದ ಮೊದಲಾ
ದ[5]ನಿಮಿಷಋಷಿಕುಲದಿಂದ
ವಿನುತ ಗೌತಮ ವಿಶ್ವಾಮಿತ್ರ ರೋಮಜ
ಮುನಿಗಳಿಂ [6]ಮೆಱೆದು[6]ದಾಸ್ಥಾನ ೩೮

---

[1] ಮೆಱೆ (ಇ ಎ ಕ ಗ) [2] ರ (ಉ ಎ ಐ) [3] ಯರು (ಉ ಎ ಐ ಗ) [4] ಗಂಧ (ಉ) [5] ನರಿಂದ ನಾರದರಿಂದ (ಗ) [6] ಮೆಱೆವು (ಇ) ದೆಸೆದು (ಎ ಗ) * (ಅ) ಪ್ರತಿಯಲ್ಲಿಲ್ಲ.

ಪಣಿಗೆ ಕೈಗಳನಿಟ್ಟು ಪಲವು ಸೂ[1]ಳಿಂದಾ[1]
ಪಣಿಗಣ್ಣನನು ನುತಿಯಿಸುತ
ಮಣಿದು ಮಸ್ತಕಗಳನೆಡಬಲಕೆಯ್ದುವ
ಗಣಗಳಿಂ[2]ದೆಸೆ[2]ದುದಾಸ್ಥಾನ ೩೯

ಊರ್ವಸಿ ರಂಭೆ ಮೇನಕಿ ಮೊದಲಾದ ಸು
ಪರ್ವವಾರಸ್ತ್ರೀಯರಿಂದ
ಸರ್ವೇಶ್ವರನೋಲಗವೆಸೆದುದು ಕಣ್ಗೆ
ಪೂರ್ವವೆತ್ತುರು ಶೋಭೆಯಿಂದ ೪೦

ಇಂತೆಸೆವಾಸ್ಥಾನ[3]ಕೇಳ್ತಂದು[3] ಗಣನಾಥ
ಸಂತತಿ ಶಿವ[4]ಶ[4]ಕ್ತಿಗಳಿಗೆ
ಸಂತಸಗಡಲೊಳೋಲಾಡುತ್ತ ಮೆಯ್ಯಿಕ್ಕಿ
ತಂತಮ್ಮ ನೆಲೆಗೆಯ್ದು[5]ತಿರಲು[5] ೪೧

ಆ ವೇಳೆಯೊಳೊರ್ವ ಗಣನಾಥನೆಯ್ತಂದು
ದೇವ[6]ಗೆ[6]ಱಗಿ ಭಕ್ತಿ[7]ಯೊಳು[7]
ದೇವಿಗೆಱಗದಿರೆ ಕಂಡಾಕೆಗೆ ರೋ
ಷಾವೇಶ ಪುಟ್ಟಿತೆದೆಯೊಳು ೪೨

ನಿಡುಸುಯ್ಗಂಟುಗಟ್ಟಿದ ಪುರ್ಬು ನಸುಗೆಂ
ಪಡರಿದಕಣ್ಣು ಕಂಪಿಸು[8]ವ[8]
ಕಡುರಂಗುದುಟಿಯ ಕಾಮಿನಿಯ ಕೋಪವ ಕಂಡು
ಮೃಡನಂಜಿದನು ಮನದೊಳಗೆ ೪೩

ಮಾಡಿದ ದೋಷ[9]ವೆನ್ನೊಳಗೆಳ್ಳನಿತಿಲ್ಲ[9]
ಗಾಡಿಕಾರ್ತಿಯ ಮನದೊಳಗೆ
ಮೂಡಿದ ಮುಳಿಸಿದಕೇನ ಮಾಡುವೆನೆಂದು
ಪಾಡಳಿದನು ಪಾರ್ವತೀಶ ೪೪

---

1 ಳುಗಳಿಂದ (ಐ) 2 ಮೆಱೆ (ಉ ಎ ಐ ಗ) 3 ಕೆಯ್ತಂದು (ಎ ಐ ಕ ಗ)
4 ಭ (ಅ ಇ ಕ ಗ) 5 ತಿಹರು (ಅ) 6 ರಿಗೆ (ಗ) 7 ಯಲಿ (ಐ) 8 ತ (ಐ)
9 ವೆಳ್ಳೆನಿತೆನ್ನೊಳಗಿಲ್ಲ (ಇ) ವೆಳ್ಳನಿತಿಲ್ಲ ನನ್ನೊಳು (ಎ ಗ) ವೆಳ್ಳೆನಿತಿನ್ನೊಳಗಿಲ್ಲ (ಐ).

ಅಂಜುವ ಮನ ತಡಬಡಿಸುವ ನುಡಿ ಮುಖ
ಕಂಜದೊಳಿಟ್ಟ ದಿಟ್ಟಿಗಳು
ರಂಜಿಸಲಾ ರಾಜಶೇಖರನಿರದಾ
ಮಂಜುವೆ[1]ಟ್ಟ[1]ನ ಮಗಳೊಡನೆ ೪೫

ಗಿರಿಜೆ[2]ಯಿ[2]ದೇನು ಕಾರಣ ನಿನ್ನ ಮನದೊಳಂ
ಕುರಿಸಿವೆ [3]ಕೋಪ[3]ವಿಂತಿದನು
ಒರೆ ನನಗೆಂದೆನೆ ನುಡಿದಳಿಂತೆಂದಾ
ಹರಿಣಲೋಚನೆ ಹರನೊಡನೆ ೪೬

ಹರಿವಿರಿಂಚಗಳಾ[4]ದಿಯಾದ ದೇವತೆಗಳು[4]
ಶಿರವ ಬಾಗುವರೆನ್ನಡಿಗೆ
ದುರುಳನಾರಿವನೆನಗೆರಗದಿರ್ಪವನಿವ
ನಿರವ ಪೇಳಭವ ನೀನೆನಗೆ ೪೭

ಎನೆ ಪಲ್ಬೆಳಗು ಪಸರಿಸೆ ನಸುನಗುತಾ
ಮನಸಿಜಮದಹರ ತನ್ನ
ಮನದನ್ನೆಳೊಡನಾ ಗಣನಾಥನ ಪೂರ್ವ
ದನುವನೊರೆದನಿಂತೆಂದು ೪೮

ನೀಲನಯನೆ ಕೇಳೆಮ್ಮೊಡನಂದಿಂದ್ರ
ಕೀಲದೊಳಗೆ ಮಿಗೆ ಹೋರಿ
ಮೇಲುಗಯ್ಯಾದ ಮಹಾವೀರ ಗಾಂಡೀವಿ
ಮೂಲೋಕದ ಗಂಡನಿವನು ೪೯

ಪಾಶುಪತಾಸ್ತ್ರಗೋಸುಗರ ವಿಷಮ[5]ಋಷಿ[5]
ವೇ[6]ಷ[6]ಮನಾಂತು ನಮ್ಮೊಡನೆ
ಕೇಶಾಕೇಶಿಯು ಮಾಡಿದ ವೀರಾ
ವೇಶದ ಭಟನಿವನಗಜೆ ೫೦

ಉತ್ತರಗೋಗ್ರಹಣದೊಳು ಕೌರವಭೂ
ಪೋತ್ತಮನಖಿಲಬಲವನು
ತೊತ್ತಳದುಳಿದ ತೋಳ್ವಲ[7]ವುಳ್ಳ[7]ನಿವನೀಗ
ವೃತ್ತಪಯೋಧ[8]ರಯುಗಳೆ[8] ೫೧

---

[1] ಟ್ಟ (ಉ ಎ ಗ) [2] ಯ (ಐ) [3] ರೋಷ (ಉ) [4] ದಿ ದೇವತೆಗಳು (ಇ) ದಿಯಾದ ದೇವರುಗಳು (ಐ) ದ ದೇವತೆಗಳು ಬಂದು (ಗ) [5] ಮುನಿ (ಐ) [6] ಶ (ಅ ಇ ಚ ಟ) [7] ದವ (ಉ) [8] ರೆ ಕೇಳೆ (ಉ).

ಕುರುಕುಲಕದಳೀವನಕೋಲಾಹಲ
ಕರಿಕಳಭನು ಸುರಪತಿಯ
ವರಸುತ ಹರಿಯ ಮೈದುನನರ್ಜುನನಿವ
ಗಿರಿಜೆ ನಿನ್ನಾಣೆ ನಮ್ಮವನು ೫೨

ಕುರುಬಲವೆಲ್ಲವ ಕೊಂದಜಶಿರಕೆ ಕೊ
ಟ್ಟಿರದದು[1]ನೆ[1]ಮ್ಮ ಕಯ್ಯಿಂದ
ಪರಿಹರಿಸಿದ ಭಾರತಮಲ್ಲನಿವನೀಗ
ಕರೆದುಪಚರಿಸು ನೀನವನ ೫೩

ನೆರೆದರಸುಗಳ ಮುಂದಾ ಸ್ವಯಂವರದೊಳು
ತಿರುಗುವ ಜಂತ್ರದ ಮೀನ
ಭರದಿಂದೆಚ್ಚು ಕೆಡ[2]ಪಿ[2] ಪಾಂಚಾಲೆಯ
ನಿರದೆ ತಂದವ[3]ನ[3]ವನೀಗ ೫೪

ಶತಮುಖನುದ್ಯಾನವನಗ್ನಿ ಬಂದಾ
ಹುತಿಯ ಬೇಡಿದೊಡದಕಿತ್ತ
ಅತಿಬಲ ವಿಕ್ರಮನಿವನೀಗ ನಿನ್ನಾಣೆ
ಶತಪತ್ರದಳನಿಭನೇತ್ರ ೫೫

ಪಡಿಬಲವನು ನಿಜಸುತಗೆ ಸಮರದೊಳು
ಕಡಿದ ಸೈಂಧವನ ತಲೆಯನು
ಪಡುಗಡಲನು ಪಗಲಾ[4]ಣ್ಮ[4]ನೆಯ್ದದ ಮುನ್ನ
ತಡೆಗಡಿದವನಿವ[5]ನೀಗ[5] ೫೬

ಒಲದು ಮೇಲಿಕ್ಕಿದೂರ್ವಶಿಯನು ತಂದೆಯ
ಲಲನೆಯೆಂದೊಲ್ಲದೆ ಪೋದ
ಬಲು ಶುಚಿ ಕಲಿಪಾರ್ಥನಿವನೀಗ ಪೆಣ್ಗಳ
[6]ಕುಲರನ್ನೆ ಕುವಲಯನೇತ್ರೆ[6] ೫೭

ಸುರವಧು ಸೋಲುತ್ತ [7]ತನ್ನಿ[7]ರ್ದೆಡೆಗೆಯ್ತಂದು
ಕರುಣಾಲಾಪಗಳಿಂದ
ನೆರೆಯಬೇಕೆಂದೆನಲೊಲ್ಲದ ವೀರನೀ
ಧರಣಿಯೊಳುಂಟೆ ಪೇಳಗಜೆ ೫೮

---

[1] ನ (ಐ) [2] ಹಿ (ಉ) [3] ನಿ (ಗ) [4] ಳ್ಕ (ಐ) [5] ನಾಗ (ಇ)
[6] ಕುವಲಯದಳರನ್ನೆ ಕೇಳು (ಉ) [7] ತಾನಿ (ಇ).

ಹರಿವಿಧಿಗಳು ಹರಿಹರಿದಾಡು[1]ವ[1]ರಾ
ಗರುವೆಯು ಕೂಟವ ಬಯಸಿ
ಇರದವಳೇ ಕೂರ್ತು ಬಂದಡೊಲ್ಲದೆ ಪೋದ
ವರಶುಚಿ ಕಲಿ ಪಾರ್ಥನಿವನು ೫೯

ನಾಗಲೋಕಕೆ ಪೋಗಿ ನಾಗರಾಜನೊಳನು
ರಾಗದಿಂ ಕಾದಿ ಗೆ[2]ಲ್ದ[2]ವನ .
ನಾಗಾಂಗನೆಯ ಕೈವಿಡಿದು ತಂದವನಿವ
ನೀಗ ನೀರಜದಳನೇತ್ರೆ ೬೦

ಪಡೆದ ಜನನಿಯ ನೋಂಪಿಗೆ ಸುರಕರಿಯನು
ಪೊಡವಿಗೆ ಶರಸೋಪಾನದೊಳು
ನಡಯಿಸಿ ತಂದವನಿವನೀಗ ಪೆಣ್ಗಳ
ಮುಡಿಯ ನಡುವಣ ಮಾಣಿಕವೆ ೬೧

ರಾಜಸೂಯಕೆ ಧನ ಬೇಕೆಂದೊರೆಯೆ ಧರ್ಮ
ರಾಜನೀ ಲೋಕದೊಳುಳ್ಳ
ರಾಜಾಧಿರಾಜರ ಗೆಲ್ದವನಿವನೀಗ
ರಾಜಹಂಸಾಲಸಯಾನೆ ೬೨

ಏಱಿಸಿ ನುಡಿ[3]ದ[3] ಮಾತಲ್ಲ ಸಹಜವಿದು
ಮೂಱುಲೋಕದ ಗಂಡನೆಂಬ
ಮಿಾಱಿದ ಮಾಸಾಂಕದ ಭಟನಿವನೀಗ
ಮೂಱುಲೋಕದ ಪೆಣ್ಗಳರಸಿ ೬೩

ಕೊಳುಗುಳದೊಳಗೈನೂ[4]ಱ[4]ಕ್ಷೋಹಿಣಿ
ಬಲವನೊಬ್ಬನೆ [5]ತೀರ[5] ಕೊಂದ
ತುಳಿಲಾಳಿವನೀಗಳೆನ್ನಂತರಂಗದ
ದಳವುಳಕಾರ್ತಿ ನಿನ್ನಾಣೆ ೬೪

ಮೆಟ್ಟಿದನಮರಲೋಕವ ನಾಗಲೋಕದ
ಬಟ್ಟೆಯ ಮೆಟ್ಟಿದಂದದಲಿ
ಅಟ್ಟಿದನಸುರರನಿವನಿಗೆ ಸರಿ[6]ಗಯ್ಯ[6]
ದಿಟ್ಟರುಂಟೇ ಲೋಕದೊಳಗೆ ೬೫

---

[1] ತಿಹ (ಐ) [2] ಯ್ದ (ಎ ಗ) [3] ವ (ಇ) [4] ೞೞ (ಅ ಇ) ೞೂಂದ (ಉ) [5] ತಿರಿ (ಎ ಗ) [6] ಬಹ (ಇ).

ನಿನ್ನ ಮುಂದೆನ್ನ ಮುಂದಲೆವಿಡಿದೆನ್ನನು
ಬನ್ನಬಡಿಸಿದನೆಂದಿವಗೆ
ಚೆನ್ನೆ ಮುನಿದೆನೆ ಬೇಡಿದ ಶರವನು ಕೊಟ್ಟು
ಮನ್ನಿಸಿ[1]ದೆನು[1] ನೀನಱಿಯೆಯ ೬೬

ಹರಿಯು ಹಣೆಯು ನೆತ್ತರಿಂ ಸುರಲೋಕದ
ತಿರಕೆ[2]ಯಿಂ ತೀರ[2]ದಬ್ಜಜನ
ಶಿರವ ತೆಗೆಯಿಸಿ[3]ದ[3]ನಿವನೀಗ ಕೇಳೆ
ನ್ನರಮೆಯ್ಯ ಬಲುಬಂದಿಕಾರ್ತಿ ೬೭

ಉಪಕರಿಸಿದವನಿಗುಪಕಾರವ ಮಾಡ
ದಪಕಾರವ [4]ಮಾಡುವುದು[4]
ವಿಪರೀತವಿದು ಗೌತಮನೊಂದು ಕಪಿಲೆಯಿಂ
ದಪಕೀರ್ತಿವಡೆದನಱಿಯೆಯ ೬೮

ನಿರಪರಾಧಿಯನಬ್ಜಜನ ಶಿರವನು ಕಿತ್ತ
ದುರಿತವೆನ್ನನು ಲೋಕದೊಳಗೆ
ತಿರಿದುಣಿಸಿತ್ತು ನಿರ್ದೋಷಿಯಿವನ ಮೇಲೆ
ಗಿರಿಜೆ ಮುಳಿಸು ಬೇಡ ನಿನಗೆ ೬೯

ಕಾಣಿಸಿಕೊಂಡೆನು ಕೃಪೆಯಿಂದ ಬೇಡಿದ
ಬಾಣವನಿತ್ತೆ ನಿವನನು
ಏಣಲೋಚನೆ ಕೋಪಿಸಬೇಡ ನೀನೆಂ
ದೇಣಾಂಕಚೂಡ ನುಡಿದನು ೭೦

ಮುಂದಲೆವಿಡಿದೆನ್ನೊಡನಿವ ಕೊಂ[5]ಡಾ[5]ಡು
ವಂದೇತಕೆ ಸುಮ್ಮನಿರ್ದೆ
ಇಂದೇಕೆ ಬಂದಿತಿವನ ಮೇಲೆ ಕೋಪ [6]ಹೇ[6]
ಳಿಂದುವದನೆಯಿದಱಿರವ ೭೧

---

[1] ದುದ (ಐ) [2] ಯಿಂತಿರಿ (ಉ ಎ ಗ) [3] ದವ (ಇ ಐ) [4] ನೆಸಗೂದು (ಐ) [5] ದಾ (ಅ ಇ ಉ ಎ ಗ) [6] ಪೇ (ಐ).

ಏನೆಲೆಂದಳೀ ವೀರ ಶುಚಿತೆ[1]ಗಳುಳ್ಳವ[1]
ರೆನ[2]ಗಾನತರಾದರವರ[2]
ಘನತೆ ಕೆಡುವುದೆ [3]ನನ್ನ ಅ[3]ಡಿಗಳಿಗೆಱಗದ
[4]ಮನು ಮುನಿ ಸುರ ನರರುಂಟೆ[4] ೭೨

ಶುಕನಿಂದ ಶುಚಿಯೆ ದಶಗ್ರೀವನಿಂದಿವ
ನಕಲಂಕ ವೀರವಿಕ್ರಮನೆ
ಸಕಲಭುವನವಂದ್ಯ ಸನಕಾದಿ ಋಷಿಯರ
ನಿಕರದಿಂದಿವನು ಪಿರಿಯನೆ ೭೩

ಅವರವನಿಯ ಮೇಲೆ ಮೆಯ್ಯಿಕ್ಕಿ ನನಗೊಲಿ
ದವನತರಹರು ಭೀತಿಯೊಳು
ಅವರನ್ನನೆ ನೋಡಲಿವ[5]ನೆ[5]ನಗೆಱಗದ
ವಿವರವನೊರೆ ವಿಷಕಂಠ ೭೪

ಎಂದತಿಕೋಪದಿಂ ಕೇಳಿದ ಗಿರಿರಾಜ
ನಂದನೆಗಿಂದುಶೇಖರನು
ಮಂದಹಾಸನದಿಂದ ನರನ ಭಾಷೆಯನಿಂ
ತೆಂದು ಪೇಳಲ್ತೊಡಗಿದನು ೭೫

ಹಿಂದಮರಾವತಿಗಿಂದ್ರನೀ ನರನನಾ
ನಂದದಿಂದೆಯ್ದಿಸಿ ತನ್ನ
ಬಂದಟ್ಟುಳಿಯ ಮಾಡುವಸುರರನಿವನ ಕ
ಯ್ಯಿಂದ ಕೊಲ್ಲಿಸಿ ಬಳಿಕವ[6]ನ[6] ೭೬

ಒಡಗೊಂಡು ಬಂದರಮನೆಗೊಲಿದಾತ್ಮಜ
ಗೊಡನಿತ್ತು ದಿವ್ಯಭೂಷಣವ
ಬಿಡದುಪಚರಿಸಿಯೂರ್ವಶಿಯ ನೃತ್ಯವನಂದು
ಸಡಗರದಿಂ ತೋಱುತಿರಲು ೭೭

ಅವಳ ನೃತ್ಯವನವಳವಯವಶೋಭೆಯ
ನವಳ ವಿಲಾಸವಿಭ್ರಮವ
ಅವ[7]ನ[7]ವಿಕಾರದಿಂ ನಿಟ್ಟಿಸುತಿರಲಿಂದ್ರ
ನವನ ಸನ್ಮಾರ್ಗವಱಿಯದೆ ೭೮

---

[1] ವುಳ್ಳರೆ (ಏ ಗ) [2] ಗಾನತರಾದೊಡವರ (ಇ ಉ) ಗವನತನಾದೊಡೆ
ನವನ (ಏ ಗ) [3] ನನ್ನ ಅ (ಅ ಇ) ಎನ್ನ (ಉ) [4] ದನುಜಾಮರನರರುಂಟೆ
(ಏ ಗ) [5] ನ (ಅ ಉ ಏ ಗ) [6] ನ (ಉ) [7] ನು (ಅ ಗ).

ಇವನಿವಳಿಗೆ [1]ಮಿಗೆ[1] ಸೋಲದಿರ್ದೊಡೆ [2]ಕ[2]
ಣ್ಣಿವೆ ಹಳಚದೆ ನೋಡನೆಂದು
ದಿವಿಜೇಂದ್ರನವನಿರ್ದೆಡೆಗಾ [3]ವನಿತೆ[3]ಯು
ತವಕದಿಂ ಕಳುಪಿದನೊಸೆದು ೭೯

ಪಿಂ[4]ದೆ[4] ಮುಂದೆಡಬಲದೊಳು ಬರೆ ಸಖಿಯರ
ವೃಂದ ರನ್ನದ ಪಲ್ಲಕ್ಕಿಯೊಳು
ಬಂದಳು ಮೋಹನಶಕ್ತಿ ರೂಪಾಂತುದೆಂ
ಬಂದದೊಳಾ ಗಾಡಿಕಾರ್ತಿ ೮೦

ತರುಣರು ತ[5]ಳ[5]ವೆಳಗಾಗೆ ಕೊನಬುಗಳು
ಕೊರಗೆ ಬಲ್ಲ[6]ರು[6] ಬಸವಳಿಯೆ
ವಿರಹಾಗ್ನಿಯಿಂ ವಿಕಳತೆಗೊಳೆ ವಿಟ[7]ರಾ[7]
ಸರಸಿಜ[8]ನೇತ್ರೆ[8]ಯೆಯ್ದಿದಳು ೮೧

ಕಣ್ಣಬೆಳಗಿನ ಬೆಳ್ಳಿಯ ಸಂಕಲೆಯು ಬಿಡು
ಗಣ್ಣವಿಟರಿಗಿಕ್ಕುತವಳು
ಪಣ್ಣಿದಂಗಜನಾನೆಯಂತೆ ಬಂದಳು ಮೆಯ್ಯ
ಬಣ್ಣ[9]ವೇಳಿಸಲೆ[9]ಳೆವಿಸಿಲ ೮೨

ಬೆಳತಿಗೆಗಣ್ಣ ಬೆಳ್ವೆ[10]ಳ[10]ಗೆಳೆಮಿಂಚಿನಂ
ತೆಳಸಲೆಂಟುಂ ದೆಸೆಗ[11]ಳೊಳು[11]
ತಳುವದೆಯ್ತಂದ[12]ಳಾ[12] ತರಳಾಯತೇಕ್ಷಣೆ
ಕಲಿ ಶುಚಿ ಪಾರ್ಥನಿರ್ದೆಡೆಗೆ ೮೩

ಸುರಪತಿಪದವಿಯ ಬಯಸುವ ಯತಿಗಳ
ನರಲಂಬಗೆ ಮಾಱುಗೊಡುವ
ಸರಸಿಜಲೋಚನೆ ಬಂದಳು ಕಾಮಾ
ತುರದಿಂದ ಕಲಿಪಾರ್ಥನೆಡೆಗೆ ೮೪

ಕಡಿದಾಡಿ ಕಲಹಾಂಗಣದೊಳು ಕಾಯುವ
ಮಡಗಿ ತನ್ನೆಡೆಗೆಯ್ತಂದ
ಕಡುಗಲಿಗಳ ಕಡೆಗಣ್ಣಿಂದ ನೋಡದ
ಮಡದಿ ಬಂದಳು ಪಾರ್ಥನೆಡೆಗೆ ೮೫

---

[1] ಮನ (ಉ) (ಎ ಐ ಗ) ಗಳಲ್ಲಿ ಇಲ್ಲ [2] ತನ್ನ ಕ (ಎ ಐ ಗ) [3] ನೀಱು (ಐ) [4] ದು (ಎ) [5] ಳೆ (ಐ) [6] ವ (ಐ) [7] ರಂದು (ಉ) [8] ವದನೆ (ಇ) [9] ವೆಸೆಯೆ ಎ (ಅ ಉ) [10] ಳೆ (ಐ) [11] ಳನು (ಎ) [12] ಳು (ಉ).

ಕೂಡುವ ಕೂರ್ಮೆ ನೋಡುವ ಬೇಟ ಸವಿವಾ
ತಾಡುವ ಸೊಗಸು ಚಿತ್ತವನು
ಕೂಡೆ ಕಲಕುತಿರೆ ಬಂದಳೂರ್ವಶಿ ಕಡು
ಗಾಡಿಯಿಂ [1]ಕಲಪಾರ್ಥನೆಡೆಗೆ[1] ೮೬

ಯಾಗಶತವ ಮಾಡಿದವರಿಂದ ಹೊಱಗಣ
ಬಾಗಿಲ ಕಾಯಿಸಿಕೊಂಬ
ಆ ಗಾಡಿಕಾರ್ತಿಯೆ ಪಾರ್ಥನ ಮುಂದನು
ರಾಗದಿಂ ನಿಂದಳೆಯ್ತಂದು ೮೭

ಅಂಗಜನಲರ್ಗಣೆಯಂಗನಾರೂಪವ
ನಂಗೀಕರಿಸಿತೆಂ[2]ಬಂತೆ[2]
ಭಂಗಿಯನೊಳಕೊಂಡು ಮೆಱೆವಚ್ಚರ[3]ಸಿ[3]ಯ ಬೆ
ಡಂಗಿಗೆಳಸಿದನೆ ಪಾರ್ಥ ೮೮

ಬಂದಮರಾಂಗನೆಯಿರವ ಕಾಣುತ ನರ
ತಂದೆಯ ರಾಣಿ ನೀವೇಕೆ
ನಂದನನೆನ್ನೆಡೆಗೆಯ್ತಂದಿರೆನೆ ಮನ
ನೊಂದು ಶಪಿಸಿ ತಿರುಗಿದಳು ೮೯

ತಿರುಗಲಿಂತೆಂದು ಬಗೆದನವನಾನೀ
ಸುರನಾರಿಯ ನೃತ್ಯವನು
ಪರಿಕಿಸುತಿ[4]ರ್ದೊ[4]ಡಱಿಯದಿಂದ್ರನಂಗಜಾ
ತುರದಿಂದೆಣಿಸಿ ಮನದೊಳು ೯೦

ಸುದತಿಯನಿವಳನೆನ್ನೆಡೆಗಟ್ಟಿದನಿಂದು
ಮೊದಲನ್ಯನಾರೀಜನದ
ವದನವ ನೋಡೆನೀಶ್ವರನಾಣೆಯೆಂದಿವ
ನೊದವಿ ನನ್ನಾಣೆಯಿಕ್ಕಿದನು ೯೧

ಅಂದು ಮೊದಲು ಪರವಧುಗಳ ವದನಾರ
ವಿಂದವ ನೋಡನವರಿಗೆ
ವಂದನೆಯನು ಮನದೊಳಗಲ್ಲದೆ ಕಾಯ
ದಿಂದ ಮಾಡನು ಕೇಳಿವನು ೯೨

---

[1] ಪಾರ್ಥನಿದ್ದೆಡೆಗೆ (ಇ ಉ ಎ ಐ ಗ) [2] ದೆಂಬ (ಉ ಎ ಐ ಗ) [3] ಸೆ (ಉ ಐ) [4] ರ್ದ (ಅ ಉ ಎ ಗ).

ಅದಱಿಂದ [1]ಕೂರ್ತ[1]ನಿವನಿಗೆ ಸಾಲೋಕ್ಯ
ಪದವನಿತ್ತೆನು ನಿನಗಿವನು
ಹೃದಯ[2]ದಿಂದ[2]ಲ್ಲದೆ ಕಾಯದಿಂದೆಱಗನು
ಮ[3]ದ[3]ಕೋಕಿಲನಿಭವಾಣಿ ೯೩

ಎನಲಾನು ಸಾಮಾನ್ಯಾಂಗನೆಯೇ ನಿನ್ನ
ವನಿತೆಯಲ್ಲವೆ ಲೋಕಗಳ
ಜನನಿಯಲ್ಲವೆ ನನ್ನಡಿಗಳಿಗೆಱಗದ
ದನುಜಾಮರನರರುಂಟೆ ೯೪

ಸುರಪನಱಿಕೆಯಿಂದ ಬಂದೂರ್ವಶಿಯನು
ಪರಿಹರಿ[4]ಸಿದ[4] ಗರ್ವದಿಂದ
ಸುರನರೋರಗ[5]ನತೆ ನನಗೆ[5]ಱಗದ ಪಾರ್ಥ
ನಿರವ ನಿನಗೆ ತೋ[6]ಱಿಸು[6]ವೆನು ೯೫

ಪುರುಷನಱಿಕೆಯಿಂದ ಬಂದ ಕಾಮಿನಿಯ[7]ನು[7]
ಪರಮಕಾಮುಕರೊಳಗಾಗಿ
ಪರಿಹರಿಸುವರಿಂದ್ರನಟ್ಟಿದೂರ್ವಶಿಯನು
ನೆರೆಯದಿವನಿಗೆ ಪುಟ್ಟಿದೆಯ ೯೬

ಪುರುಷ[8]ನ[8] ಮುಂದಕ್ಕ ಬಾರೆಂಬರವನಿಲ್ಲ
ದಿರಲತ್ತಿಗೆಯೆಂದು ಕರೆದು
ನೆರೆವರೋರೋರ್ವರಂಗನೆಯರನೋರೋರ್ವ
ರಿರವಿ[9]ದೇನಲ್ತೆ[9] ಮಾನವರ ೯೭

ಕಟ್ಟಿಂದ ಕಾ[10]ವ[10]ಲಿಂದಾಣತಿಯಿಂ [11]ಮೈ[11]
ಮುಟ್ಟಲಮ್ಮರು ಪರವೆಣ್ಣ
ಕಟ್ಟೇಕಾಂತದೊಳವರಿರಲವರನು
ಬಿಟ್ಟು ಕಳುಹುವರೆ ನರರು ೯೮

---

[1] ಕುರಿತು ನಾ (ಉ) ಕೂರ್ತು ನಾ (ಕ) [2] ದೊಳ (ಎ) [3] ದನ (ಎ ಗಟ)
[4] ಸದೆ (ಇ) [5] ನತೆಗೆನಗೆ (ಇ) ರತೆಗೆನಗೆ (ಐ) [6] ಱು (ಐ) [7] ರ (ಇ ಎ ಐ)
[8] ರ (ಐ) [9] ದಲ್ತೆನೆ (ಅ) [10] ವಿ (ಅ ಇ) [11] ಮನ್ನ (ಅ ಇ ಉ).

ಎಂದು ನುಡಿದು ಜಗದೀಶ್ವರನೋಲಗ
ಕಂದು ಬಂದಿರ್ದೂರ್ವಶಿಯು
ಸಂದ ಗಾಡಿಯ ನಡೆನೋಡುತವಳಿಗಿಂ
ತೆಂದು ನುಡಿದಳಗಜಾತೆ ೯೯

ಸತಿ ಸುತ ಧನ ದೇಹದಾಶೆಗಳನು ಬಿಟ್ಟು
ಶ್ರುತಿಮತ ಕರ್ಮಮಾರ್ಗದೊಳು
ಶತಯಾಗವ ಮಾಡಿದರಿಗಲ್ಲದೆ ನಿನ್ನ
ರತಿಸುಖವಿಲ್ಲ ನರರಿಗೆ ೧೦೦

ವಿಷಯಸುಖ[1]ಗಳ[1]ನುಳಿದು ವಿಪಿನದೊಳುಗ್ರ
ವಿಷಮತಪವನಾಚರಿಪ
ಋಷಿ[2]ಯರ್ಗೆ[2] ದೇಹಾಂತರದೊಳಲ್ಲದೆ [3]ನೀನು[3]
ವಿಷಯವೆ ವೀಣಾಲಾಪೆ ೧೦೧

ಭಂಗವಿಲ್ಲದೆ ಭಯವಿಲ್ಲದೆ ವಿಷಮಾಜಿ
ರಂಗದೊಳಳಿದ ಸುಭಟರ
ಸಂಗಕೆಳಸದ ನಿನ್ನನು ನರನೊಲ್ಲದ
ಭಂಗಿಯ ಪೇಳು ಕೇಳುವೆನು ೧೦೨

ಎಂತು ನೀನವನೆಡೆಗೆ[4]ಯ್ದಿದೆಯ[4]ವ ನಿನ್ನ
ನೆಂತು ಮೇಲಿಕ್ಕಿ ಹಿಡಿಯದೆ
ಅಂತರಂಗವ [5]ಹಿ[5]ಡಿದನು ಪೇಳಿದಱ ವೃ
ತ್ತಾಂತವನೆಂದು ಕೇಳಿದಳು ೧೦೩

ಏನಲಂದು ತನ್ನನೊಲ್ಲದ ಕೋಪದಿಂದಾ
ವನಜವದನೆ [6]ಬೇಗ[6]ದೊಳು
ಮನಕೆ ಬಂದಂತೆ ಕೆಕ್ಕಸಗೆಲೆದಳು ಗಿರಿ
ತನುಜೆಯೊಡನೆ ಪಾರ್ಥನನು ೧೦೪

ಸುರಲೋಕವನೆಯ್ದಲಿ ಶಿವಲೋಕದೊ
ಳಿರಲಿ ಸೂಳೆಯರು ಮುನಿ[7]ದರೆ[7]
ಗರುವತನದೊಳಿರ್ಪರೆ ಬಯ್ದಳೂರ್ವಶಿ
ನರನನದೇನ ಬಣ್ಣಿಪೆನು ೧೦೫

[1] ವ (ಅ ಐ) [2] ಗಳ (ಉ) ಗಳ್ಗೆ (ಐ) [3] ನಿನ್ನ (ಅ ಉ) [4] ಯ್ದಿದೆಯು (ಐ) [5] ಪಿ (ಐ) [6] ಕೋಪ (ಉ) [7] ದೊಡೆ (ಇ ಗ).

ಮೊಱೆ ಧರ್ಮವಲ್ಲೆಂದು ಬಿಟ್ಟವನಲ್ಲಿಂದ್ರ
ನಱಿಕೆಯಿಂ ಬಂದಳೆಂಬುದನು
ಅಱಿದಂಜಿ ಬಿಟ್ಟನೀ ನರನೆನ್ನನೆನ್ನ ಕಾ
ಲ್ಗೆಱಗದಮರ ನರರುಂಟೆ ೧೦೬

ಮೊಱೆ ಧರ್ಮಕಂಜಿದೊಡರ್ಜುನ ಪಾಂಚಾಲಿ
ಗೆಱೆಯನಾಗಿಹನೆ ಮೆಯ್ಮಱೆದು
ನೆಱೆಗೆಯಲ್ಲವನೆನ್ನ ಬಿಟ್ಟನೆಂಬೀ ನುಡಿ
ನೆಱೆ ಜಾಣೆ ಭಾವಿಸಿ ನೋಡು ೧೦೭

ರೂಪಿಲ್ಲವೆಂದು ಬಿಟ್ಟನೊ ಧರ್ಮವ[1]ಲ್ಲ[1]ದು
ಪಾಪವೆಂದಂಜಿ ಬಿಸುಟನೊ
ಚಾಪಲಲೋಚನೆ ಪೇಳಿವೆರಡಱೊಳ
ಗೀ ಪಾರ್ಥನೆನ್ನ ಬಿಟ್ಟುದನು ೧೦೮

ರೂಪಿಲ್ಲವೆನಬಾರದಮರಾಂಗನೆಯನು
[2]ಪಾಪವೆಂದೆನಬೇಕಿವಗೆ
ಪಾಪವಲ್ಲಿಯದಿವರ್ಗೈವರು ಪಾಂಚಾಲಿ
ಗೋ[2] ಪರಾಗಿಹರು ಸೋದರರು ೧೦೯

ಮೊಱೆದಪ್ಪಬಾರದೆಂ[3]ಬು[3]ದು ಸುರಲೋಕದ
ಕೆಱ[4]ನಲ್ಲ ನರ[4]ಚರಿತವಿದು
ತೊಱೆದೇತಕಿದನಿವರ್ಗೈವರು ಪಾಂಚಾಲಿ
ಗೆಱೆಯರಾಗಿಹರು ಪೇಳಗಜೆ ೧೧೦

ತಂದೆ ಸೋಂಕಿದ[5]ಳೆಂ[5]ದೆನ್ನನೊಲ್ಲದೆ ಪೋದ
ಮಂದನೇಕಿವನಗ್ರಜನ
ಇಂದುವದ[6]ನೆಗೆ[6] ದ್ರುಪದನಂದನೆಗೆ ತಪ್ಪಿ
ಮುಂದುಗೆಟ್ಟನು ಮೃಗನಯನೆ ೧೧೧

ವಾರಾಂಗನೆಯರೆಮ್ಮೊಳು ಮೊಱೆಧರ್ಮವ
ರಾರೈವ ಸಜ್ಜನನಿವನು
ಕೌರವಗಿರ್ದ ಸುಭದ್ರೆಯನೊಯ್ದನು
ಜಾರನಿವ ಗೆ[7] ಮೊಱೆಯುಂಟೆ ೧೧೨

---

[1] ಲ್ಲೆಂ(ಉ) [2] ಪಾಪವೆಲ್ಲಿಯದಿವನಿಗೆ ಚಾಪಲಲೋಚನೆ ಪಾಂಚಾಲಿಗೈವರು
ಓ (ಇ ಎ ಗ) [3] ಬಿ (ಇ) [4] ನೇ ನರನ (ಇ ಎ ಗ) [5] ವಳೆಂ (ಇ) ನೆಂ (ಐ)
[6] ನೆ (ಅ ಇ ಐ) [7] ನಿಗೆ (ಎ ಗ).

ಅಱವೆಯನುಪವಾಸ[1]ಕೇ[1]ಱವಸುವಂತಿಂದ್ರ
ನಱಕೆಯಿಂ ಬಂದ[2]ಳನೆ[2]ನ್ನ
ನೆಱೆಭೀತಿಯಿಂ ಬಿಟ್ಟು ಸಾಧುವ[3]ನೆಂ[3]ಬೀ
ಕುಱಗೇತಕೆ ಮಾನ[4]ಗರ್ವ[4] ೧೧೩

ನರಲೋಕದ[5]ಮಲದೇಹದಂ[5]ಗನೆಯರ
ನೆರೆವ ಕೀಟಕ [6]ನರನಿವನು[6]
ಸುರಕಾಂತೆಯುನೆನ್ನನಳ್ಕಿ ಪಿಡಿಯದಿರೆ
ಪಿರಿಯನಾದ[7]ನೆ ಪೇ[7]ಳಗಜೆ ೧೧೪

ಗಾವಿಲ ಬಂದು ಪಟ್ಟಣದ ಪದಸ್ಥವೇ
ಶ್ಯಾವನಿತೆಯುರ ಕಂಡಂಜಿ
ಭಾವಜಕೇಳಿಗೆ ಮೇಲಿಕ್ಕದಿರಲವ
ನಾವ ಸತ್ಪುರುಷ [8]ಪೇ[8]ಳಗಜೆ ೧೧೫

ಒಡೆಯನ ಮುಂದೆ ಬಿದ್ದಿರ್ದೊಡವೆಯ ಕಳ್ಳ
ಬಿಡುವವೊಲಿಂದ್ರ ಕಳುಪಿದ
ಮಡದಿರನ್ನವನೆ[9]ನ್ನನಿವ[9]ನಂಜಿ ಬಿಟ್ಟು ನಿ
ನ್ನಡಿಗೆಱಗದ ಗರ್ವವೇ[10]ನು[10] ೧೧೬

*ಕೆಡಹಿ ಜಂತ್ರದ ಮೀನ ಪೊಡವಿಯುಱಿಯೆ ತಂದ
ಮಡದಿಯನೊಡಹುಟ್ಟಿದವರ
ಎಡೆಗೆ ಕಳು[11]ಹು[11]ವ ಮುಂದಡಿಗೇತಕೆ ನಿ
ನ್ನಡಿಗೆಱಗದ [12]ಗರ್ವವಿವಗೆ[12] ೧೧೭

†ಮಡದಿರನ್ನವೆ ಕೇಳು ಮನೆಯೊಳು ಕಾ[13]ಳ[13]ಗ
ದೆಡೆಯೊಳು ಪಾರ್ಥ ಬಲ್ಲದನು
ಅಡಿಯ ತೆಗೆವುದಿಲ್ಲ ಹಿಂದಕಿವನು ಮುಂ
ದಡಿಯನಿಕ್ಕುವನು ನಿನ್ನಾಣೆ ೧೧೮

---

[1] ಕಿ (ಎ ಗ) [2] ಪಳೆ (ಎ ಗ) [3] ನಂ (ಅ) [4] ಧರ್ಮ (ಇ) [5] ಮುಂದೆ ಹಾದರಾಂ (ಎ ಗ) [6] ನಸಿವನನು (ಎ ಗ) [7] ನೆ ಕೇ (ಉ) ನು ಪೇ (ಐ) [8] ಕೇ (ಎ ಐ ಗ) [9] ನ್ನವ (ಅ ಇ ಉ) [10] ನೊ (ಐ) [11] ಪು (ಎ ಐ ಗ) [12] ಮಾನಗರ್ವ (ಅ ಎ ಗ) [13] ಳೆ (ಐ) * (ಉ) ಪ್ರತಿಯುಲ್ಲಿಲ್ಲ † (ಉ ಎ ಗ ಟ) ಗಳಲ್ಲಿಲ್ಲ.

*ಕಂಡೆನ್ನ ಮೋಲಿಕ್ಕ[1]ಲ[1]ಮ್ಮದಿವನು ಮರು
ಳ್ಗೊಂಡರಂತಿರೆ [2]ಬಳಿಕಾನು[2]
ಗಂಡುಹೆಣ್ಣಲ್ಲದೆ ಹೋಗೆಂ[3]ದಿ[3]ವನನು ಶಿ
ಖಂಡಿಯ ಮಾಡಿದೆನಂದೆ ೧೧೯

ಇಂದಿವನನು ನನ್ನನು ಕಳುಪಿದೆಯಾದ
ಡಿಂದುವದನೆ ಭೂತಳಕೆ
ತಂದೆಯ ರಾಣಿಗೆ ತಪ್ಪಿದ ಪಾತಕ
ನೆಂದೆನಿಸುವೆನು ನಾನಿವನ ೧೨೦

ಜನಕನ ರಾಣಿಯೆಂದೆನ್ನನುಳಿದೆನೆಂ
ದನುವದಿಸುವ ಫಲುಗುಣನ
ನನೆಯಂಬಿಗೀಡಾಗಿಪೆನಿವ[4]ನ[4]ಯ್ಯಗೆ
ವನಿತೆಯಾನಾಗಿ ಭೂಮಿಯೊಳು ೧೨೧

ಕಳುಪಿವನನು ನನ್ನನು ನರಲೋಕಕೆ
ತಳುವದೆ ತರಳಾಯತಾಕ್ಷಿ
ಇಳೆಯೊ[5]ಳಗಿವನ[5] ಕೆಡಿಸಿ ಮೊಱೆಧರ್ಮವ
ಬಳಿಕ [6]ಬಹೆನು ನಿನ್ನ ಬಳಿಗೆ[6] ೧೨೨

*ತಂದೆಯ ತರಳಲೋಚನೆಯ ರೂಪಿಗೆ ಸೋತ
ನೆಂದು ಮನುಜಲೋಕದವರ
ನಿಂದೆ ಗಿವನನೀಡಾಗಿಸದೊಡೆಸುರ
ಸುಂದರಿಯೆ ನಾನಗಜೆ ೧೨೩

*ನಿನ್ನಡಿದಳಿರ್ಗಳಿಗೆಱಗ[7]ದಿವನ[7] ನಾ
ನೆನ್ನಕಾಲ್ಪಡಿಯಿಸಿಕೊಂಡು
ಪನ್ನಗಾಭರಣಗೆ ತೋಱಿಸುವೆನು ಕಳು
ಪೆನ್ನೊಡನಿವನ ಮರ್ತ್ಯಕ್ಕೆ ೧೨೪

---

[1] ದ (ಐ) [2] ಬಳಿಕಿವನು (ಎ ಗ) ಮೋಲಾನು (ಕ) [3] ದ (ಎ ಐ)
[4] ರ (ಅ ಇ ಎ ಐ ಗ) [5] ಳಿವನಿಗೆ (ಅ ಇ ಉ ಐ) ಳಿವನ (ಎ) [6] ಹೇಳ:ವೆ
ಬಂದು ನಿಮಗೆ (ಎ ಗ) [7] ದಿವನಾ (ಅ ಉ) ದವನಾ (ಇ) *(ಉ) ಪ್ರತಿಯಲ್ಲಿಲ್ಲ.

ಊರ್ವಸಿಯೊಲಿದು ಬಂದೊಡೆ ಸೋಲ್ತುದಿಲ್ಲೆಂಬ
ಗರ್ವದ ನುಡಿಯು ನಿನ್ನಿವನ
ನಿರ್ವಹಿಸಲಿ ನಮ್ಮ ನಿರ್ವರನಟ್ಟು ನೀ
ನುರ್ವಿ[1]ಗೆಂದವಳು ನುಡಿದಳು[1] ೧೨೫

ಸುರಲೋಕದೊ[2]ಳಗಂ[2]ದು ಕಂಡುದು ಮೊದಲಾಗಿ
ನರನ ನೆರೆಯಬೇಕೆಂಬ
ಪರಮಕಾತುರ[3]ದಿಂದ[3]ಲಗಜೆಯ ಮುಂದೆ ತ
ನ್ನಿರವ ಕಾಣಿಸಿಕೊಳ್ಳದವಳು ೧೨೬

ನರಜನ್ಮದೊಳಗೆ ಬಂದಾ[4]ದೊಡವನನೊಡ[4]
[5]ವೆರಸುವೆನೆಂಬ ಬುದ್ಧಿಯನು[5]
ಇರಿಸಿಕೊಂಡಂತರಂಗದೊಳು ಭವಾನಿಯ
ಹರಿಬಕೆ ಪೋಪಂತಾಡಿದಳು ೧೨೭

ಕ[6]ಳಿ[6]ಪಿವನನು ನನ್ನನು ಮರ್ತ್ಯಲೋಕಕೆ
ನಳಿನಾಕ್ಷಿ ನಿನ್ನಡಿ[7]ದಳಿರ್ಗೆ[7]
ತಲೆವಾಗದಿವನ ಗರ್ವವ ಮುಱಿವೆನು ನನ್ನ
ಬಲುಮೆಯ ನೋಡೆಂದಾಡಿದಳು ೧೨೮

ನರಜನ್ಮದೊಳಗೆ ಬಂದಾದೊಡಮೂರ್ವಶಿ
ನರನ ನೆರೆಯಬೇಕೆಂಬ
ಭರವನೆದೆಯೊಳಡಗಿಸಿಕೊಂಡು ನುಡಿದಳೀ
ಶ್ವರಿಯ ಸೇವೆಗೆ ಪೋಪಂತೆ ೧೨೯

ಇಂತು ನುಡಿದ ಸುರಕಾಂತೆಯ ನುಡಿಗಂತ
ಕಾಂತಕನರಸಿ ಚಿತ್ತದೊಳು
ಸಂತಸವಟ್ಟು ನುಡಿದಳು ಮುಂದಣ ವೃ
ತ್ತಾಂತದಿರವನೀಶ್ವರಗೆ ೧೩೦

---

[1] ಗೊದವರು ಮಾಡಿದರು (ಇ) [2] ಳಗಂ (ಇ ಉ ಎ ಗ) [3] ವಿರ (ಇ ಉ ಎ ಗ) [4] ದರು ಉರ್ವಶಿ (ಇ) [5] ನರನ ನೆರೆಯ ಬೇಕೆಂದು (ಇ) ವೆರಸ ಬೇಕೆಂಬ ಬುದ್ಧಿಯನು (ಎ ಐ ಗ) [6] ಳು (ಉ) [7] ಗಳಿಗೆ (ಇ).

ಇಳೆಯೊ[1]ಳಿವಳನು[1] ಪುಟ್ಟಿಸುವೆನಿವಳ ಬೆಂ
[2]ಬಳಿವಿಡಿದೀ[2] ಧನಂಜಯನ
ತಳುವದೆ ಪುಟ್ಟಿಸು ಮರ್ತ್ಯಲೋಕದೊಳಿವ
ನಳವ [3]ನೀಕ್ಷಿಸ[3]ಬೇಕಭವ　　೧೩೧

ಎನಲಾ ಮಾತಿಗೆ ನಸುನಗುತೀಶ್ವರ
ದನುಜಮರ್ದನನ ಮೈದುನನ
ಅನು[4]ರಾಗ[4]ದಿಂ ಕರೆದಗಜೆಯಾಡಿದ ಮಾತ
ನನುನಯ[5]ದಿಂದ[5] ಪೇಳಿದನು　　೧೩೨

[6]ರಾಜಶೇಖರನ ಮಲ್ನ[6]ಡಿಗೇಳುತಂಬುದ
ರಾಜಿಯುರವವ [7]ಲಾ[7]ಲಿಸಿದ
ರಾಜಮರಾಳನಂತುಱೆ ಬೆದಱಿದ ಸುರ
ರಾಜ[8]ತನುಜ[8]ನೆದೆಯೊಳಗೆ　　೧೩೩

ಕಲಕಿದ ಕರಣಂಗಳ ಕ[9]ಳಕಳ[9]ವನು
ನಿಲಿಸಿ [10]ನಿಳಿಂಪೇಂದ್ರ[10]ತನಯ
ಬಳಿಕ ನುಡಿದನು ಭವಾರಣ್ಯದಾವಾ
ನಳಗೆ ಭಾಳಾಕ್ಷಗಿಂತೆಂದು　　೧೩೪

ಸಱಿಮಿಂಡಿಯರ ಕಾಣುತ ನಿನ್ನ ಪೂಜೆಯ
ತೊಱೆದು ನಿನ್ನೊಂದು [11]ಜಾನ[11]ವನು
ಮಱೆದು ಮನ[12]ಸಿಜ[12]ನಾಳಾಗಿರ್ಪ ಮಾನವ
ಗುಱಿಗಳೊಳೆಂತು ಪುಟ್ಟುವೆನು　　೧೩೫

ಪರಬೊಮ್ಮದ ಮಾ[13]ತಾ[13]ಡುತ [14]ಮನದೊಳು[14]
ಪರವಧು ಪರವಸ್ತುಗಳಿಗೆ
ಪರಿದಾಡುವ ಪಾತಕನರರೊಳಗಾ
ನಿರಲಾರ್ಪೆನೆ [15]ಪೇ[15]ಳಭವ　　೧೩೬

---

[1] ಳಗಿವಳ (ಉ)　[2] ಬಿಡದೆ ಪಿಂದೀ (ಎ ಗ)　[3] ಪುಟ್ಟಿಸ (ಅ ಉ) ನಿಟ್ಟಿಸ (ಇ)　[4] ನಯ (ಅ)　[5] ದಿಂ (ಇ ಎ ಗ)　[6] ಆ ಜನ್ಮದೂರನ ನು (ಕ)　[7] ನಾ (ಎ ಗ)　[8] ನಂದನ (ಉ)　[9] ಲಕಲ (ಉ ಐ)　[10] ನಿಳಿಂಪಿಂದ್ರ (ಅ) ನಿಳೇಂಪೇಂದ್ರ (ಇ ಉ ಎ ಗ) ನಿಲಿಪಿಇಂ (ಐ)　[11] ಜ್ಞಾನ (ಐ)　[12] ಮನಸಿ (ಅ ಇ ಎ ಐ)　[13] ತನಾ (ಅ ಇ ಉ ಎ ಗ)　[14] ಬಾಯೊಳು (ಅ ಇ ಉ ಎ ಗ)　[15] ಕೇ (ಉ).

ಈ ನಿನ್ನ ಸಾಮೀಪ್ಯವನೆಂತು ಬಿಡುವೆನು
ಮಾನವಲೋಕದೊಳೆಂತು
ಯೋನಿಮುಖದೊಳೊಗೆವೆನು ಚಂದ್ರಸೂರ್ಯ ಕೃ
ಶಾನುನಯನ ಪೇಳೆನಗೆ ೧೩೭

ನರಲೋಕದೊ[1]ಳು[1] ನೀನುದಯಿಸೆಂದೆನಗೆ ನೀ
ನಿರವಿಸಬಹುದೆ ಗಿ[2]ರೀ[2]ಶ
ಕರುಣವಿಲ್ಲಾ ನಿನಗೆಂದು ಕಪಿಧ್ವಜ
ನುರುದುಃಖದಿಂದ ನುಡಿದನು ೧೩೮

ನುಡಿಯಲಿಂತೆಂದನಭವ ನಿನ್ನಂಬಿಂದ
ಮಡಿದ ನಿವಾತಕವಚರು
ಕಡುಗಲಿಗಳು ಸಮಸಪ್ತಕರೊಗೆದರು
ಬಿಡದೆ ತುರಷ್ಕಜಾತಿ[3]ಯೊಳು[3] ೧೩೯

ಧರೆಯನೆಲ್ಲವ[4]ನವರಿರದೆ[4] ಸಂಹರಿಸುತ್ತೈ
ಧರೆಯುದಱಿಂದ ನೀನವರ
ಧುರ[5]ಧರೆಯೊಳಗಂ[5]ತಕಪುರಿಗೆಯ್ದಿಸಿ
ಭರದಿಂ[6]ದೆ[6]ಯ್ದೆಮ್ಮ ಬಳಿಗೆ ೧೪೦

[7]ಎಂದೇಣಾಂಕ ಚೂಡಾಮಣಿ ಪಾರ್ವತಿ[7]
ಮುಂದೆ ಕಳು[8]ಹಿ[8]ದೂರ್ವಶಿಯ
[9]ಹಿಂ[9]ದೆ ನೀನೆಯ್ದೆಂದು ಕಳುಪಿದನಮರೇಂದ್ರ
ನಂದನನನು ಕೃಪೆಯಿಂದ ೧೪೧

ಗೌರಿ ಕರೆದು ಸುರನಾರಿಯ ಕರ್ನಾಟ
ಭೂರಮಣಗೆ ಕಂಪಿಲಗೆ
ಸ್ತ್ರೀರತ್ನವೆಸರ ವನಿತೆಯಾಗು ಪೋಗೆಂದು
ಧಾ[10]ರಿ[10]ಣಿಗವಳನಟ್ಟಿದಳು ೧೪೨

---

[1] ಳಗೆ (ಅ ಇ ಕ) [2] ರಿ (ಉ ಐ) [3] ಯಲಿ (ಇ ಉ ಎ ಐ ಕ) [4] ನಿರದೆಯ್ದಿ (ಐ) [5] ಧರಣಿಯೊಳಂ (ಇ ಎ ಗ ಟ) [6] ದಲ (ಉ) [7] ಎಂದು ನುಡಿದು ಏಣಾಂಕಚೂಡಾಮಣಿ (ಎ ಗ) [8] ಪಿ (ಉ ಐ) [9] ಪಿಂ (ಉ) [10] ರು (ಇ ಉ ಐ).

*ಇದು ಪರದಾರಸೋದರರಾಮನಾಥನ
ಪದಕೃತಿಯೊಳಗೆರಡನೆಯ
ವಿದಿತಾಶ್ವಾಸದೊಳೊಂದನೆಯದು ಸಂಧಿ
ಮೃದುಪದಚಯಸಂಬಂಧಿ ೧೪೩

---

[illegible]

* ಅ ಇ ಎ ಕ ಗ ಚ ಟ ಗಳಲ್ಲಿಲ್ಲ.

# ಏಳನೆಯ ಸಂಧಿ

---

## ಹರಿಹರದೇವಿಯ ಪುತ್ರದೋಹದ

ಸೂಚನೆ : ಹರಿಹರದೇವಿಗೆ ಪುತ್ರ[1]ದೋಹದ[1] ಬಂದು
ಭರದಿಂದ ಪುಟ್ಟಿ ತೆದಿಯೊಳು

ಬಂದಿನವಂಶದರಸುಮಗನೋರ್ವನ
ನಂದನೆಯಾಗಿ ಕಂಪಿಲ[2]ಗೆ[2]
[3]ಅ[3]ಂದು ಸೇರಿದಳುಳಿದಂಗನೆಯರ ಮೊಗ
ಕಂದಲವಳ ರೂಪುಗಂಡು ೧

ಹರಿಗೆ ಮಹಾಲಕ್ಷ್ಮಿ ಹರಿ[4]ನಂದನ[4]ಗೆ ರತಿ
ಸರಸಿಜಭವಗೆ ವಾಗ್ದೇವಿ
ಅರಸಿಯರಾದಂತವಳವನಿಗೆ ಮೋಹ
ದರಸಿಯಾದಳು ಬೇಗ ಬಂದು ೨

ಹರಜೂಟಕೆ ಚಂದ್ರಲೇಖೆ ಪೂವಿಲ್ಗ[5]ೞಿ[5]
ದಿರು ಹರಿಗಾ ವನಮಾಲೆ
ಶರಧಿಗೆ ಮಣಿವೇಲೆ ಮೆಱೆವಂತೆ [6]ಮೆಱೆದಳಾ[6]
ಗರುವೆಯಾ ರಾಯನಂಗದೊಳು ೩

ವನಿತಾರತ್ನವೆಂಬವಳ ಪೆಸರನಾ
ಜನಪತಿ ರತ್ನ ರತ್ನಾಜಿ
ಎನ[7]ಲ[7]ೞ್ತಿಯಿಂದ ಪೆಸರ್ವಡೆದವಳು ಮೋ
ಹನವ ಪುಟ್ಟಿಸಿದಳರ[8]ಸಂಗೆ[8] ೪

ಕಡುಚಲ್ವು ಪೆಣ್ಣುರೂಪಾಂತುದೊ ಮೋಹನ
ಮಡದಿಯಾದುದೊ ಕಣ್ಬೇಟ
ಒಡಲ್ವಿಡಿದುದೊ ಮೇಣೆಂಬ ನುಡಿಗೆಯುವ
ೞೆಡೆಯಾದಳು ಲೋಕದೊಳಗೆ ೫

---

[1] ಮೋಹವು (ಎ ಗ) ಮೋಹಳ (ಐ) [2] ನೃಪಗೆ (ಇ ಎ ಗ) [3] ಬ (ಇ)
[4] ತನಯು (ಉ) [5] ೞೆ (ಅ) ೞಿಂ (ಇ ಎ) [6] ಸೆದಳಾ (ಕ) [7] ೞ(ಅ ಇ ಉ)
[8] ಸಂ (ಉ) ಸಿ (ಎ ಗ).

ಸಾಲದೆಮಗೆ ಕಾಂತಿ ನಿನ್ನ ಕಟಾಕ್ಷದ
ಲೋಲರುಚಿಯ ನೀವುದೆಂದು
ಕಾಲಿಗೆಱಗಿದ ತಾರೆಗಳೆನಲುಗುರ್ಗಳಾ
ಲೋಲಲೋಚನೆಗೆ ಮೆಱೆದವು　　೬

[1]ಪ[1]ಸುಳೆತನದೊಳೆಯ್ದಿದನುರಾಗವ ಬಿಟ್ಟು
ಪಸುರ್ವಡೆದಸುಗೆದಳಿರನು
ಹಸನಲ್ಲವೆನಿಸುತೆಸೆದವಾಕೆಯ ಪದ
ವಿಸಜವರುಣಮಣಿಯಂತೆ　　೭

ಕಮಲದಳಗಳೊ ಲಾವಣ್ಯಾಂಬು[2]ರಾಶಿಯ[2]
ಕಮಠ ಪೋತಗಳೊ ಮೇಣವಳ
ವಿಮಲತರಾಂಘ್ರಿಯ [3]ಮೇಲ್ಗಳೊ[3] ಬಣ್ಣಿ[4]ಪೊ
ಡ[4]ಮಮ ಸಾಧ್ಯವೆ ರೂಪವಳ　　೮

ಮೋಹನ ಸಿದ್ಧರಸದ ಕರಡಿಗೆಗಳೊ
ಮೋಹಿಗಳೆ[5]ದೆಗೆಡಲೆಸು[5]ವ
ಮೋ[6]ಹಮಲ್ಲನ ಮಿಸುನಿಯ ಮೀಂಟಿಗಳೊ ನೋಡ[6]
ಲಾ ಹೆ[7]ಣ್ಣ[7]ನುಣ್ಬಱಡುಗಳು　　೯

ಮದನಮಹಾವೀರ ಪಿಡಿ[8]ದ[8] ಕನಕಮಯ
ಗದೆಯ ಮೋಹ[9]ನ[9]ಗಾಡಿಯನು
ಬೆದಱಿಸುತೆಸೆದವಾ ಮೃಗಮದಗಂಧಿಯ
ಮೃದುಜಂಘಾಕಾಂಡಯುಗಳ　　೧೦

ಪೊರೆಗಳೆದೆಳವಾಳೆಯೊ ಕಾಮದೇವನ
ಕರಿಯ ಕರವೊ ಭಾವಿಸಲು
ಕರ[10]ಭವೊ[10] ಮೇಣೆನಲೆಸೆದವು ಕಣ್ಗಾ
ಸರಸಿಜಾಕ್ಷಿಯ ನುಣ್ದೊಡೆಗಳು　　೧೧

ಕರಿಕುಂಭಗಳೊ ಕಾಮನ ಕೃತಕಾದ್ರಿಗ
ಳಿರವೊ ಮೋಹನದ ಬೆಳಸಿನ
ಉರುತರ ರಾಶಿಗಳೋ ಮೇಣೆನಲಾ
ಗರುವೆಯ ಕಟಿಗಳೊಪ್ಪಿದವು　　೧೨

---

[1] ಹ (ಅ ಉ) [2]ಸರಸಿ (ಇ ಎ ಐ ಗ) [3]ಮೇಗಾಲ್ಗಳ (ಇ ಎ ಗ) [4] ಸಲ (ಉ)
[5] ಡೆಗೆಡಲೆಸೆವ (ಅ ಉ) [6] ಹನ ಮಲ್ಲನ ಮಿಸುನಿಯಮೀಂಟಿಗಳೆನೆ (ಐ) [7] ಣ್ಣೆ
(ಐ) [8] ವ (ಐ) [9] ನದ (ಅ) [10] ದಗದೆಯೊ (ಎ ಗ).

ತ ೨೬
↓

[1]ವ[1]ಳಿಗಳೊ ನವಲಾವಣ್ಯಾಂಬುರಾಶಿಯ
[2]ಸುಳಿ[2]ಗಳೊ ವಶ್ಯದೇವತೆಯು
ಪೊಳೆವ ಕೊರಲ [3]ಮೂರೇ[3]ಖೆಯೊ ಪೊಗಳುವ
ರಳವೆ ಚಲ್ವಾ ಕೋಮಲೆಯ ೧೩

ಸುಳಿನಾಭಿಯಿಂದಂಗಭವನುರುಜಘನಮಂ
ಡಲಕೆ ಮಹಾಲೀಲೆಯಿಂದ
ಇಳಿವ ನಿಚ್ಚಣಿಗೆ[4]ವ[4]ಲ್ಗಳವೋಲವಳಿಗೆ ತ್ರಿ
ವಳಿಗಳೊಪ್ಪಿದವೇನನೆಂಬೆ ೧೪

*ಇವಳಲ್ಲದಿಲ್ಲ ರೂಪಿನೊಳೆಂದಂಬುಜ
ಭವವಚನತ್ರಯದಿಂದ
ಹವಣಿಸಿ ಬರೆದತ್ರಿರೇಖೆಗಳೆನಲಾ
ಯುವತಿಗೆಸೆದವು ವಳಿಗಳು ೧೫

ಲಾವ[5]ಣ್ಯಮೆಂಬ[5] ಮುನ್ನೀರ ಸುಳಿಯು ಕಾವ
ದೇವನರಸಿಯು ಸರಸಿಯ
ಭಾವನೆಯನು ಪುಟ್ಟಿಸುತ್ತಾ ಕೋಮಲೆ
ಯಾವರ್ತನಾಭಿಯೆಸೆದುದು ೧೬

*ಕಂ[6]ಜಾಸ್ತ್ರ[6]ನಿರದವಗಾಹನ ಮಾಳ್ಪಪ
ರಂಜಿಯ ನುಣ್ಗೊಪ್ಪರಿಗೆಯು
ರಂಜನೆಯಂತೆ ರಾಜಿಸಿದುದಾ ರಾಣಿಯ
ಮಂಜುಳನಾಭಿಯ ಗುಣ್ಪು ೧೭

*ಅಂಗಜನಿರದೆ ಜನಂಗಳಕ[7]ಣ್ಬಾಳೆ[7]
ಮೀಂಗಳ ಪಿಡಿವ ಸರಸಿಯೊ
ಅಂಗಲಾವಣ್ಯ[8]ರಸಾಂಬುಕೂಪವೊ[8] ಬಣ್ಣಿ
ಪಂಗಳವೇ ನಾಭಿಯವಳ ೧೮

ಕಾಣಬಹುದು ಭಾವಿಸಿ ನೋಡಿದೊಡೆ ಪರ
ಮಾಣುಗಳೆಡೆ ಯಾಟವನು
ಕಾಣಬಹುದು ಶೂನ್ಯತತ್ವದ ನೆಲೆಯನು
ಕಾಣಬಾರದು ಮಧ್ಯವವಳ ೧೯

---

[1] ತ್ರಿವ (ಅ) [2] ತೆರೆ (ಅ) ವಳಿ (ಇ ಉ ಐ) [3] ರೇ (ಇ ಎ ಐ ಗ) [4] ವಾ (ಇ) [5] ಣ್ಯಾಂಬು (ಅ) [6] ದರ್ಪ (ಇ) [7] ಣ್ಗೊ (ಅ ಉ) ಣ್ವೊ (ಎ ಗ) [8] ದಿಂಗಡಲ ಸುಳಿಯೊ (ಕ) * (ಉ) ಪ್ರತಿಯಲ್ಲಿಲ್ಲ.

ಆವರ್ತನಾಭಿಯಲ್ಲದೆ ಸಣ್ಣ[1]ಬಾಸೆಯ[1]
[2]ಗಾವಳಿಯಲ್ಲದವಳಿಗೆ[2]
ಭಾವಿಸೆ ನಡುವೆಂಬುದಿಲ್ಲಜಸೃಷ್ಟಿನಾ
ನಾವಿಧವೇನಿದಚ್ಚರಿಯೊ    ೨೦

ಆಲಿಂಗಿಸುವ[3]ರೆ[3] ಬಯಲು ಗೋಚರವೆ ಕ
ಣ್ಣಾಲಿ ದಣಿಯೆ ನೋಡುವರೆ
ಆ ಲಲಿತಾಂಗಿಯ ನಡುವದನೇಕಜ
ಮೇಲಱಿಯದೆ ಪುಟ್ಟಿಸಿದನೊ    ೨೧

ಇಲ್ಲವೆನಲು ನೆಲೆವೊಲೆಗಳ[4]ವಾ[4]ಧಾರ
ವಿಲ್ಲದಿರವು ಕಾಣದುದನು
[5]ಇಲ್ಲ ಉಂ[5]ಟೆಂದೆನಬಾರದವಳ ಮಧ್ಯ
ದಲ್ಲ ಬಿಡದು ಸಂದೇಹ    ೨೨

ಗುರುಕುಚಗಳಿವಾಧಾರದ ಮೇಲಲ್ಲ
ದಿರ[6]ವೆಂ[6]ಬ ಸಂದೇಹದಿಂದ
ಇರದನು[7]ಮೇಯ[7]ವಲ್ಲದೆ ಮಧ್ಯವವಳಿಗೆ
ಪರಿಕಿಸಿ ನೋ[8]ಡಿದ[8]ಡಿಲ್ಲ    ೨೩

ಸೊಗಯಿಪ ನಾ[9]ಭೀಕುಂಡ[9]ದಿಂದೊಯ್ಯನೆ
ನೆಗೆವಂಗಭವ ಪಾವಕನ
ಪೊಗೆಗೆರೆಯಂತೆ ಕಣ್ಗೆಸೆದುದಾ ರಾಯನ
ಮೃಗನಯನೆಯ ರೋಮರಾಜಿ    ೨೪

ನೋಡಿದ[10]ರಂ[10]ತರಂಗಕೆ ಪರವಶತೆಯ
ಬೇಡಿದನಿತನೀವವ[11]ಳ[11]
ಗಾಡಿವಡೆದ ಮೊಲೆಗೇಣಿವಕ್ಕಿ ಗ[12]ಳನೆ[12]ಣೆ
[13]ಮಾಡೆ[13] ಸರಿಗೆ ಬಂದಪುದೆ    ೨೫

---

[1] ರೋಮಾಳಿ (ಎಗ) [2] ಭಾವಿಸಿ ನೋಡಲವಳಿಗೆ (ಎಗ) [3] ಡೆ (ಉ)
[4] ಗಾ (ಅಐ) [5] ನಿಲ್ಲದುಂ (ಇಎಗ) [6] ದೆ (ಎಗ) [7] ಮಾನ (ಇಎಗ)
[8] ಡಿದೊ (ಇಎಗ) [9] ಭಿಯಕುಂಡ (ಉ) ಭೀಕುಂಡಲ (ಇ) [10] ಡ (ಉ)
[11] ರ (ಇಎಗ) [12] ಳಿಗೆ (ಅ) [13] ಮಾಡಲು (ಉ).

ತುಂಗಕುಚಗಳನಿವಳಿಗಜ ಪುಟ್ಟಿಸಿ
ಹೊಂಗಳಸಗಳ ಸಿರಿಯುನು
ಪಿಂಗದೆ ಕೆಡಿಸಿದನೆಂದನಲಾ ರಾ
ಜಾಂಗನೆ ರಾರಾಜಿಸಿದಳು ೨೬

ಲಾವಣ್ಯಾಮೃತರಸದ ಲಹರಿಯಿಂದ
ತೀವಿದವಳ ನೆಲೆವೊಲೆಗೆ
ತಾವರೆಮೊಗ್ಗೆ ಪೊಂಬೊಗರಿಗಳೆಣೆಯೆಂದು
ಭಾವಿ[1]ಪನವವನೆಗ್ಗ ನಲ್ತೆ[1] ೨೭

*ಸರಸಿಜನಾಳಗಳೆಣೆಯೆಂಬರವು ಬಹು
ತರ ಕಂಟಕಗಳು ಲೋಲ[2]ಗ[2]ಳು
ತಿರುವಿಲ್ಲದಿಕ್ಷುಕೋದಂಡಯುಗಳದಂತೆ
ಕರಮೆಸೆದವು ಕೈಗಳವಳ ೨೮

†ಕೆಂದಾವರೆಯಲರ್ಗಳೊ ಬಂದ ಮಾವಿನ
ಚಂದಳಿರ್ಗಳೊ ಮೇಣೆಂಬ
ಸಂದೇಹವ ಪುಟ್ಟಿಸುತ ಕೈ[3]ದ[3]ಳ ಕಣ್ಗೆ
ವಂದುದಾ ರಾಜಾಂಗನೆಯ ೨೯

ಹತ್ತ[4]ಕಟ್ಟಿ[4]ದ ರತ್ನದ ಸರ ಮಿಸುನಿಯೊ
ಳೊತ್ತಿ ಸೇರಿಸಿದಂತೆ ಗುಣವ
ಹೊತ್ತೆಸಗಿದವೆನಲವಳ ನುಣ್ಗೊ ರ[5]ಳನು[5]
ಬಿತ್ತರಿಸುವ ಕವಿಯಾರು ೩೦

ಒಂದಿರುಳೊಂದು ಪಗಲು ನೋಳ್ಪರ ಕಣ್ಗೆ
[6]ವಂದ[6] ತಿಂಗಳು ತಾವರೆಗಳು
ಎಂದೆಂದು ನೋಡೆ ಕುಂದದ ಕೊರಗದ ವದ
ನೇಂದುಗೆಣೆಯೆ ರಾಜಸತಿಯ ೩೧

ಮಾರನ ಕಯ್ಯೊಳೆಸೆವ ಕೀ[7]ಲಣೆಯು[7] ಕ
ರ್ಪೂರದ ಹೊಂಗರಡಿಗೆಯ
ಸೇರುವೆ[8]ವ[8]ಡೆದ ವಜ್ರದ ಪಂಕ್ತಿ ಪರಿಕಿಸ
ಲಾ ರಾಜಸತಿಯ ಪಲ್ಗೆಣೆಯೆ ೩೨

---

[1] ಸಬಹುದೆ ಬಲ್ಲವರು (ಕ) [2] ಗೆ (ಇ) [3] ಗ (ಎ ಗ) [4] ಗಟ್ಟಿಕ್ಕಿ (ಎ ಗ)
[5] ಲದು (ಇ) [6] ಒಂದು (ಅ ಇ ಉ ಎ ಐ ಗ) [7] ರಣೆಯು (ಉ) ಲಣಗೆ (ಎ ಗ)
[8] ವೊ (ಅ ಇ ಉ) * (ಉ) ಪ್ರತಿಯಲ್ಲಿಲ್ಲ † (ಅ ಉ) ಗಳಲ್ಲಿಲ್ಲ.

*ಸೊಗಯಿಪ ಕೆಂಪಿಗೆಳ[1]ಸಿ[1] ಮೊಗಸಿರಿ ಬಂ
ದುಗೆಯ [2]ಮಾಲೆಯ[2] ಪಿಡಿದಂತೆ
ಮಿಗೆಮೆಱೆದುದು ಬಾಯ್ದೆಱೆಯಾ ರಾಯನ
ಮೃಗಶಾಬಲೋಲಲೋಚನೆ[3]ಯ[3]    ೩೩

ಖಂಡಶರ್ಕರೆ ಬೆರಸಿದ ತನಿಗನೆವಾಲ
ನಂಡಲೆವವಳ ಚೆಂದುಟಿಗೆ
ತೊಂಡೆವಣ್ಣೆಳೆದಳಿರೆಣೆಯೆಂಬುದಿದು ಸರಿ
ಗಂಡು ಪೇಳ್ವುಪಮಾನವಲ್ಲ    ೩೪

ನಱುಸುಯ್ಗಂಪನಿತ್ತಾಱಡಿವಱಿಗಳ
ನುಱಿ ಪಾಲಿಪವಳ ನಾಸಿಕಕೆ
ನೆಱೆಯುವರಸುಗೊಂಬ ಸಂಪಗೆಯಲರ ಮೇ
ಲಱಿಯದರೆಣೆಗೊಂಬರೈಸೆ    ೩೫

ಸೊಗಯಿಪ ತಾವರೆಯಲರ ನಡುವಣ ಸಂ
ಪಗೆಯ ನನೆಯ ತುದಿಯೊಳಗೆ
ಒಗೆದ ಮಲ್ಲಿಗೆಯ ಮು[4]ಕುಳದಂ[4]ತಾಕೆಯ
ಮೊಗದ ಮೂಗುತಿ ಮೋಹಿಸಿದುದು    ೩೬

ಸದಮಲ ಲಾವಣ್ಯರಸದಿಂದ ತೀವಿದ
ವದನ ಸರಸಿಯ ಮಧ್ಯದೊಳು
ಮುದದಿಂದೋಲಾಡುವ ಮೀನ್ಗಳಂತಾ
ಸುದತಿಯ ಕಣ್ಗಳೆಸೆದವು    ೩೭

ನಗೆಗಂಗಳನಜನಿವಳ್ಗೆ ಪುಟ್ಟಿಸಿ ಮತ್ತೆ
ಮಿಗೆ ಮೋಹಿಸಿ ಮುದ್ದುಮೊಗ[5]ವ[5]
ನೆಗ[6]ಳ್ವ[6]ದ ಮಱೆದನೆಂದೆನೆ ಕಣ್ಗಳವಳಿಗೆ
ಸೊಗಯಿಸಿದವು ಸೊರ್ಕುವೆತ್ತು    ೩೮

ಬಗಸೆಗಂಗಳ ಬೆಳ್ವೆಳಗಿನ ಲಹರಿಯ
ಹೊಗರ ಹೊರಳಿಯಲ್ಲದವಳ್ಗೆ
ಮೊಗ[7]ಮೆಂಬು[7]ದಿಲ್ಲವೆಂಬಾಗಳವಳ ಚೆಲ್ವ
ನೊಗುಮಿಗೆಯನು ಪೇಳ್ವೆನೇನ    ೩೯

---

[1] ಸೆ (ಗ)   [2] ಲರ್ಗಳ (ಕ)   [3] ಗೆ (ಇ ಐ ಗ)   [4] ಗುಳು ವಂ (ಐ ಗ) ಕುರದಂ (ಕ)   [5] ದ (ಇ)   [6] ಳೂ (ಕ) ಳ್ದ (ಗ)   [7] ವಲ್ಲ (ಅ ಇ ಉ ಐ)
* (ಉ) ಪ್ರತಿಯಲ್ಲಿಲ್ಲ.

ಈ ಗರುವೆಯ ನಿಡುಪುರ್ಬಿರಲೆನಗಿನ್ನ
ದೇಗಯ್ಯಬಲ್ಲುದೆಂದೆನುತ
ಬೇಗ ಬಿಸುಟನಂಗಜ ಕರ್ವುವಿಲ್ಲನೆಂ
ಬಾಗಳವಳ ರೂಪದೆಂತೊ ೪೦

*ಮನಸಿಜ ಚಕ್ರೇಶ್ವರನಂಕಮಾಲೆಯ
ನನುನಯದಿಂದ ಬರೆ[1]ವರೆ[1]
ವನಜಸಂಭವ ನಿರ್ಮಿಸಿದ ಹೊನ್ನಪತ್ರಿಕೆ
ಎನಲೆಸೆದುದು ನೊಸಲವಳ ೪೧

ಅಳಿಯಂತೆ ನವಿಲಂತೆ ಕಾರಕಾದಂಬಿನಿ
ಕುಳದಂತೆ ಮದನನೃಪತಿಯ
ಅಲಗಿನ ಶಾಲೆಯಂತವಳಳಕಾಳಿ ಕ
[2]ಣ್ಗೆ ಳ[2]ಸಿದುದಾ [3]ನರಪತಿಯ[3] ೪೨

ಕತ್ತಲೆಯೊಬ್ಬುಳಿಯಂತೆ ಕಾವನ ಕಯ್ಯ
ಕತ್ತುರಿವೊರೆದ ಕಂತುಕದ
ಬಿತ್ತರದಂತೆ ಕಣ್ಗೆಸೆದುದಾ ನಾರಿಯ
ನೆತ್ತಿಯ ತೋರದುಱುಂಬು ೪೩

ಕಾಳೋರಗನ ಪೆಡೆಯ ಮಾಣಿಕದಂ
ತಾ ಲಲಿತಾಂಗಿಯ ಮುಡಿಯ
ಮೇಲೆಸೆದುದು ಚೂಡಾರತ್ನವಾ ನರ
ಪಾಲಗಿಕ್ಕುತ ಮೋಹನ[4]ವನು[4] ೪೪

*ಪಳು[5]ವಿ[5]ನ ಪಲ[6]ವಲರಿನ[6] ಬಂಡುಂಬಳಿ
ಕಳಭಕೆ ಕಮಲಿನಿ ತಾನೆ
ಎಳಸಿ ಬಂದಂತಾದುದಾ ನರಪತಿಗಾ
ಲಲ[7]ನಾಮಣಿ[7] ಕೈ[8]ಸಾ[8]ರೆ ೪೫

ನೋಡುವನಾನಂದಿಸುವನಮರ್ದಪ್ಪುವ
ನಾಡುವನೊಳ್ನುಡಿಗಳನು
ಕೂಡುವನೊಲಿವನೊಯ್ಯನೆ ಮೆಯ್ಮಱೆವನಾ
ಗಾಡಿಕಾರ್ತಿಯೊಳಾ ನೃಪತಿ ೪೬

---

[1] ಯಲು (ಇ) [2] ಣ್ಗೊಳಿ (ಎಗ) [3] ನೃಪಸತಿಯ (ಉ) [4] ವ (ಇಉಎಗ) [5] ಕಿ (ಅಇ) [6] ವು ಪೂವಿನ (ಇಗ) [7] ನೆ ಮಾಣಿಕ (ಅಉ) [8] ಸೇ (ಇಎಗ) * (ಉ) ಪ್ರತಿಯಲ್ಲಿಲ್ಲ.

[1]ಎ[1]ರೆವ ನೆರೆವ ಲಲ್ಲೆಗೆಯ್ವ ಲಾಲಿಸುವ ಕಾ
ತರಿಸುವ ಕರೆವ ಕಾಲ್ವಿಡಿವ
ಮರಲ್ವ ಮನ್ನಿಸುವ ಸುರತಸೂಕ್ಷ್ಮಕಲೆಗಳ
ನರಸಗವಳು ಕಾಣಿಸಿದಳು        ೪೭

*ಮೊಱೆದಪ್ಪಿ ನುಡಿವ ಮುದ್ದಿಸುವ ಮೋಹಿಸುವ ಮೆ
ಯ್ಮಱೆವ ರತಿಪ್ರಪಂ[2]ಚ[2]ಗಳ
ತೆಱನನೆಲ್ಲವ ತೆಱದರ[3]ಸಗೆ[3] ಮಾಡುತ
ನೆಱೆ ಮೋಹಿಸಿದಳು ನೃಪತಿಯ        ೪೮

ನಾನಾತೆಱದ ರತಿಪ್ರಪಂ[4]ಚ[4]ಗಳನಾ
ಮಾನಿನಿ ತೋಱಿ ನೃಪತಿಯ
ಮಾನಸವನು ಮಾಱುಗೊಂಡು ಮಱೆಯಿಸಿದ
ಳಾ ನರನಾ[5]ಥಗನ್ಯವನು[5]        ೪೯

ಬೇಟ ಬೆಡಗು ಬಿಂಕ ಕೂಟ [6]ಕು[6]ಶಲ ಕೂರ್ಮೆ
ನೋಟ ನುಣ್ನುಡಿ ನಸುನಗೆಯ
ನಾಟಕವನು ನ[7]ಟಿ[7]ಯಿಸಿ ಮಿಕ್ಕ ನೀಱೆಯ
ರಾಟವ ಬಿಡಿಸಿದಳವಗೆ        ೫೦

ತನುವೆರಡಾದೊಡೇನಸುವೊಂದೆಂಬಂತೆ
ಮನಮನವೆರಸಿದೊಲ್ಮೆಯೊಳು
ಮನಸಿಜಸಾಮ್ರಾಜ್ಯವನಾಳುತವರಿರ್ವ
ರನುನಯದಿಂ ಸುಖಮಿರಲು        ೫೧

ಆ ನರನಾಥನ ಪಟ್ಟದ ಮಾನಿನಿ
ಭೂನುತೆ ಹರಿಹರದೇವಿ
ಆನಂದದಿಂದೇಱಿದಳುಪ್ಪರಿಗೆಯನೊಂ
ದಾನೊಂದು ದಿವಸಮುಖದೊಳು        ೫೨

---

[1] ಮೆ (ಇ) [2] ಚು (ಇ ಐ) [3] ಸಾಗಿ (ಅ ಐ ಟಿ) [4] ಚು (ಇ ಐ) [5] ಥಂಗ ನ್ಯವನು (ಇ ಉ ಎ ಗ) ಥಗನ್ಯರನು (ಅ) [6] ಕೌ (ಇ) [7] ಲ (ಉ) * (ಎ ಗ) ಗಳಲ್ಲಿಲ್ಲ.

ಎಳಗನ [1]ವೈಹಾ[1]ಳಿಗೆಯ್ಯುವ ಗರುಡಿಯ
ನಿಳಯಕೆ ಪೋಪರಸುಗಳ
ಎಳೆವರೆಯದ ಮುದ್ದುಮಕ್ಕಳನಾ ನೃಪ
ಲಲನೆ ಕಂಡಳು [2]ಪುರದೊ[2]ಳಗೆ ೫೩

*ಚೆಂಡು [3]ಗದುಗು[3] ಹಿಡಿಗವಡೆಯನಾಡುವ
ಚಂಡಿಕೆಗಳ ಬಾಲಕರ
ಮಂಡಳಿಯನು ಕರುಮಾಡದ ಮೇಲಿರ್ದು
ಕಂಡಳಾ ಕಮಲದಳಾಕ್ಷಿ ೫೪

ಆ ಸಮಯದೊಳಾತ್ಮಜನ ಬಯಕೆ ಪುಟ್ಟ
ಲಾ ಸತಿಗಂತರಂಗದೊಳು
ಸೂಸುತ ಕಂಬನಿಗಳನಿಳಿತಂದಳಂ
ದಾ ಸತಿ ಸೌಧಾಗ್ರದಿಂದ ೫೫

ಬಂದರಮನೆಯ ಹಿತ್ತಿಲೊಳು ಕಣ್ಗೊಳಿಸುವ
ನಂದನವನದ ಮಧ್ಯದೊಳು
ಬಂದು ಮಾಮರದಡಿ[4]ಯಲಿ ಕುಳ್ಳಿ[4]ರ್ದಳಾ
ಯಿಂದೀವರಾಕ್ಷಿ ನೋವಿನೊಳು ೫೬

ಮೊಲೆಯುಂ[5]ಡು[5] ಸೊರ್ಕಿನಿಂ ನಲಿನಲಿದಾಡುತಿ
ರ್ಪೆಳೆವ[6]ಱ[6]ಗಳ ಬೆಂಬಳಿಯೊಳು
ಪೊಲ[7]ವಿಂ[7]ದೆಯ್ದಿ [8]ಪಾ[8]ರಿವ ದೀ[9]ಹ[9]ದ ಪುಲ್ಲೆ
ಗಳನಾ ಲಲನೆ ನೋಡಿದಳು ೫೭

ಎಳೆವಸಿಱಿನ ನವಿಲನು ತತ್ತಿಯಿಕ್ಕುವ
ಕಳಹಂಸೆಯನು ಮಱಿಗಳಿಗೆ
ತಳುವದೆ ಕುಟುಕೀವ ಗಿಳಿವಾಣತಿಯನಾ
ನಳಿನ[10]ವದನೆ ಕಂಡಳಾಗ[10] ೫೮

---

[1] ವಾಹ (ಆಐ) ವೈಯಾ (ಇಎಗ) [2] ಪೊಳಲೊ (ಉಎಐಗ) [3] ಬೊಗರಿ (ಅಇ) [4] ಯೊಳು ಕುಳಿ (ಇಉಎಗ) ಯಲಕುಳಿತಿ (ಅ) [5] ಡ (ಉಎಐಗ) [6] ಱೆ (ಉ) [7] ವಿನಿಂ (ಎಗ) [8] ಪ (ಎಗ) [9] ವ (ಎಗ) [10] ನಯನೆ ನೋಡಿದಳು (ಇ) ವದನೆ ಕಂಡಳಾಗ (ಉಎಗ) * (ಉ) ಪ್ರತಿಯಲ್ಲಿಲ್ಲ.

ಮಾಡದ ಮೇಲೆ ಮೊಳೆತ ಪುತ್ರದೋಹದ
ವಾಡುವ ಖಗಮೃಗಗಳನು
ನೋಡಲೊಡನೆ ನನೆಕೊನೆಯೋಗಿ [1]ಬಲಿ[1]ದುದಾ
ಗಾಡಿಕಾರ್ತಿಯ ಮೆಲ್ಲೆರ್ದೆಯೊಳು ೫೯

ಬಳಕಿಂತೆಂದಳು ತನ್ನೆಡಬಲದೊಳು
ಬಳಸಿರ್ದ ಸಖಿ[2]ಯರಿಗವಳು[2]
ಎಳೆವರೆಯುದೊಳಾತ್ಮಜರನು ಪಡೆಯದ
ನಳಿನಾಕ್ಷಿಗಿಹಪರ[3]ವು[3]ಂಟೆ ೬೦

ಎನ್ನಹರೆಯದೇಣಾಕ್ಷಿಯರೆಳೆರನ್ನ
ಗನ್ನಡಿಯಂತೆ ತೊಳಗುವ
ಮನ್ನಣೆವಡೆದ ಮಕ್ಕಳ ಮೊಗದಾವರೆ
[4]ಯನ್ನೋ[4]ಡಿ ನಲವೇಱುತಹರೆ ೬೧

*ಮೊಲೆಯ ಮೇಲಣ ಮೌಕ್ತಿಕಹಾರದಂತಿರು
ಜ್ವಲಿಸುವ ಮಕ್ಕಳನವರು
ಒಲಿದೋವುತಹರೆಯುವರು ಮುನ್ನ ಮಾಡಿದ
ಬಲು ನೋಂಪಿಯ ಫಲವೆಂತೊ ೬೨

ಪಿಂತಣ ಜನ್ಮದೊಳಾನೇನು ದುಷ್ಕೃತ
ವಂ ತಡೆಯದೆ ಮಾಡಿದೆನೊ
ಮುಂತಲರ್ವಡೆದು ಫಲವನ್ನೈಯ್ದುದಿಹ ಲತೆ
ಯಂತಾದುದೆನ್ನಂಗಲತಿಕೆ ೬೩

ಎಳೆಮುತ್ತಿನಂತೆ ಪೊಳೆವ ಮೊಳೆವಲ್ಗಳಾ
ತೆಳುವೆ[5]ಳ[5]ದಿಂಗಳಂದದಲಿ
ತೊಳಗುವ ಕಿಱುನಗೆಮೊಗದ ಬಾಲ[6]ಕನು ಕ[6]
ಣ್ಬೊ[7]ಲವೆ[7]ನಗೆಂದಾದ[8]ಪನೊ ೬೪

ಮೋಲುದ ಸೆಳೆದು ಬೇಗದೊಳು ಬಂದಂಕದ
ಮೇಲೆ ಕುಳ್ಳಿರ್ದೊಂದು ಮೊಲೆಯ
ಲೀಲೆಯಿಂ ಪಿಡಿಕ್ಕೈಸುತೊಂದು ಮೊಲೆಯನುಣ್ಬ
ಬಾಲನನೆಂದು ನೋಡುವೆ[9]ನೊ[9] ೬೫

---

[1] ಬಿರಿ (ಎ ಗ) [2] ಯರೊಳವಳು (ಐ) [3] ಮು (ಗ) [4] ಯಂನೋ (ಅ ಇ ಉ ಏ ಗ) [5] ಳು (ಉ ಎ ಗ) [6] ನಕಾ (ಅ ಇ) ಕನಕ (ಉ) [7] ಳನೆ (ಇ ಎ ಗ) [8] ಪುದೊ (ಅ ಉ ಐ) [9] ನು (ಉ ಎ ಕ ಗ) * (ಉ) ಪ್ರತಿಯಲ್ಲಿಲ್ಲ.

*ನಗುತ [1]ನಲವಿನಿಂದ[1] ಕೆಲಕೆ ಹಾರವ ನೂಂಕಿ
ಮೊಗ ನೋಡುತ[2]ಬ್ಬಬ್ಬ[2]ಯೆನುತ
ತೆಗೆದು ಮೇಲುದ ಮೊಲೆಯುಂಬೆಳೆವರೆಯದ
ಮಗನ ನಾನೆಂದು ನೋಡುವೆನು ೬೬

ಪೊರಳ್ದುರುಳ್ದಂಬೆ[3]ಗಾಲಿಕ್ಕಿ[3] ದಟ್ಟಡಿಯುನಿ
ಟ್ಟಿರದೆ ತಳರ್ನಡೆನಡೆದು
ಪರಿ[4]ಮಱಿಯಾ[4]ಡುವ ಹಸುಳೆಮಗನನೆಂದು
ಹರುಷದಿಂ ತೆಗೆದಪ್ಪುವೆನೊ ೬೭

ಕೈಯ್ಯಾರಲೆತ್ತಿ ಮುದ್ದಿಸುತ ಮುಂಡಾಡುತೆ
ಮ್ಮಯ್ಯ ಬಾರೆಂದು ಬೇಗದೊಳು
ಮೈಯ್ಯಾರಲಪ್ಪಿಕೊಂಡೆಂದಿಗೆ ಮಗನನಾ
ನೊಯ್ಯನೆ ನೋಡಿ ನಲಿವೆನು ೬೮

*ಅಂಗಣಕೆತ್ತಣಿಂದೆಯ್ತಂದುದೀ ಪೊಸ
ಸಿಂಗದ ಮಱಿಯೆನುತೊಸೆದು
ಪಿಂಗದೆ ತೆಗ[5]ದೆತ್ತಿ[5] ಕೊಂಡು ತನುಜನನಾ
ಲಿಂಗಿಪೆನೆಂದಿ[6]ಗ[6] ನಾನು ೬೯

ಅಂದುಗೆ ಕಿಱುಗೆಜ್ಜೆ ಘಂಟೆಗಳುಲುಹೆ
ಯ್ತಂದು ಕಿವಿಯನಾವರಿಸಲು
ಮುಂದೆ ಬಂದೊಯ್ಯನೆ ನಿಂದು ನಲಿವ ಕಂದ
ನೆಂದಿಗಿನ್ನೆನಗಾದಪನೊ ೭೦

ಎನುತ ಚಿಂತಿಸುತ ಕಣ್ಣೀರ ಕೂರುಗುರಿನ
ಕೊನೆಯಿಂದ ಮಿಡಿವ ಕೋಮಲೆಯ
ಅನುವನವಳ ಕೆಳದಿಯರು ಕಂಪಿಲಭೂ
ವನಿತೇಶಗೆ ಪೇಳಿದರು ೭೧

---

[1] ಜಕ್ಕುಲಿಸಿ (ಕ) [2] ವ್ವವ್ವ (ಕ) [3] ಗಾಲಿಸಿ (ಅ ಇ ಉ) ಗಲಿಸಿ (ಎ ಗ) [4] ವರಿದಾ (ಇ ಐ) [5] ದಪ್ಪಿ (ಅ ಉ) [6] ಗಿಂ (ಇ ಎ ಗ) *(ಉ) ಪ್ರತಿಯಲ್ಲಿಲ್ಲ.

ಆ ನುಡಿಗೇಳುತ[1]ಳ್ಕಱೊಳಲ್ಲಗೆಯ್ತಂ[1]ದು
ಮಾನಿನಿಗಿಂತೆಂದೊರೆದನು
ನೀನುಱೆಬಯಸುವ ಬಯಕೆ ಮೊದಲೆ [2]ನ[2]ನ್ನ
ತಾನಲೆ[3]ವುತ[3]ದೆ ತಡೆಯದೆ	೭೨

ಆಯತಲೋಚನೆ ಬಿಡುಮನದಳಲಜ
ಟಾಯು ರಾಮೇಶ್ವರನೆಡೆಗೆ
ಓಯಾರದಿಂ ಪೋಗಿ ಪುತ್ರವರವ ಪಡೆ
ದಾಯಾಸವಿಲ್ಲದೆಯ್ದುವೆನು	೭೩

ಚಿಂತೆಯ ಬಿಡು ಕಾಂತೆಯಂತಕಾಂತಕನೆಡೆ
ಗಾಂ ತಡೆಯದೆ ಪೋಗಿ ನಿನ್ನ
ಅಂತರಂಗದ ನೋವ ಬಿಡಿಸುವೆನೆಂದು ಭೂ
ಕಾಂತ ಸಂತೈಸಿದನವಳ	೭೪

ಈ ನನ್ನ ಭಾಗ್ಯವನನು[4]ಭವಿ[4]ಸುವಡೆ ಸಂ
ತಾನವಿಲ್ಲೆಂದಾನು ಮೊದಲೆ
ಜಾನಿಸುತಿರ್ದೆನು ಬಯಸಿದೆ ನೀನದ
ಮಾನಿನಿ ಮಿಗೆ ಲೇಸಾಯ್ತು	೭೫

ಇಂದುವದನೆ ಕೇಳಿಂದುಶೇಖರನೆಡೆ
ಗಿಂದಾನೆಯ್ದಿ ಬೇಗದೊಳು
ನಂದನನೋರ್ವನ ಪಡೆವೆನು ನಯನಾ
ನಂದನನನು ನಿನ್ನಾಣೆ	೭೬

ಎಂದು ನುಡಿದು ಕಳುಹಿಸಿಕೊಂಡು ಬಂದಾ
ನಂದಭೇರಿಯ ಪೊಯ್ಸಲಂದು
ಮಂದಿ ಕುದುರೆ ಕರಿಘಟೆ ಭರದಿಂದೆ
ಯ್ತಂದುದ[5]ದೇ[5]ನ ಬಣ್ಣಿಪೆನು	೭೭

*ಒಸರ್ವ ಮದೋದಕದಿಂ ವಾಜಿವದನದಿಂ
ಬಸಿವ ಲಾಲಾಜಲದಿಂದ
ಎಸೆದುದಾ ಪು[6]ರಿ[6] ಚಳಯಂಗೊಟ್ಟು ಪೂಗಳ
ಪಸರಿಸಿದಂತಲ್ಲಲ್ಲಿ	೭೮

---

[1] ಕ್ಕಱುಮಿಗಲೆಯ್ತಂ (ಅ ಕ)   [2] ತ (ಐ)   [3] ಯುತ (ಐ) ವುತಿ (ಇ)
[4] ವದಿ (ಎ ಗ)   [5] ನೆ (ಎ ಕ ಗ)   [6] ರ (ಅ ಉ)   * (ಉ) ಪ್ರತಿಯಲ್ಲಿಲ್ಲ.

†ಪೊಂಬಳಯಿಗೆ ಮಿಂಚು ಮಣಿತೋರಣ ಕ
ಣ್ಗೊಂಬಿಂದ್ರಧನು ಕುಸುಮಾಳಿ
ಇಂಬುಗೊಂಡಾಲಿಕಲ್ಲಾಗಲಾನಗರಿ ವಿ
ಡಂಬಿಸಿದುದು ಕಾರ ಸಿರಿಯು ೭೯

ಇಂದುನಿಭಾನನೆಯೊರ್ವಳು ಪೂಜಾ
ಚಂದನದಿಂದ ತೀವಿರ್ದ
ಇಂದುಕಾಂತದ ಮಣಿಭಾಜನವಿಡಿದೆ
ಯ್ತಂದಳದೊಂದು ಬಿಂಕದೊಳು ೮೦

ನಳನಳಿಸುವ ಪೂವಿನ ಮೀಸಲುಕಂಪ
ನಳಿಗಳೆಂಜಲಿಸುಗುಮೆಂದು
ತಳೆದಳೊರ್ವಳು ಚಂಪಕಗಂಧಿ ಕುಸುಮಾ
ಕಳಿತ ಪಟಲಿಕೆಯನೊಸೆದು ೮೧

*ಕಿಱುಮಲ್ಲಿಗೆಯ ಸಣ್ಣನನೆಗಳೆಂದಕ್ಕಿಗೊ
ಳ್ದಿಱಗಲಳಿಗಳೋರ್ವಳಂದು
ಮಿಱುಗುವಕ್ಷತಭಾಜನವ ನಾಸಾಗ್ರದ
ನಱುಸು[1]ಯ್ಯೆ[1]ಡೆಗೆತ್ತಿದಳು ೮೨

ಇಳಿದರಗಿಳಿಗಳೆಳಸಿ ಪಾಯೆ ಕಂಕಣ
ದುಲುಪಿಂದ ತೊಲಗಿಸುತವನು
ತಳೆದಳೋರ್ವಳು ಪಕ್ವಫಲಗಳಿಂ ತೀವಿದ
ತೆಳುವಳುಕಿನ ಪಡಲಿಗೆಯು ೮೩

ಲಲಿತಾಂಗಿಯೋರ್ವಳು ಪೊಂಬಾಳೆಯ ಥಳ
ಥಳಿಸುವ ಪಣ್ಣ[2]ಕೊ[2]ನೆಯನು
ತಳೆದಳು ಕಲ್ಪಲತಿಕೆ ಫಲಭರವನು
ತಳೆ[3]ದ[3]ಂತೆ ಲೀಲೆ ಕೈಮಿಗಲು ೮೪

ಫಲ ಚಂದನಾಕ್ಷ[4]ತ[4] ಪುಷ್ಪಮಾಲಾಜಲ
ಕಲಶ ವಿಮಲಮಣಿದೀಪ
ಬಲಿಧೂಪಘಟ ತಾಂಬೂಲ ಭಾಜನವಾಂತು
ಲಲಿತಾಂಗಿ[5]ಯರೆ[5]ಯ್ದಿದರು ೮೫

---

[1] ಯಿಯೆ (ಐ) [2] ಗೊ (ಇ ಎ ಗ) [3] ವ (ಐ) [4] ತೆ (ಇ) [5] ಯೊಡನೆ (ಇ) † (ಉ) ಪ್ರತಿಯಲ್ಲಿಲ್ಲ * ಇಲ್ಲಿಂದ ೮೮ ರ ವರೆಗೆ (ಉ) ಪ್ರತಿಯಲ್ಲಿಲ್ಲ.

ಇಂತು ಸಮುಚಿತ ಪೂಜಾದ್ರವ್ಯಂಗಳ
ನಾಂತು ನಳಿನನೇತ್ರೆಯರು
ಸಂತಸಕ್ಕೆಮಿಗೆ [1]ನಡೆತಂದರಾ[1] ಭೂ
ಕಾಂತನ ಮುಂದೆ ಲೀಲೆಯೊಳು          ೮೬

ಮದಧಾರಾಸಾರದಿಂದ ಶುಂಡಾಗ್ರದಿಂ
ಕೆದಱುವ ಶೀಕರದಿಂದ
ಪದಗೊಳಿಸುತ ಭೂತಳವನೆಯ್ತಂದುದು
ಮದಗಜವಾ ನರಪತಿಯ          ೮೭

ಕೊಂಬಿನ ಪೊಂ[2]ಬ[2]ಳೆ ಕೊಡಕೆಯ ಚಾಮರ
ವಂಬುದಾಳಿಯನಳ್ಳಿಱಿವ
ಕೆಂಬಳಯಿಗೆಗಳು ಮೆಱೆಯಲಾಗಸವಾ
ಡಂಬರದಿಂದೆಯ್ದಿ[3]ದುದು[3]          ೮೮

ಮೊಳಗುವ ಡಿಂಡಿಮು ತೊಳಗುವ ಮೊಗರಂಭ
ಬೆಳಗುವ ದಂತ ಪೊಂಬೊರಜೆ
ತಳಸಂಕಲೆ ತೊಡರುಲಿವ ಪೊಕ್ಕುಳಘಂಟೆ
ಯೆಳಸಲೆಯ್ತಂದುದಾ ಹಸ್ತಿ          ೮೯

ಶುಂಡಿಲನೀಡಾಡುತ ದೆಸೆದೆಸೆಗಳ
ಕಂಡ[4]ರ[4] ಬಿಡದೆ ಪರಿವೃತ
ಡಿಂಡಿಮುನಿನದವ ನಿರದಾಲಿಸುತ ವೇ
ತಂಡ ಬಂದುದು ಲೀಲೆಯಿಂದ          ೯೦

ಈ ತೆಱದಿಂ ಪಣ್ಣಿ ಬಂದ ಪಟ್ಟದಮದ
ಮಾತಂಗವನಾ ರಾಯ
ಪ್ರೀತಿಕ್ಕೆಮಿಗಲೇಱಿದನು ದುರ್ಗಗಳನಾ
ರಾತಿಗಳೇಱೆ ಭೀತಿಯೊಳು          ೯೧

ಪಸರಿಸೆ ಮೆಯ್ಯೊಳು ಪರಿಜನಗಳ ನೇತ್ರ
ವಿಸರ ಮೆಱೆದ ಭದ್ರಹಸ್ತಿ
ಎಸೆಯಲೈರಾವತದಂತೆ ಮೆಱೆದನಾ
ವಸುಧಾಧಿಪನಿಂದ್ರನಂತೆ          ೯೨

---

[1] ತಡೆಯದೆಯ್ತಂದರು (ಎ ಗ)  [2] ಬಾ (ಅ ಇ ಉ ಎ ಗ)  [3] ದವು (ಐ)
[4] ರೆ (ಐ) ಡೆ (ಇ).

*ಒಚ್ಚೇರೆಗಣ್ಗಳಲ್ಲಿವು ಮದನನ ಕಯ್ಯ
ನಚ್ಚಂಬುಗ[1]ಳಿವೆ[1]ಂಬಂತೆ
ಅಚ್ಚರಿವಡೆದ ಕ[2]ಣ್ಗ[2]ಳವೆಣ್ಗಳೆಯ್ದಿದ
ರಚ್ಚರಸಿಯರೆಂಬಂತೆ ೬೩

*ಎಳೆಮಿಂಚಿನಂತಲರ್ಗಣ್ಗಳಂತಂಬುಜ
ದಳ[3]ದ[3]ಂತಳಿವಿಂಡಿನಂತೆ
ಬೆ[4]ಳ[4]ದಿಂಗಳಂತೆ ಕಣ್ಗೊಳಿಸುವ [5]ಕಂಗ[5]ಳ
ಕಳಸಕುಚೆಯರೆಯ್ದಿದರು ೬೪

ಇದು ಮೂಲೋಕದ ಮುನಿಗಳ ಮೋಹಿಪ
ಮದನೇಂದ್ರಜಾಲವೆಂಬಂತೆ
ಕೆದಱುತ ಕೆಲ್ಲೆನೋಟ[6]ದಿನ[6]ಲರ್ಗಣ್ಗಳ
ನೊದವಿತು ಕಾಂತಾನಿ[7]ವಹ[7] ೬೫

*ಇಂತೆಯ್ತಂದಂತವುರದ ಕಾಂತಾನೀಕ
ದಂತರಾಳದೊಳಂದಣದೊಳು
ಸಂತಸ[8]ಮಿಗೆ[8] ಹರಿಹರದೇವಿ ಬಂದಳ
ನಂತವೈಭವದೇಳಿಗೆಯೊಳು ೬೬

*ಮುಂದೆ ಗೊಂದಣಿಸಿ ನಡೆವ ಪಡಿಯಱಪೊಯಿ
ಲಿಂದೆಡಬಲಕೆ ತೊಲಗುವ
ಸಂದಣಿಸಿದ ಮುಂದಿ ಕುದುರೆಯ ನೋಡುತಾ
ನಂದದಿಂ ನಡೆ[9]ದನವನಿಪ[9] ೬೭

ಕೊಂಡಾಡುತೆಡಬಲದೊಳು[10]ಬರೆ ಪಾಠಕ[10]
ಮಂಡಳಿ ಪರಿತೋಷದಿಂದ
ಚಂಡ ಪರಾಕ್ರಮಿ [11]ಪೊಱಮಟ್ಟ[11]ನಾ ರಣ
ಮಂಡಲದೊಳುವಾಗಿಲನು ೬೮

---

[1] ಳೆ (ಇ ಐ) [2] ಣ್ಣೆ (ಇ ಎ ಗ) [3] ಗಳ (ಇ ಐ) [4] ಳು (ಅ ಉ ಎ ಗ) [5] ಙ್ಗ (ಎ ಐ) [6] ದೊಳ (ಉ) [7] ಕರ (ಉ ಎ ಐ ಗ) [8] ದಿಂ (ಎ ಗ) [9] ತಂದ ಭೂಪ (ಐ) [10] ಪಾಠಕಜನ (ಅ ಇ ಉ) [11] ಹೊಱವಂಟ (ಉ) * (ಉ) ಪ್ರತಿಯಲ್ಲಿಲ್ಲ.

ಆ ಚತುರಂಗಬಲಾಂಬುನಿಧಿಯ ಬ[1]ಹು[1]
ವೀಚಿಗಳುರುನಾದದಂತೆ
ಯಾಚಕ ಪಾಠಕ ಕಲಕಲವೆಸೆದು[2]ದಾ[2]
ಭೂಚಕ್ರವರ್ತಿಯ ಮುಂದೆ     ೯೯

ಇಂತು ನಾನಾವೈಭವದಿಂದ ಬಹ ಭೂ
ಕಾಂತನನಾಪುರವರದ
ಕಾಂತಾನಿವಹ [3]ನಿ[3]ರೀಕ್ಷಿಸಿದುದು ಕಾಮ
ಸಂತಾಪ ಮಿಗಲೆಯ್ತಂದು     ೧೦೦

ಮಣಿನೂಪುರದುಡೆನೂಲ ಕಿಂಕಿಣಿಯ ಕಂ
ಕಣದ ತಾತಿಯ ಘಂಟೆಗಳ
ಝುಣಝುಣನಿನದವೆಸೆಯಲೆಯ್ತಂದು[4]ದಂ
ದ[4]ಣಿಯರದಿಂದಬಲೆಯರು     ೧೦೧

*ಪರಿವ ಕಣ್ಗಳ ಕಾಂತಿ ಪಸರಿಪ ಮೆಯ್ಗಂಪು
ಸುರಿವ ಮಲ್ಲಿಗೆಮುಡಿಯಿಂದ
ಕರವೊಪ್ಪೆ ಕರುವಾಡವೇಱ ಮತ್ತೋರ್ವ[5]ಳ
ಚ್ಚರಿಯಾಂತವಳ[5] ನೋಡಿದಳು     ೧೦೨

ನಡೆಗೆ ಮೆಯ್ಗಂಪಿಗೆ ಕ[6]ವಿವ[6]ಂಚೆಗಳಿಗೋರ್ವ
ಳೊಡನಿತ್ತು ಹಾರಮಾಲೆಗಳ
ನಡೆಯಲೀಯ್ಯದ ಕಟಿಕುಚಗಳ[7]ಗಿನ್ನೇನ[7]
ಕೊಡುವೆನೆಂದೆನುತ ನಡೆದಳು     ೧೦೩

*ನೆಲೆಮೊಲೆ ನೂಂಕೆ ಮೇಲುದನು[8]ಡೆ[8]ನೂಲಿಳಿ
ದಲೆಯೆ ನಡೆ[9]ವುತೆಯ್ತಂದು[9]
ಲಲನೆಯೋರ್ವಳು ಕಣ್ದೊಳೆದಳಾ ರಾಯನ
ಲಲಿತಲಾವಣ್ಯರಸದೊಳು     ೧೦೪

---

1 ಲು (ಅ)   2 ದು (ಇ ಎ)   3 ಪ (ಅ ಉ ಎ ಗ)   4 ದುಅ (ಇ ಐ)
5 ಸುರಸತಿಯೆನೆ (ಅ ಉ) ಳಚ್ಚರಸೆಯಂತವಳ (ಐ) ಳಚ್ಚರಿಯುಂತವಳು (ಇ ಎ ಗ)   6 ಲಿಯ (ಇ)   7 ಗಾನೇನ (ಇ ಐ)   8 ಡಿ (ಇ ಐ ಗ)   9 ಯಲೈತಂದು (ಅ ಉ) ಯನೆಯ್ತಂದು (ಗ) ನುಡಿವುತೈತಂದು (ಐ)   *(ಉ) ಪ್ರತಿಯಲ್ಲಿಲ್ಲ.

ಕಡುವೇಗದಿಂ ಬರೆ ಕಾಂಚಿ ಕಾಲ್ದೊಡರಲು
ನಡೆಯುಲಱಿಯದೆ ನಿಂದಿ[1]ರ್ದ[1]
ಮಡದಿ ಮೆಱೆದಳೋರ್ವಳಂಗಜನೃಪತಿಯ
ತೊಡರಾಂತ ಮದಗಜದಂತೆ ೧೦೫

*ಮದನಸಮಾನನವನನೀಕ್ಷಿಸಲೋರ್ವ
ಳೊದ[2]ವಿ[2] ಬರಲು ಮೇಲುದನು
ಕದಲಿಸಿದುಚ್ಚಕುಚಗಳೆಸೆದವು ಮಾರ
ಮದಗಜಕುಂಭಗಳೆನಲು ೧೦೬

*ತೊಲಗೆ ಮೇಲುದು ಮಣಿಮೇಖಲ[3]ಘಂಟೆಗ
ಳುಲಿಯೆ ನೂಪುರರವಮುಣ್ಮೆ
ಅಲುಗೆ ಪೆರ್ಮೊಲೆ ಕುರುಳ್ಕುಣಿಯಲೋರ್ವಳು ಬಂ
ದೊಲಿದು ನೋಡಿದಳರಸನನು ೧೦೭

ಇಂತು ಪುರಾಂಗನೆಯರು ನೋಡುತಿರೆ ಭೂ
ಕಾಂತನಿಳಿದು ದುರ್ಗವನು
ಸಂತಸವಿಗೆ ನಡೆದನು ಸೇನಾಚಕ್ರ
ದಂತರಾಳ[4]ದೊಳ[4]ಶನೆಡೆಗೆ ೧೦೮

†ವಿವಿಧಮಂಗಳವಸ್ತುಗಳನಾಂತು ಕಾಂತಾ
ನಿವಹವೆಯ್ತರೆ ಲೀಲೆಯೊಳು
ಭುವನಾಧಿಪನಿರದೇಳ್ತಂದನೀರೇಳು
ಭುವನಾಧಿ[5]ಪನಿ[5]ರ್ದೆಡೆಗೆ ೧೦೯

ಬಂದು ಕಂಡನು ಭಕ್ತಜನಕುವಲಯಪೂ
ರ್ಣೇಂದುವನಾ ಬಾನ್ದೊಱೆಯು
ಬಂದಿಕಾಱನನಿಂದಿರಾಪತಿ ನಯನಾರ
ವಿಂದಪೂಜಿತಚರಣನನು ೧೧೦

ಕಾಣುತ ಕಾಮವೈರಿಯ ಪಾದಾಂಬುಜ
ರೇಣುಗಳನು ಶಿರದೊಳಗೆ
ಮಾಣದೆ ತಳೆದು ಮೆಯ್ಮಱೆದು ಭಕ್ತಿಯೊಳಾ
ಕ್ಷೋಣೀಶ್ವರ [6]ನುತಿಸಿ[6]ದನು ೧೧೧

---

[1] ರ್ಪ (ಉ) [2] ಗಿ (ಅ ಉ ಏ ಗ) [3] ಲೆ (ಇ) [4] ದಿ ಈ (ಉ) [5] ಪತಿಯಿ (ಉ) [6] ನುಸುರಿ (ಇ ಐ) ಸ್ತುತಿಸಿ (ಅ) * (ಉ) ಪ್ರತಿಯಲ್ಲಿಲ್ಲ (ಏ ಗ) ಗಳಲ್ಲಿಲ್ಲ.

ಧರಣಿಜಲಾಗ್ನಿವಾತಾಂಬರರವಿಹಿಮ
ಕಿರಣಾತ್ಮದಿವ್ಯಶರೀರ
ಮುರಹರನಯನಾರ್ಚಿತಪದ ಜಯಜಯ
ಪುರಹರ ಪುರುಹೂತವಂದ್ಯ ೧೧೨

ದೇವ ಕೇಳೆಲೆ ದೇವರಲ್ಲದ ಸಂಸಾ[1]ರಿ[1]
ಜೀವಿಗಳನು ದೇವರೆಂಬ
ಭಾವನೆಯೊಳಗೋಲಾಡುವರಲ್ಲದೆ
ಗಾವಿಲರಾರು ಲೋಕದೊಳು ೧೧೩

ದೇಹವನುಳಿದು ದೇಹಾಂತರ[2]ಗಳ[2]ನು ಸಂ
ದೇಹವಿಲ್ಲದೆ ಕೈಕೊಂಬ
ದೇಹಿಗಳನು ದೇವರೆಂದು ಕೊಂಡಾಡುವ
ಮೋಹಿಗಳಿಗೆ ಗತಿಯುಂಟೆ ೧೧೪

ಕುಲ ಗೋತ್ರ ಜಾತಿ ಕಲತ್ರ ಮಿತ್ರಾದಿ ಸಂ
ಕುಲದೊಡನಮರ್ದ ದೇಹಿಗಳ
ನೆಲೆಯಱಿಯದೆ ನಿನಗೆಣೆಯೆಂಬರನು ಗಾ
ವಿಲರೆನ್ನದಾರನೆಂದಪೆನು ೧೧೫

ಎಂದು ನುತಿಸಿ ಮಂಗಲಪೂಜಾದ್ರವ್ಯ
ದಿಂದ ಪೂಜಿಸಿ ಪುರಹರನ
ಮುಂದುವರಿವ ಭಕ್ತಿಭರದೊಳೆಱಗಿ ಮುದ
ದಿಂದ ಬಿನ್ನವಿಸಿದನಿಂತು ೧೧೬

ಅಂಗಯ್ಯ ನೆಲ್ಲಿಯ ಕಾಯಂತೀ ಲೋ
ಕಂಗಳು ನಿನ್ನಱಿವಿನೊಳು
ಪಿಂಗದೆ ನೆಲಸಿಹವೆನೆ ದೇವ ಮಾನವ
ರಿಂಗಿತ ನಿಮಗಗೋಚರವೆ ೧೧೭

ನೀವಱಿಯದುದಿ[3]ಲ್ಲಾದೊಡಮಾ[3]ನೆನ್ನ
ಮಾನುಸಾತುರಬಲದಿಂದ
ಆನದ ಬಿನ್ನವಿಸುವೆನೀ ಸತಿಗೆ ಸಂ
ತಾನವಿಲ್ಲಭವ ಕರುಣಿಸು ೧೧೮

---

[1] ರ (ಐ) [2] ವ (ಇ) [3] ಲ್ಲಮಾದೊಡಮಾ (ಅ ಇ ಉ ಎ) ಲ್ಲಾದೊಡ ಮಾತೇ (ಇ ಐ).

ಹೊತ್ತುಬಳಲದೆನೀ ಭೂಭಾರವನೆ
ನ್ನೊತ್ತಿಗೆ ಮ[1]ಗ[1]ನೋರ್ವನನು
ಚಿ[2]ತ್ತೈಸೀ ಮಾ[2]ನಿನಿಗೆಂದಾ ಭೂ
ಪೋತ್ತಮ ಬಿ[3]ನ್ನವಿ[3]ಸಿದನು ೧೧೯

ಬಳಿಕ ದೇವರದೇವನಾ ನೃಪನಿಷ್ಟವ
ಸಲಿಸಬೇಕೆಂದು ಕೃಪೆಯೊಳು-
ತಳುವದೆ ತನ್ನ ಮಸ್ತಕದ ಮೇಲಣ ಮಂ
ಜುಳಕುಸುಮವನಿತ್ತನೊ[4]ಸೆ[4]ದು ೧೨೦

ಅಂತಾ ಕುಸುಮವ[5]ನಾ[5] ಭೂಪತಿ ತನ್ನ
ಕಾಂತೆಗಿತ್ತತಿ ಮುದದಿಂದ
ಸಂತಸಗಡಲೊಳೋಲಾಡುತಂಗನೆಗೂಡಿ
ತಾಂ ತಳರ್ದನು ದುರ್ಗದೆಡೆಗೆ ೧೨೧

ಅಂತು ಪುರವ ಪೊಕ್ಕು ಕಂತುಮರ್ದನನಿತ್ತ
ಸಂತಾನದೊಂದು ವರವನು
ಅಂತರಂಗದೊಳಾಂತು ಚಿಂತಿಸುತವನೀ
ಕಾಂತನಿರಲು ಸಂತಸದೊಳು ೧೨೨

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೆರಡನೆಯ
ವಿದಿತಾಶ್ವಾಸದೊಳೆರಡನೆಯದು ಸಂಧಿ
ಮೃದುಪದಚಯಸಂಬಂಧಿ ೧೨೩

---

[1] ಗನ (ಉ) [2] ತ್ತಯಿಸಮಾ (ಎಗ) ತ್ತೈಸಿಮಾತ (ಐ) ತ್ತೈಸೆ ಬೇಕುಮಾ (ಉ) [3] ನ್ನೈ (ಅ) [4] ಲಿ (ಉ) [5] ನಾಂತು (ಇ) * (ಅ ಎ ಐ ಗ) ಗಳಲ್ಲಿಲ್ಲ.

# ಎಂಟನೆಯ ಸಂಧಿ

## ಬಾಲ್ಯ ಮತ್ತು ಯುವರಾಜಪಟ್ಟ

**ಸೂಚನೆ:** ಹರಿಹರದೇವಿ ಪಡೆದಳು ಕುಮಾರನ
ಸುರುಚಿರ [1]ಸು[1]ಮುಹೂರ್ತದೊಳು

ಜನನುತೆ ಹರಿಹರದೇವಿಯೊಂದಾನೊಂದು
ದಿನದೊಳು ಋತುಮತಿಯಾಗಿ
ವಿನುತ ಚತುರ್ಥಮಂಗಲಮಜ್ಜನಂಬೊಕ್ಕ
ಳನುರಾಗರಸದೊಡಗೂಡಿ ೧

ಮಲಯಜದಣ್ಪು ಮಲ್ಲಿ[2]ಗೆ[2] ಸೋರ್ಮುಡಿಯುಟ್ಟ
ಬಿಳಿ[3]ದು[3] ಮುತ್ತಿನ ತೊಡವೆಸೆಯೆ
ಪಳುಕಿನ ಪೆಣ್ಗೆಣೆಯೆನಿಪ ವಿಲಾಸವ
ನೊಳಕೊಂಡೆಸೆದಳಾ ನೀಱೆ ೨

ಕಡೆಗಣ್ಣ ಕಾಂತಿಗಳಲರ ಬಾ[4]ಣ[4]ಗಳಂ
ತೆಡೆಯಾಡೆ ಸೋರ್ಮುಡಿಯಳಿಯ
ಪಡೆಯಂತೆ ಪಡೆಯೆ ವಿಲಾಸವನವಳಂದು
[5]ನ[5]ಡೆದು ಬಂದಳು ಸೆಜ್ಜೆವನೆಗೆ ೩

[6]ಸಸಿವೆಱೆ[6] ಬಂದು ಬೆಳ್ಮುಗಿಲೊಳಪೊಗುವಂತೆ
ಬಿಸಜವದನೆ ಬಿಂಕದೊಳು
ಒಸೆದೆಯ್ತಂದೊಳಪೊಕ್ಕಳು ಮಿಸುನಿಯ
ಕುಸುರಿವೆಸದ ಸೆಜ್ಜೆವನೆ[7]ಯ[7] ೪

*ಪಳುಕಿನ ಪಾಸಱೆಯಂತೆ ಬೆಳ್ಪಿಂ ಥಳ
ಥಳಿಸುವ ಮೃದುತಳ್ಪದಿಂದ
ನಳನಳಿಸುವ ನವರತ್ನದ ಮಂಚದೊ
ಳೆಳಸಿದಳಾ ಮೃಗನಯನೆ ೫

---

[1] ಶುಭ (ಇ) [2] ಗೆಯು (ಐ) [3] ಯ (ಅ ಉ) [4] ಣಂ (ಐ) [5] ತ (ಐ)
[6] ಶಶಿವೆಱೆ (ಅ ಎ ಗ) ಸಸಿಗೆರೆ (ಇ ಉ ಐ) [7] ಗೆ (ಇ ಎ ಗ) * ಇಲ್ಲಿಂದ ೧೪ನೇ
ಪದ್ಯದವರೆಗೆ (ಉ) ಪ್ರತಿಯಲ್ಲಿಲ್ಲ.

ಆ ಸೆಜ್ಜೆವನೆಯೊಳೆಸೆವ ಮಣಿದೀಪವಿ
ಲಾಸವೊಪ್ಪಿದುದು ನೋಳ್ಪರಿಗೆ
ಆ ಸದನಾಧಿದೇವತೆಯ ರನ್ನದ ನವ
ನಾಸಾಮಣಿಯಿದೆಂಬಂತೆ ೬

ಆ ನಿಳಯದ ಕುಸುಮೋಪಹಾರಕೆ ಬಂ
ದಾನದೆಱಗುವ ತುಂಬಿಗಳ
ಗಾನವೆಸೆದುದಿಕ್ಷುಚಾಪಟಂಕಾರವಿ
ಧಾನವನಿರದೇಳಿಸುತ ೭

ಸ್ಮರಗುರುಭೀತಿಯಿಂದಿರದೆ ಸಮ್ಮೋಹನ
ಕರಮಂತ್ರಗಳನುಚ್ಚರಿಪ
ವರಶಿಷ್ಯರಂತರಗಿಳಿಗಳದಱೊಳಾ
ದರದಿಂದ ನುಡಿವುತೆಸೆದವು ೮

ಅಲಂಬರನ ಕಯ್ಯೊಳೆಸೆವ ಶಕುನಿವಟ್ಟ
ಲುಲುಪಿನಂತುಱೆ ಮೋಹಿಸುವ
ಕಲರವದಿಂದ ಮೆಱೆವ ಪಾರಿವಂಗಳ
ಕಲಕಲವೆಸೆದುದದಱೊಳು ೯

ಬೆಳುದಿಂಗಳು ನಱುಗಂಪಡರ್ದಂತೆ ಕಂ
ಗೊಳಿಪ ಚಂದನಪಂಕದಿಂದ
ತೊಳಗುವ ಸಸಿಗಲ್ಲ ಬಟ್ಟಲು ಚಂದ್ರನಂ
ತೆಳಸಿದುದಾ ನಿಳಯದೊಳು ೧೦

ತೆಗೆವಳಿಮಾಲೆಯ ಕುಂಕುಮರಸದಿಂದ
ಸೊಗಯಿಪ ಪೊಂಬಟ್ಟಲಲ್ಲಿ
ಪೊಗೆಯುರಿವೆರಸಿದಂಗಾರದಾನಿಕೆಯಂತೆ
ಮಿಗೆ ಮೆಱೆದುದು ಮನಸಿಜನ ೧೧

ಘಟಧೂಪದ ಧೂಮಲೇಖೆ ಕಣ್ಗಳಿಗೆ ಸಂ
ಘಟನವಾದುದು ಮನಸಿಜನ
ಕುಟಿಲತೆವಡೆದು ಮೈಮುರಿದಾಗಸಕೇಳ್ವ
ಘಟಸರ್ಪನೇಳಿಗೆಯೆನಲು ೧೨

ತೆಳುವಳುಕಿನ ಬಟ್ಟ ಬಟ್ಟಲೊಳಗೆ ಕ
ಣ್ಗೊಳಿಸುವ ಕ[1]ತ್ತು[1]ರಿಗೆಸಱು
ಎಳಸಿದುದಿಂದುಮಂಡಲದ ನಡುವೆ ನಳ
ನಳಿಪ ಕಳಂಕವಿದೆನಲು          ೧೩

ಇಂ[2]ತು ಸೊಗಯಿಸುವ[2] ಸೆಜ್ಜೆವನೆಯೊಳಾ
ಕಾಂತೆ ವಿ[3]ಲಾಸ[3]ತಳ್ಪದೊಳು
ಸಂತಸದಿಂ ತನ್ನ ಸೂಳ್ಗೆವಂದಿರೆ ಭೂ
ಕಾಂತನೆಯ್ದಿದನಾ ಯೆಡೆಗೆ          ೧೪

ಅಂಗಮನಂಗೀಕರಿಸಿದನಂಗನ
ಭಂಗಿಯಂತುಱೆ ಮೋಹಿಸುತ
ಸಿಂಗರವಡೆದಂಗನೆಯೆಡೆಗಾ ನೃಪ
ತುಂಗ[4]ನೇಳ್ತಂದನಳ್ತಿಯೊಳು[4]          ೧೫

ಅಲರ್ವಿಲ್ಲ ಜೇವಡೆಯಂತೆ ಕಾಂಚೀದಾಮ
ಕಲಿತ ಕಿಂಕಿಣಿಗಳುಲಿಯಲು
ನಲವಿಂದಿದಿರೇಳ್ದಳಾ ನರಪತಿಗಾ
ಲಲನೆ ಮೆಯ್ಯೊಳಗೇಳೆ ಪುಳಕ          ೧೬

ಬಳಿಕ ಮೆಲ್ಲನೆ ಬಂದಾ ರಾಯಸೆಜ್ಜೆಯ
ನಿಳಯದೊಳಗೆ ಕಣ್ಗೊಳಿಪ
ಥಳಥಳಿಸುವ ರನ್ನದ ಸೆಳೆಮಂಚದೊ
ಳೆಳಸಿದನಂಗಜನಂತೆ          ೧೭

ಉಂಗುರದಿಂದಾ ನೃಪನಂಗನೆಯ ಕೋಮ
ಲಾಂ[5]ಗುಲಿ[5]ಯನು ಕೈಗೆ[6]ಯ್ವ[6]
ಭಂಗಿಯಿಂ ಬ[7]ರ[7]ತೆಗೆದುತ್ಸಂಗತಳ್ಪದೊ
ಳಂಗೀಕರಿಸಿದನೊಸೆದು          ೧೮

---

[1] ಸ್ತೂ (ಅ ಉ ಎ ಗ) [2] ತತಿಸೊಗಯಿಪುವಾ (ಇ) [3] ಶಾಲ (ಎ ಐ ಗ) [4] ನೆಯ್ತಂದನಾಯೆಡೆಗೆ (ಅ) ನೇಳ್ತಂದನರ್ತಿಯೊಳು (ಉ) [5] ಗನೆ (ಐ) [6] ಯ್ದು (ಎ ಗ) [7] ರೆ (ಇ ಉ ಎ ಐ ಗ ಚ ಟ).

ಓರೋರ್ವರ ಮೆಯ್ಯಸೋಂಕಿಂದ ಪುಳಕಗ
ಳೋರೋರ್ವರ ಮೆಯ್ಯೊಳಗೆ
ಪೂರಿಸಲಂ[1]ದು ರತಾಮೃತ[1]ದೊಳು ತಣಿ
ದೋರಂತವರೊಱಗಿ[2]ರಲು[2] ೧೯

ಭಾನುಬಿಂಬವನಿಂದು ಮಂಡಲವನ ಮದ
ದಾನೆಯನಾ ಸಿಂಹವನು
ಮಾನಿನಿ ಕಂಡಳು ಬೆಳಗಹ ಸಮಯದೊ
ಳೀ ನಾಲ್ಕನು ಕನಸಿನೊಳು ೨೦

ಆ ಸಮಯದೊಳು ತಣ್ಗೊಳದ ತಾವರೆಗಳ
ವಿಾಸಲಕಂಪನೆಣ್ದೆಸೆಗೆ
ಸೂಸುತ ಸುಪ್ರಭಾತಾನಿಲ ಸುಳಿದುದಂ
ದಾ ಸೆಜ್ಜೆವನೆಯೊಳಪೊಕ್ಕು ೨೧

*ಬೆಳಗಹ ಸಮಯದೊಳಗೆ ಪೋಪ ರಾತ್ರೀ
ಲಲನೆಯ ನೂಪುರರವದ
[3]ಕಲಕಲದಂತೆ ಮೆಱೆವ ಮಱಿದುಂಬಿಗ
ಳುಲುಹೆಸೆದುದು ಕಿವಿಗಳಿಗೆ[3] ೨೨

‡ಉದಯಾದ್ರಿಯನೇ[4]ಱುವ ರವಿರಥಚಕ್ರ[4]
ದುದಿತ ಚೀತ್ಕಾರದಿಂಚರವ
ಬೆದಱಿಪ ರವದ ರಥಾಂಗದುಲುಹು ಕಿವಿ
ಗೊದವಿದವಾ ದಂಪತಿಗಳ ೨೩

ಮಂಗಲಗಾಯಕರೊಸೆದು ಪಾಡುವ ಗೀ
ತಂಗಳಿಂಚರ ಪಾಠಕರ
ವಂಗಡದಾಲಾಪದುಲುಹು ಮಾಡಿದವು ರಾ
ಯಂಗೆ ಸುಖಪ್ರಬೋಧವನು ೨೪

---

[1] ದು ಸುರತಾಮೃತ (ಇ) ದುಧರಾಮೃತ (ಉ) ದು ಸುರತಸುಖ (ಎ ಗ) [2] ದರು (ಅ ಇ ಉ ಎ ಗ) [3] ಕಲಕಲರವವೆಂದೆನೆ ಪಕ್ಷಿಮೃಗಗಳ ಧ್ವನಿಗಳೆಸೆದವಂದಲ್ಲಿ (ಎ ಗ) [4] ಱಿದ ರಥ ಚಕ್ರದಿಂ (ಅ) * (ಉ) ಪ್ರತಿಯಲ್ಲಿಲ್ಲ ‡ (ಉ ಎ ಗ) ಗಳಲ್ಲಿಲ್ಲ.

ಅಂತುಪ್ಪವಡಿಸಿ ಲೌಕಿಕ ಮಂಗಲಾಚಾರ
ಸಂತತಿಯನು [1]ಸಲೆ[1] ತೀರ್ಚಿ
ಸಂತಸದಿಂದೋಲಗಶಾಲೆ[2]ಗೆ[2] ಭೂ
ಕಾಂತನೆಯ್ದಿದನು ಲೀಲೆಯೊಳು ೨೪

ದಿವಸಮುಖೋಚಿತ ವಿಧಿಯನೆಸಗಿ ವೇ
ಲವನೀಶ್ವರನರ್ಧಾಂಗಿ
ತವಕದಿಂ ಬಂದು ಮಂಡಿಸಿದಳು ಲೀಲೆಯಿಂ
ನವರತ್ನಖಚಿತಪೀಠದೊಳು ೨೫

ಹಡಪದ [3]ಡವಕೆಯ ಕುಂಚದ ಚವರದ[3]
ಪಡಿಗ ಪಾವುಗೆ ಕನ್ನಡಿಯ
ಕಡುಗಾಡಿಕಾರ್ತಿಯರೆಸೆದರಾ ರಾಯನ
ಮಡದಿಯ ಕೆಲನೆರಡಱೊಳು ೨೬

*ಕರ ಕಿಸಲಯರಾಗದಿಂದರುಣಾಂಘ್ರಿಗ
ಳ್ಕರಮೆಸೆದಿರಲೋರ್ವಳಂದು
ಭರದೊಳಾ ರಾಯನರಸಿಯ ಚರಣಕೆ ನೂ
ಪುರವ ತೊಡಿಸಿದಳಳ್ತಿಯೊಳು ೨೭

ಸೊಗಯಿಪ ಕನ್ನೈದಿಲಿಗೆ ಕಪ್ಪನಿಕ್ಕುವ
ಬಗೆಯಂತೆ ಮತ್ತೋರ್ವಳೊಲಿದು
ಮಿಗೆ ರಚಿಸಿದಳಾ ರಾಯನ ರಾಣಿಯ
ಬಗಸೆಗಣ್ಗಳಿಗಂಜನವನು ೨೮

*ಅಲರಿದಂ[4]ಬುಜ[4]ವ ಸೋಂಕದೆ ಮೇಲೆ ಬಂದುಂ
ಬಳಿಕಲಭದ ಲೀಲೆಯನು
ಗೆಲವಂದುದು ಮೃಗನಾಭಿತಿಲಕವಾ
ಜಲಜವದನೆಯ ನೊಸಲೊಳು ೩೦

ಕಡೆಗ[5]ಣ್ಗಳ ಬೆಳ್ಪಿ[5]ಳಗಿನ ಮಂಡಲದಂತೆ
ಕಡುಸೊಗಯಿಸಲೋರ್ವಳಂದು
ತಡೆಯದೆ ಮುತ್ತಿನೋಲೆಗಳನಾ ರಾಯನ
ಮಡದಿಯ ಕಿವಿಗಿಕ್ಕಿದಳು ೩೧

[1] ಮಿಗೆ (ಅ) [2] ಗಾ (ಎ ಐ ಗ) [3] ಚವರದ ಕುಂಚ ಕಾಳಾಂಜಿಯ (ಅ)
[4] ಜನ (ಇ) [5] ಗಳಬೆಳ್ಪಿ (ಇ ಉ ಗ) ಗಳ ಬೆ (ಎ ಐ) * (ಉ) ಪ್ರತಿಯಲ್ಲಿಲ್ಲ.

ಇಂತಲಂಕೃತೆಯಾಗಿ ರಾಯನ ಪಟ್ಟದ
ಕಾಂತೆ ಸಿಂಹಾಸನದೊಳಗೆ
ಸಂತಸದಿಂದಿರಲಾ ಯೆಡೆಗವನೀ
ಕಾಂತ ಬಂದನು ಲೀಲೆಯೊಳು ೩೨

ರತಿಯೆಡೆಗಂಗಜ ಶಚಿಯೆಡೆಗಮರೇಂದ್ರ
ನತಿಮುದದಿಂ ಬರ್ಪಂತೆ
ಕ್ಷಿತಿಪತಿ ಬಂದನೊಯ್ಯನೆ ತನ್ನ ಪಟ್ಟದ
ಸತಿ ಹರಿಹರದೇವಿಯೆಡೆಗೆ ೩೩

ಬರಲಿದಿ[1]ರೇಳ್ದು[1]ನಿಂದಲಘುನಿತಂಬೆಯು
ಬ[2]ರ[2]ತೆಗೆದಮರ್ದಪ್ಪಿಕೊಂಡು
ಹರುಷದಿಂ ಹರಿಪೀಠ[3]ದೊಳವಳೊ[3]ಡಗೂಡಿ
ಕರಮೆಸೆದನು ಕಂಪನೃಪತಿ ೩೪

ಪಸರಿ[4]ಸೆ[4] ಸುಲಿಪಲ್ಲಕಾಂತಿ ಮನೋಜನ
ಜಸದಂ[5]ತಾ[5]ಲಲಿತಾಂಗಿ
ವೊಸೆದು ಪೇಳಿದಳರಸಗೆ ತಾನಿರುಳು ಕಂ
ಡೊಸಗೆಯ ನಾಲ್ಕು ಕನ[6]ಸನು[6] ೩೫

ಕೇಳಿ ಮಹೀಶ್ವರನಾ ಕನಸುಗಳನು
ತಾಳಿ ಮೆಯ್ಯೊಳು ಪುಳಕವನು
ಹೇಳಿದನದಱ ಫಲಮನಾ ಗುರುಕುಚೆ
ಯಾಳೆ ಸಂತಸಗಡಲೊಳಗೆ ೩೬

ಇನನಿಂದ [7]ಪರಮ[7]ಪರಾಕ್ರಮಿ ಸಿಂಹದಿಂ
ವಿನುತ ವಿಕ್ರಮನಿಂದುವಿಂದ
ಘನಕೀರ್ತಿ ಮದದಾನೆಯಿಂ ದಾನಿಯಾದಪ
ನಿನಗೆ ತನುಜನೋರ್ವನಬಲೆ ೩೭

*ಎನೆ ಮೋಘನಿನದವ ಕೇ[8]ಳಿದ[8] ಕೇಕಿಯು
ವನಿತೆಯಂತಾ ರಾಯನರಸಿ
ಅನುರಾಗವಡೆದೆತ್ತಿಸಿದಳಂಗದೊಳಂದು
ಘನಪುಳಕದ ಗುಡಿಗಳನು ೩೮

---

[1] ರೆದ್ದು (ಇ ಎ ಗ) [2] ರೆ (ಇ) [3] ದೊಳಗವರೊ (ಇ) ದಿಂದವಳೊ (ಎ ಗ) [4] ಸಿ (ಅ) [5] ತಿರೆ (ಐ) [6] ಸುಗಳ (ಎ) ಸುಗಳನು (ಗ) [7] ವೀರ (ಇ) [8] ಳ್ದ (ಅ) * (ಉ) ಪ್ರತಿಯಲ್ಲಿಲ್ಲ.

ಬಳಿಕ ಸಂತಸ[1]ದಂತವೆ[1]ಯ್ದುತ ಭೂಪತಿ
ತಳರ್ದನು ಕೆಲವು ದಿನ[2]ಗಳ[2]
ಕ[3]ೞಿ[3]ಯಲೊ[4]ಯ್ಯ[4]ನೆ ಗರ್ಭಚಿಹ್ನವಾ ಲಲಿತಾಂಗಿ
ಗೆಳಸಿದುದಿರದೆಯ್ತಂದು ೩೯

ಮೊಲೆದೊಟ್ಟು ಕ[5]ಪ್ಪೇ[5]ಱೆ ಮೊಗಕಾಂತಿ ಬೆ[6]ಳ್ಪೇ[6]ಱೆ
ನೆಲಸಲಲಸತೆ ನಡೆಯೊಳು
ತಲೆದೋಱಿದುದೊಯ್ಯನೆಳೆವಸುಱಾ ನೃಪ
ಲಲನೆಗೆ ಲಾವಣ್ಯನಿಧಿಗೆ ೪೦

ತುಱುಗಿರೆ ಗಲ್ಲ ನೊಸಲೊಳಳಕಾವಳಿ
ಮೆಱೆದುದು ನುಣ್ಮೊಗವವಳ
ಮಱಿದುಂಬಿವಿಂಡಿನಿಂ ಬಳಸಿದಂಭೋಜದ
ತೆಱದಂತೆಳೆವಸಿಱಿನೊಳು ೪೧

*ತೋರಮೊಲೆಗಳ ಮೊಗಂಗಳು ಕಪ್ಪುವೆ
ತ್ತೋರಂತೆ ರಾರಾಜಿಸಿದವು
ಚಾರುಸುವರ್ಣ ಕಲಶಗಳಗ್ರದ ಮೇಲೆ
ಸೇರಿದ ನೀಲಗ[7]ಳಂತೆ[7] ೪೨

*ಮೊಲೆಗಳ ಮೊಗದೊಡನಹಿತರ ಮೊಗಗಳು
ಸಲೆ ಕಂದಿದವು ವಳಿಯೊಡನೆ
ತೊಲಗಿ ಪೋದುದು ಶತ್ರುರಾಯರ ಭಾಗ್ಯವಾ
ಲಲನೆಯ ಗರ್ಭಭರದೊಳು ೪೩

ಉದರದೊಳಿರ್ದ ಬಾಲಕನೌದಾರ್ಯವ
ನಿದಿರಿಗೆ [8]ಕಾಣಿಸುವಂತೆ[8]
ಉದಯಿಸಿತುಱೆ ಭೂರಿ ದಾನಕೆ ಚಿತ್ತವಾ
ಸುದತಿಗೆ ಸುಗುಣಾಕರೆಗೆ ೪೪

---

[1] ಗಳನೆ (ಇ) ದಂತನೆ (ಉ ಎ ಗ) ದತ್ತವೆ (ಐ) ವನೆ (ಕ) [2] ವನು (ಇಎಗ) [3] ೞೆ (ಅ ಉ) [4] ಡ (ಇ ಎ ಗ) [5] ಪ್ಪಿ (ಅ ಇ) [6] ಳ್ಪಿ (ಅ) [7] ಳೆನಲು (ಇ ಎ ಕ ಗ) [8] ತೋಱುವಂದದಲಿ (ಅ) * (ಉ) ಪ್ರತಿಯಲ್ಲಿಲ್ಲ.

ಅರಿರಾಯರ ಸಿಂಹಪೀಠದ ಮೇಲೆ ಕು
ಳ್ಳಿರಬೇಕೆಂದೆಂಬ ಬಯಕೆ
ಇರದೆ ಪುಟ್ಟಿದುದಾಕೆಗೆ ಗರ್ಭದರ್ಭಕ
ನುರುಶೌರ್ಯವ ಸೂಚಿಸುತ ೪೫

*ಪರಭೂಪಾಲರುದ್ಯಾನವನಂಗಳ
ನಿರದೆ ಕಿಳ್ತವರ ಪುರಿಗಳ
ಉರುಪುವ ಬಯಕೆ ಬಗೆಯೊಳು ಪುಟ್ಟಿದುದಾ
ಸರಸಿಜದಳಲೋಚನೆಗೆ ೪೬

*ಮೂವರು ರಾಯರ ಮಣಿಮಾಡದ ಮೇ
ಲೋವದೆ ನಲಿದಾಡುತಿರ್ಪ
ಭಾವ ಪುಟ್ಟಿದುದೆಳೆವಸಿಱಿನೊಳಾ ರಾ
ಜೀವಲೋಚನೆಗೆ ಬೇಗದೊಳು ೪೭

*ಮೂವರು ರಾಯರ ಮಣಿಮಾಡವೇಱಿ ದಿ
ಶಾವಲೋಕನಗೆಯ್ವ ಬಯಕೆ
ಆ ವೀರಮಾತೆಗೊಗೆದುದು ಬಾ[1]ಲ[1]ನ ಶೌ
ರ್ಯಾವಲೇಪನವ ಸೂಚಿಸುತ ೪೮

ಬಸಿಱೊಳಗಣ [2]ಮಗನಿ[2]ಱಿಯದಿರನು ರಿಪು
ವಸುಧೆಯನೆಂದು ಪೇಳ್ವಂತೆ
ಬಿಸಜಾಕ್ಷಿಗರಿಭೂಮಿಯ ಮೃತ್ತಿಕೆಯ ಸೇ
ವಿಸುವ ಬಯಕೆ [3]ಜನಿಸಿ[3]ದುದು ೪೯

*ಪರವನಿತೆಯರನನುಜೆಯಗ್ರಜೆ[4]ಯರೆಂ[4]ದು
ಕರೆವ ಬಯಕೆಯಾ ಸತಿಗೆ
ಭರದೊಳೊಗೆದುದು ಬಸಿಱೊಳಿರ್ದ ಬಾಲನ
ವರಶೌಚಗುಣವ[5]ನೊರೆವುತ[5] ೫೦

*ಸಾಹಸಿ ಬಸಿಱೊಳಗಿರ್ದ ಬಾಲಕನೆಂ
ದೂಹಿಸೆ ಜನವಾ ಸತಿಗೆ
ಆಹವದೊಳು ಗೆಲಬೇಕರಿಗಳನೆಂಬ
[6]ದೋಹದ ಪುಟ್ಟಿತೆದೆಯೊಳು[6] ೫೧

---

1 ಲಕ (ಐ ಕ) 2 ಶಿಶುವಿ (ಅ) 3 ಪುಟ್ಟಿ (ಉ) 4 ಯೆಂ (ಇ ಐ ಕ). 5 ಪೇಳ್ವಂತೆ (ಕ) 6 ವೋಹ ಪುಟ್ಟಿದುದೆದೆಯೊಳಗೆ (ಇ) ದೋಹಳ ಪುಟ್ಟಿತೆದೆಯೊಳು (ಎ ಗ) * (ಉ) ಪ್ರತಿಯಲ್ಲಿಲ್ಲ.

ವಿರಚಿಸಿ ಪುಂಸವನಾದಿ ಕರ್ಮಂಗಳ
ನರಸನಾ ಸತಿಗೆ ಲೀಲೆಯೊಳು
ವರವಸ್ತ್ರವಾಹ[1]ನಮಣಿಭೂಷಣಾಳಿಯ[1]
ಕರೆದು ಕೊಟ್ಟನು ಬುಧಜನಕೆ    ೫೨

ತಳುವದಾ ರಾಯನ ಹರುಷದೊ[2]ಡನೆ[2] ಗರ್ಭ
ಬೆಳೆದುದಾ [3]ನಳಿನವದನೆಗೆ[3]
ಕಳೆದು ರತ್ನಾಭರಣಂಗಳ ಪೊಱೆಯೆಂದು
ತಳೆದಳು ಪೂದೊಡಿಗೆಯನು    ೫೩

ಪೂವಿನ ಕಂಕಣ ತೆಂಗಿನ ತಿರುಳೋಲೆ
ತಾವರೆನೂಲುಡೆನೂಲು
ಬಾವನ್ನದಣ್ಪು [4]ಕಪ್ಪುರದ ಕಂಠಿಕೆ[4] ಭೂ
ಷಾವಳಿಯಾದುದವಳಿಗೆ    ೫೪

ಮಲಗಿ ಮಾನಿನಿಯುರಂಗದ ಮೇಲೆ ತಾವರೆ
ಯೆಲೆಯ [5]ಬಿಜ್ಜಣದೆಲರಿಂದ[5]
ತೊಲಗಿಸುತಂಗದ ತಾಪ[6]ವನಿ[6]ರ್ದಳಾ
ಲಲನೆ ತುಂಬಿದ ಗರ್ಭದೊ[7]ಳಗೆ[7]    ೫೫

ವೀಣೆ ಕಿನ್ನರಿಗಳಿಂಚರದಿಂದ ಬಾ[8]ಜಿಪ[8]
ವೇಣುನಿನಾದದಿಂಪಿಂದ
ಜಾಣೆಯರೊಸೆದು ಪಾಡುವ ಗಾನರಸದಿಂದ
ಮಾಣದಲೆದಳಾಸಱನು    ೫೬

ಇಂತು ವಿನೋದಗಳಿಂದ ದಿನಂಗಳ
ಸಂತತಿಯನು ಕಳೆದವಳು
ತಾಂ ತಡೆಯದೆ ಪಡೆದಳು ಶುಭದಿನದೊಳು
ಸಂತಾನವನು ಸುಖದೊಳು    ೫೭

---

1 ನಾಮಲಭೂಷಣಾಳಿಯ (ಅ) ನ ಮಣಿಭೂಷಣಾವಳಿಯ (ಎ ಕ ಗ) ನ ಮಣಿಭೂಷಣಾದಿಯ (ಐ) 2 ಳಗೆ (ಐ) 3 ರಾಯನಂಗನೆಗೆ (ಅ) 4 ಕಸ್ತುರಿ ಪಚ್ಚೆ (ಎ ಗ) 5 ಬಿಜ್ಜನದೆಲೆಯಿಂದ (ಅ ಉ) ವ್ಯಜನದಲರಿಂದ(ಇ) ವ್ಯಜನದೆಲರಿಂದ (ಐ) 6 ದೊಳಿ (ಅ ಉ) 7 ಳು (ಇ) 8 ರಿಪ (ಐ).

*ಉರ್ವರೆ ರೋಹಣಾದ್ರಿಯನಿಂದುವನಾ
ಶರ್ವರಿ ಪಡೆವಂದದಲಿ
ಸರ್ವಲಕ್ಷಣಯುತ ಸುತನ ಪಡೆದಳಂದ
ಪೂರ್ವಲಗ್ನೋದಯದೊಳಗೆ ೫೮

ನೀ[1]ರ[1]ಜವಾದುದವನಿ ಕೆಱೆತೊಱೆಗಳ
ನೀರಚ್ಛವಾಯ್ತು ಕುವರನ
ಚಾರುಚರಿತ್ರದ ನಿರ್ಮಲತೆಯು ನೀ
ಧಾರುಣಿಗಱುಪುವಂದದಲಿ ೫೯

*ಒಗೆದ ತನೂಜನ ತೇಜದೊಳ್ಮಲಿನತೆ
ಪುಗದೆಂದಱುಪುವಂದದಲಿ
ಪೊಗೆಯದೆ ದಕ್ಷಿಣಾವರ್ತಮುಖದೊಳಗ್ನಿ
ಧಗಧಗಿಸುತ ಕಣ್ಗೆಸೆದುದು ೬೦

ಈತನೆ ಲೋಕಸಂತಾಪಹಾರಕನೆಂದು
ಭೂತಳಕಱುಪುವಂದದಲಿ
ಶೀತಳಸುರಭಿಸಮೀರನೊಯ್ಯನೆ ಬಂ
ದಾತುರದಿಂದ ಸುಳಿದನು ೬೧

ಮಂಗಲವಾದ್ಯ ಮೊಳಗಿದವು ಗುಡಿತೋರ
ಣಂಗಳೆತ್ತಿದವು ಪೂವಲಿಯು
ರಂಗವೆಸೆದುದೆಡೆವಿಡದಾ ಪುರದ ಬೆ
ಡಂಗನದೇನ ಪೇಳುವೆನು ೬೨

ಕೇರಿಕೇರಿ[2]ಯೊ[2]ಳು ಮನೆಮನೆಯೊಳು ಘನ
ಸಾರಚಂದನದ ಸಾದುಗಳ
ಸಾರಣೆ ಪನ್ನೀರ ಚಳೆಯ ಪೂವಲಿ ಧೂಪ
ಭೂರಿವಾದ್ಯಗಳು [3]ಮೆಱೆದವು[3] ೬೩

ಮುತ್ತು ಹವಳ ರನ್ನ ಪಟ್ಟೆ ಝಲ್ಲಿಗಳಿಂದ
ಬಿತ್ತರವಡೆದ ಗುಡಿಗಳು
ಎತ್ತಿ[4]ದವ[4]ರಮನೆಯೊಳಗೆ ಬೇಡಿದುದನಂ
ದಿತ್ತ[5]ನರಸ ಯಾಚಕರಿಗೆ[5] ೬೪

---

[1] ರೇ (ಎ ಗ) [2] ಗಳೊ (ಅ ಇ ಉ ಎ ಗ) [3] ಮೊಳಗಿದವು (ಇ ಎ ಗ)
[4] ದ಼ುದ (ಎ) [5] ಯಾಚಕರಿಗರಸನು (ಅ ಉ) * (ಉ) ಪ್ರತಿಯಲ್ಲಿಲ್ಲ.

ಆರೇನ ಬೇಡಿದಡದನವರಿಗೆ ಕ
ಯ್ಯಾರೆ ಕೊಟ್ಟವರ ಸತ್ಕರಿಸಿ
ಸೇರಿ ನೋಡಿದನೊಯ್ಯನೆ ತನುಜನ ವದ
ನಾರವಿಂದವನಾ ರಾಯ　　೬೫

ಮಾತೇನವರಿವ[1]ರೆನ್ನ ಬಿಡದೆ[1] ಕ
[2]ಯ್ಯಾತ[2] ಮಹೀಜನಗಳಿಗೆ
ಭೂತಳಾಧೀಶ್ವರನಿತ್ತು [3]ದಾ[3]ನವನಂದು
ಜಾತಕರ್ಮವ ಮಾಡಿದನು　　೬೬

ಭೂಮಿವಿನುತ ಶುಭಲಕ್ಷಣದಿಂದಭಿ
ರಾಮನಪ್ಪುದಱಿಂದ ಸುತಗೆ
ರಾಮನೆಂದೆಂಬ[4]ನ್ವ[4]ರ್ಥನಾಮವನಿಟ್ಟ
ನಾ ಮಹೀಪತಿ ಲೀಲೆಯೊಳು　　೬೭

ತರಣಿಕಿರಣ[5]ದಿಂದ[5] ಸೋಂಕದೆ ತನ್ನ ತಾ
ನರಲ್ವ ತಾವರೆಮೊಗ್ಗೆ[6]ಯೊಡನೆ[6]
ದೊರೆಯಾದುದು ನೆವವಿಲ್ಲದೆ ನಗುವ ಭೂ
ವರಕುವರನ ಮುದ್ದುಮೋಱೆ　　೬೮

ತರುಣನ ಥಳಥಳಿಸುವ ಕ[7]ಣ್ಬೊಳೆ ಬಂ[7]
ದರೆಮುಸಗಿ[8]ದುದು[8] ಜನನಿಯ
ವರಮೋಹರಸ ಬೆಳುದಿಂಗ[9]ಳು[9]ಬೆರಸಿದ
ಶರನಿಧಿಯಂತೇನನೆಂಬೆ　　೬೯

ಹರಿನೀಲಮಣಿಯಿಂದ ವಿರಚಿಸಿದರಳೆಲೆ
ಕರಮೆಸೆದುದು ಬಾಲಕನ
ವರನಿಟಿಲದೊಳರೆವೆಱೆಯೊಳೊಪ್ಪುವ ಸುರು
ಚಿರ ಕಲಂಕದ ತೆಱದಂತೆ　　೭೦

ವಿಲಸಿತ ಮಣಿ[10]ಕ[10]ರ್ಣಭೂಷಣರುಚಿ ಪರ
ಕಲಸಿದ ಬಾಲನ [11]ದೇ[11]ಹ
ಗೆಲೆವಂದುದು ಸಿಂಧೂರ ಪೊರೆದ ಕರಿ
ಕಳಭಕಾಯದ ಕಾಂತಿಯನು　　೭೧

---

[1] ರೇನ ಬೇಡಿದಡೆ (ಅ ಉ) ರೇನ ಬೇಡುತ (ಎ ಗ)　[2] ಯ್ಯಾಂತು (ಎ ಗ)
[3] ಧ (ಇ)　[4] ನ್ವಯಾ (ಐ)　[5] ಗಳಿಂ (ಇ ಉ ಎ)　[6] ವೊಳೆಯು (ಇ)　[7] ಣ್ಬೊಳಪಿಂದ
ತೆರೆ (ಇ ಉ ಎ ಐ ಗ ಚ ಟ)　[8] ದವು (ಅ)　[9] ಳಂ (ಇ)　[10] ವ (ಉ)　[11] ಚೋ (ಎ ಗ).

ನಿಡುಗಣ್ಗಳೊಳಗೆ ರಾಜಿ[1]ಪ[1] ಕಜ್ಜಳರೇಖೆ
ಬಿಡದೆ ನೋಳ್ಪರ ಕಣ್ಮನಕೆ
ಕುಡುವುದು ರಾಗಮನೆ[2]ನ[2]ಲಾ ಕುವರಗೆ
ಪಡಿಯೆ ಲೋಕದ ಬಾಲಕರು ೭೨

*ವಸುದೆಯೊಳನ್ಯರ ತೇಜಮನಾಂ ಸೈ
ರಿಸೆನೆಂದು ತೋರ್ಪಂತೆ ಹೊರೆಯ
ಹೊಸಮಣಿದೀಪಾಂಕುರಗಳನತ್ತಿತ್ತ
ಬಿಸುಡುವನಾ ರಾಯಕುವರ ೭೩

ವಿಲಸಿತ ವೀಣಾರವದೊಳಾದರವನು
ತೊಲಗಿಸು ತಾಲಿಸುವರಿಗೆ
ತಳರ್ನಡೆಯೊಳು ಪೊಣ್ಮುವ ಕಿಂಕಿಣಿಗಳ
ಕಲರವವಾ ಬಾಲಕನ ೭೪

ಕವಿಗಳಿಗರ್ಥನಿರ್ಣಯವ ಪುಟ್ಟಿ[3]ಸುವಾ[3]
ಕುವರನ ತೊದಲುನುಡಿಗಳು
ತವೆ ಸೋಲಿಸಿದವು ವಶ್ಯಮಂತ್ರಂಗಳಂ
ತವರಿವರೆನ್ನದೆಲ್ಲರನು ೭೫

ಪಳುಕಿನ ಪಾಸಱೆಯೊಳಗೆಡೆಯಾಡುವ
ಕಳಭದಂತಾ ರಾಯಕುವರ
ತಿಳಿದೊಯ್ಯನೊಯ್ಯನೆ ದಟ್ಟಡಿಯಿಟ್ಟನು
ಲಲಿತ[4]ಧವಳಕುಟ್ಟಿಮ[4]ದೊಳು ೭೬

ಅರಳೆಲೆ ಮಾಗಾಯಿ ಪುಲಿಯುಗುರುಡೆನೂಲು
ಚರಣದಂದುಗೆ ತಾತಿ ಘಂಟೆ
ಬೆರಳುಂಗುರ ದಿಟ್ಟಿದಂಡೆ ಮೊಱೆಯುಲಾ
ತರುಣನೆಸೆದನು ಲೀಲೆಯೊಳು ೭೭

ಬರೆ ಬಸಿಱಿಗೆ ವಸ್ತುವಾಹನಗಳು ಬಂದ
ವರಮನೆಗಾ ಶಿಶು ಪುಟ್ಟೆ
ಇರದೆ[5]ಪು[5]ಟ್ಟಿತು ರಾಯಪದವಿ ಕಂಪಿಲಗಾ
ತರುಣನ ಸ್ಥೈಪನೇನೆಂಬೆ ೭೮

---

[1] ಸಾವ (ಇ ಉ) [2] ನುತ (ಇ ಉ) [3] ಸಿದಾ (ಇ ಎ ಗ) ಸದಾ (ಉ) [4] ಪೊಳಪಿನ ನೆಲ (ಎ ಗ) [5] ವಱು (ಇ) * (ಉ) ಪ್ರತಿಯಲ್ಲಿಲ್ಲ.

ಸಸಿಗಲೆ ಪೆರ್ಚೆ ಪೆರ್ಚುವ ವಾರ್ಧಿಯಂತಾ
ಪಸುಳೆ ದಿನಕ್ರಮದಿಂದ
ಒಸೆದು ಬೆಳೆದು ಕಳೆ[1]ದನು ಶೈಶವವನು
ವಸುಧಾಧಿಪ ನೋಡಿ ನಲಿಯೆ　　೭೯

ಬಾಲತ್ವದೊಳಗೌದಾರ್ಯಗುಣಂಗಳ
ಗಾಲಯವೆನಿಸಿದ ಸುತನ
ಲೀಲೆಯಿಂದೀಕ್ಷಿಸಿ ರಾಗರಸಾಬ್ಧಿಯೊ
ಳೋಲಾಡಿದನು ಭೂವರನು　　೮೦

*ತಿಲ ಹಲ ಕುಲಿಶ ಕಮಲ ಶಂಖ ಲಾಂಛನ
ವಿಲಸಿತ ಕರ ಚರಣಗಳ
ಎಳೆಮಗನಂಗಲಾವಣ್ಯದೊ[2]ಳ[2]ವನಿಪ
ಮುಳುಗಿಸಿದನು ಕಣ್ಬೊಂಬೆಗಳ[3]　　೮೧

ಕುವರ[4]ಗೆ[4] ವಿದ್ಯಾವನಿತೆ[5]ಗೆ[5] ಕೂಟಕಿ
ದವಸರವೆಂದವನಿಪನು
ಅವನಿಗಾಚರ್ಯನನೋರ್ವನ ಮಾಡಿದ
ವಿವಿಧಕಲಾಚತುರನನು　　೮೨

ಸುಮುಹೂರ್ತದೊಳೋದಿಸೆ ಗುರು ನಾನಾ
ವಿಮಲಕಲೆಗಳಃ ಚಂದ್ರ[6]ನನು[6]
ಕ್ರಮದಿಂದೆಯ್ದುವಂತೆಯ್ದಿ[7]ದವಾ[7] ಭೂ
ರಮಣನ ಸುಕುಮಾರನನು　　೮೩

ಸುರಗಿ ಖಂಡೆಯ ಲೌಡಿ ಹರಿಗೆ ಸಬಳ ಬಿಲ್ಲು
ಹಿರಿಯುಬ್ಬಣ[8]ಗಳ[8] ಸಾಧನೆಯ
ಗುರುಮುಖದಿಂದ ವೇತಾಳನಿದಿರಿನೊಳು
ಬರಿಸಿಕೊಂಡನು ರಾಯಕುವರ　　೮೪

ಕರಿತುರಗಗಳೇಱಾಟ ತೋಱಾಟದ
ಪರಿಯನೆಲ್ಲವನಾ ಕುವರ
ಭರದಿಂದ ಕಲಿತನು ಬಲ್ಲರು ಬಾಯ್ಗೂಡಿ
ಕರಗಳನೆತ್ತಿ ಕೊಂಡಾಡೆ　　೮೫

---

[1] ಳೆ (ಅ ಇ ಉ ಎ ಐ)　[2] ಳಗ (ಎ ಗ)　[3] ಣ್ಬೊಳಗೆ (ಎ ಗ)　[4] ನ (ಎ) [5] ಯ (ಇ ಉ)　[6] ಮನು (ಎ ಗ)　ಮನ (ಐ)　[7] ದನಾ (ಅ ಐ)　ದುದಾ (ಉ)
[8] ದ (ಉ)　* (ಉ) ಪ್ರತಿಯಲ್ಲಿಲ್ಲ.

ಕಲಿತನ ಬಲಮುಳ್ಳ[1]ನಿ[1]ಗಲ್ಲದೆ ಕೈದು
ಫಲಿಸದು ದುರ್ವಲಗೆಂದು
ಕಲಿಸಿದರಾಚಾರ್ಯರಾ ಕುವರಗೆ ಖಡ್ಗ
ಕು[2]ಲ[2]ಸಾಧನೆಯನೆಲ್ಲವನು ೮೬

*ಬಿದಿ ನೀಲದಿಂದ ಸಮೆದ ಗಂಡು[3]ರೂವಾರ
ಕೊ[3]ದವಿಸಿ ಕಣ್ದೆಱವಿಯನು
ಮುದದಿಂದ ಜೀವಂಬೊಯ್ದಂತಿರಭಿನವ
ಮದನನೆಸೆದನು ಕುವರನು ೮೭

ನಿ[4]ಡು[4]ದೋಳು [5]ತೋರ[5]ಮುಡುಹು ಪೇರುರ ಸಣ್ಣ
ನಡು ನೀಳ್ದ ಕಣ್ಕುಡುವುರ್ವು
ಬಿಡದೆ ಮೆಱೆಯೆ ರಾಮನಭಿರಾಮತೆ [6]ಕ
ಣ್ವಿ[6]ಡಿದುದು ಕಮಲನೇತ್ರೆಯರ ೮೮

ಗೆಲೆ ದೇಹದೀಧಿತಿ ಹರಿಯಂಗಕಾಂತಿಯು
ಗೆಲೆ ಗಂಡಗಾಡಿ ಮದನನ
ಚೆಲುವಿಕೆಯನು ಮೆಲ್ಲಮೆಲ್ಲನೆ ಯೌವನ
ನೆಲಸಿತಾ ರಾಯಕುವರಗೆ ೮೯

ನವಯೌವನನಾದ ಮಗನ ಮೊಗವನಂ
ದವಲೋಕಿಸಿ ಕಂಪಿಲನು
ಕವಣಿಸಬಾರದ ಹರುಷಾಂಬು[7]ನಿಧಿ[7]ಯೊಳು
ತವೆ ಮೂಡಿ ಮುಳುಗಾಡಿದನು ೯೦

ಕುಲವಿನ್ನು ಕೆಡದು ಕುಜನರ ಕೂಗಾಟದ
ಕಲಕಲವಿನ್ನು ನಡೆಯದು
ಕೆಲಬಲದರಸುಗಳಾಳಲಱಿಯರಿನ್ನು
ನೆಲನನೆಂದರಸ ನಲಿದನು ೯೧

---

[1] ವನಿ (ಏ) ನಿವನಿ (ಐ) [2] ಲದ (ಎ ಗ) [3] ರೂಪದಂತೊ (ಇ ಎ ಗ) ರೂಪದಕೊ (ಐ) [4] ಡಿ (ಎ ಗೆ) [5] ತೋಳ (ಅ) [6] ಕಣ್ಗೆ ಪಿ (ಅ) ಕಣ್ಬೆ (ಉ ಎ ಕ ಗ) [7] ನದಿ (ಅ)
* (ಉ) ಪ್ರತಿಯಲ್ಲಿಲ್ಲ.

ವೀರರುದ್ರನ ವಿಕ್ರಮವಿನ್ನು ಮೆಱೆಯದು
ಸೇರಿದ ಬಲ್ಲಾಳನೃಪನ
ಧಾ[1]ರು[1]ಣಿಯುಳಿಯು[2]ಲಱಿಯದಿನ್ನೆಂದು[2] ವಿ
ಚಾರಿಸಿದನು ಕಂಪಿಲನು ೯೨

ನವಲಕ್ಕ ತೆಲುಗರ ಗಂಡನೆಂದೆಂಬೀ
ಬವರದ ಬಲುಬಿರುದಿನ್ನು
ರವಿಶಶಿಯುಳ್ಳ[3]ನ್ನ[3]ವರ ದಕ್ಕಿತೆಮಗೆಂದು
ತವೆ ನಲಿದನು ನರನಾಥ ೯೩

ಸುರುತಾಳನ ದಂಡು ಸುಳಿಯಲಮ್ಮದು ನಮ್ಮ
ಧರಣಿಗೆ ತೆಲುಗಮನ್ನೆಯರ
ಹರಿದಾಟ ಹವಣಿಗೆ ಬಂದಿತಿನ್ನೆಂದು ಭೂ
ವರನಾನಂದವಡೆದನು ೯೪

ಮೂವರು ರಾಯರ ಗಂಡನೆಂದೆಂಬೆನ್ನ
ಜೀವದಂತಪ್ಪ ಬಿರುದನು
ಕಾವುದಕಾದನೀ ಮಗನೆಂದು ಕಂಪಿಲ
ದೇವ ನಲಿದನೆ[4]ರ್ದೆ[4]ಯೊಳಗೆ ೯೫

ಮೀಸರ ಗಂಡನೆಂದೆಂಬ ಬಿರುದಿನ ವಿ
ಲಾಸದ ನಡೆ ನಮಗಿನ್ನು
ಬೀಸರವೋಗದೆಂದೆಣಿಕೆಯ[5]ನಾ ನೃಪ[5]
ಸೂಸಿಬಿಟ್ಟನು ಮನದೊಳಗೆ ೯೬

*ಮುಗಿಲ ಕೆಳಗೆ ತೋಳ್ವೀಸಿ ನಡೆವ ಬಲು
ವಗೆ ರಾಯರ ಗಂಡನೆಂಬ
ಜಗ[6]ಬಿರುದಿ[6]ದು ದಕ್ಕಿತೆನಗೆಂದು ಕುವರನ
ಮೊಗವ ನೋಡಿದ[7]ನು ಭೂಪಾಲ[7] ೯೭

---

[1] ರಿ (ಅ ಉ ಎ ಗ) [2] ಲಾಱದು ಇನ್ನೇನೆಂದು (ಇ) ದಿನ್ನೆಂದು ತನ್ನೊಳಗೆ (ಐ) [3] ನ್ನೆ (ಇ) [4] ದೆ (ಐ) [5] ನವನೀತ (ಇ ಎ ಐ ಗ) [6] ದ ಬಿರು (ಇ ಎ) [7] ನು ಭೂಮಿಪನು (ಇ ಐ) ನವನಿಪನು (ಎ ಗ) * (ಉ) ಪ್ರತಿಯಲ್ಲಿಲ್ಲ.

ಚೆಲುವರ ಗಂಡನೆಂದೆಂಬೀ ಬಿರುದಿಗೆ
ನೆಲೆಯಾದನೀ ಮಗನೆಂದು
ನಲಿದನು ನಲವೇಱಿದನಿಂದ್ರಪದ ಕರ
ತಳಕೆ ಬಂದಂತೆ ಪೆರ್ಚಿದನು ೯೮

ಗಜಪತಿ ಗಜಸಿಂಹನೆಂದೆಂ[1]ಬೀ ನನ್ನ[1]
ಭುಜಬಲದಿಂದಾದ ಬಿರುದು-
ನಿಜವಹುದೀ ಕುವರನಿಗೆಂದು ಕಂಪಭೂ
ಭುಜ ನಲಿದನು ಮನದೊಳಗೆ ೯೯

ನರಪತಿ ನರವೇತಾಳ ತುರಗಪತಿ
ತುರಗಮಹಿಷನೆಂದೆಂಬ
ಬಿರುದಿನ ಬಿಂಕ ಬೀಸರವೋಗದಿನ್ನೆಂದು
ನರಪತಿ [2]ನಲಿದನೆರ್ದೆಯೊಳು[2] ೧೦೦

ಈಯವನಿಯ ಭಾರವ ವಹಿಸುವೊಡೆ ಸ
ಹಾಯ[3]ವಾ[3]ದನು ಮಗನಿವನು
ಆಯಸ ಹೋದುದಿನ್ನೆನಗೆಂದು ಕಂಪಿಲ
ರಾಯ ನಲಿದನೆ[4]ರ್ದೆ[4]ಯೊಳಗೆ ೧೦೧

ಹರೆಯ ಸೊಬಗು ರೂಪು ರೇಖೆ ಬೆಡಗು ಬಿಂಕ
ದೊರೆಕೊಂಡಿವೆ ಕುವರನಿಗೆ
ಪರಿಣಯವನು ಮಾಡಬೇಕೆಂದು ಮಂತ್ರಿಯ
ಕರೆದು ಕಂಪಿಲ ಬೆಸಗೊಳಲು ೧೦೨

ಮಾತೇನು ರಾಯರ ದೇವ ಕುಮಾರಗೆ
ಜಾತಿವೆಣ್ಗಳನ್ನೈವರನು
ಓತು ಮದುವೆಯ ಮಾಡುವದಿದುಚಿತವೆಂ
ದಾತನೊರೆದನವನಿಪಗೆ ೧೦೩

ಜನನಿ ಜನಕರನುಮ[5]ತಿಯಿಂ[5]ದ ಜನಪತಿ
ವಿನುತಲಕ್ಷಣಯುತೆಯರನು
ಮನುಜೇಶ್ವರನಂದನೆಯರನ್ನೈವರ
ನನುರಾಗದಿಂ ತರಿಸಿದನು ೧೦೪

---

[1] ಬ ನನ್ನೀ (ಇ ಉ ಎ ಗ) ಬೀ ನನ್ನಿ (ಐ) [2] ನಲವೇಱಿದನು (ಎ ಗ) [3] ನಾ (ಎ ಗ) [4] ದೆ (ಇ ಎ ಐ ಗ) [5] ತದಿಂ (ಇ ಎ ಗ).

ಸುರವೃಕ್ಷವೈದಱ ಕೆಲದೊಳೊಗೆದ ಸುರು
ಚಿರ ಕಲ್ಪಲತೆಗಳೆಂಬಂತೆ
ಕರಮೆಸೆದರು ರಾಜತನುಜೆಯರೈವರು
ಹರಿಹರದೇವಿ ನಲಿಯಲು　　೧೦೫

ಅರಲಂಬುಗಳೈದಂಗನಾರೂ[1]ಪುಮು[1]
ಧರಿಸಿ ನಿಂದಂತೆ ಕಣ್ಗೆಸೆವ
ತರಳಲೋಚನೆಯರೈವರ ನೋಡಿ ರಾಣಿಯು
ರಿರದೆ ಪೊಗ[2]ಳಿದ[2]ರವರನು　　೧೦೬

*ಕುಲವೃದ್ಧೆಯರು [3]ಧಾತ್ರಿ[3]ಯರಂತಃಪುರ
ಲಲನೆಯರಾ ಕುವರಿಯರ
ಅಲಕಾದಿ ಪದಪರ್ಯಂತರ [4]ನಿಟ್ಟಿಸಿ[4]
ನಲಿದರೊಲಿದು ಪೊಗಳಿದರು　　೧೦೭

ತಮ್ಮಗಿವರು ತಕ್ಕವರೆಂದಕ್ಕಮಾ
ರಮ್ಮ ನಲಿದಳೆರ್ದೆಯೊಳಗೆ
ನಮ್ಮಣ್ಣಗಿವರೆಣೆಯಹುದೆಂದು ತಂಗಿ ಸಿಂ
ಗಮ್ಮನೆಯ್ದಿದಳು ಸಂತಸವ　　೧೦೮

ಮಗ ರಾಮಗೀ ಮೃಗಲೋಚನೆಯರು ಸರಿ
ಮಿಗಿಲೆಂದು ಹರಿಹರದೇವಿ
ಮಿಗೆ ಭಾವಿಸಿ ನೋಡಿ ಹರುಷಾಂಬು[5]ನಿಧಿ[5]ಯೊಳ
ಗಗುಳಿದಳೇನ ಬಣ್ಣಿಪೆನು　　೧೦೯

ಹರಿಣಿ ಮೇನಕಿ ಮಂಜುಘೋಷೆ ತಿಲೋತ್ತಮೆ
ವರರಂಭೆಯರೆಂದೆಂಬ
ಸುರನಾರಿಯರೈವರೀ ಲೋಕಕ್ಕವ
ತರಿಸಿದಂತವರು ಮೆಱೆದರು　　೧೧೦

ಅರಮನೆಯೊಳಗತಿಶೋಭೆವಡೆದು ತೋರ್ಪ
ಕರುಮಾಡದ ಮುಂಗಡೆಯೊಳು
ಕರಮೆಸೆದುದು ಪರಿಣಯಮಂಟಪವದ
ಱಿರವನದೇನ ಬಣ್ಣಿಪೆನು　　೧೧೧

---

[1] ಪವ (ಇ ಎ ಗ ಟ)　[2] ಳ್ದ (ಉ)　[3] ದಾದಿ (ಇ)　[4] ನೀಕ್ಷಿಸಿ (ಅ ಉ)
[5] ನದಿ (ಅ)　*(ಅ) ಪ್ರತಿಯಲ್ಲಿಲ್ಲ.

ಮುತ್ತಿನ ಹವಳದ ಪಚ್ಚೆಯ ನೀಲದ
ಮೊತ್ತದ ಲಂಬಣದಿಂದ
ಎತ್ತಿದ ಗುಡಿ ತೋರಣಂಗಳಿಂದದು ಕ
ಣ್ಗೆತ್ತುದು ಬಹಳ ಕೌತುಕವ ೧೧೨

ಜಳಪೂರ್ಣಕಳಸ [1]ಚಾಗದ[1] ಪಡಲಿಗೆಯೊಳೆ
ದಳಿರ್ದೋರಣ ಪನ್ನೀರ
ಚಳೆಯ ಮುತ್ತಿನ ರಂಗವಲಿ ಚಿತ್ರಭಿತ್ತಿ ಕ
ಣ್ಗೊ[2]ಳಿಸಿ[2] ಮಂಟಪ ರಾಜಿಸಿದುದು ೧೧೩

ಸುರದಂಪತಿಗಳ ಕಿನ್ನರದಂಪತಿಗಳ ಕಿಂ
ಪುರುಷದಂಪತಿಗಳ ಚಿತ್ರ
ಕರಮೆಸೆದುದು ಕಣ್ಗಾ ಮಂಟಪದ ಪೊಂ
ಬರಹದ[3]ಕೇ[3]ರಕೆಲದೊಳು ೧೧೪

ಭಾರತ ರಾಮಾಯಣ ವೀರಪುರುಷರ
ಚಾರಿತ್ರವಾ ಮಂಟಪದ
ಕೇರೊಳು ಕೆಲಕೆಲವೆಡೆಯೊಳು ಮೆಱೆದವು
ಚಾರು[4]ತೆವೆತ್ತು[4] ಕಣ್ಗಳಿಗೆ ೧೧೫

ಪರಿಮಳಕೆಱಗಿದ ಮಱಿದುಂಬಿಗಳಿಂದ
ಕರಮೆಸೆದಿರ್ಪ ಮಲ್ಲಿಗೆಯ
ಸರಮೆಸೆದುದು ನೀಲವರಲು ಸೇರಿದ ಮುತ್ತಿ
ನುರುತರಮಾಲೆ[5]ಯೆಂ[5]ದೆನಲು ೧೧೬

ಮಂಗಲಗಾ[6]ಯಕಿಯರು[6] ಪಾಡುವ ಗೀ
ತಂಗಳಿಂದುಪಹಾರದಲರ್ಗೆ
ಪಿಂಗದೆಱಗುವಳಿಗಾನದಿಂದಾ ರಾ
ಜಾಂಗಣ ರಾರಾಜಿಸಿದುದು ೧೧೭

*ಆ ಸುರುಚಿರಮಂಟಪದ ಮಧ್ಯದೊಳುಱೆ
ದೇ[7]ಸಿ[7]ವಡೆದು ಕಣ್ಗೆಸೆವ
ಭಾಸುರ ಪಂಚರತ್ನದ ಪಟ್ಟವಣೆಯ ವಿ
ಲಾಸವನೇನ ಬಣ್ಣಿಪೆನು ೧೧೮

---

[1] ಜಾಗರ (ಇ ಎ ಗ) [2] ಸೆ (ಇ ಐ ಕ ಗ) [3] ತೆರೆ (ಇ) [4] ತೇಜದ (ಇ) ತೇಜದಿ (ಐ) [5] ಯಿ (ಉ) [6] ಯಿನಿಯರು (ಅ) ಯಕರುಗಳು (ಐ) [7] ಸೆ (ಎ ಗ)
*(ಉ) ಪ್ರತಿಯಲ್ಲಿಲ್ಲ.

ಎಳೆಯಡಕೆಯ ಮಾತುಳಂಗದ ಕದಳಿಯ
ಪಲಸು ನೇಱಿಲು ಮಾವುಗಳ
ಫಲತತಿಯಿಂದಂತರ್ವೇದಿಕೆ[1]ಯದು ಕ[1]
ಣ್ಗೆಳಸಿದುದೇನ ಬಣ್ಣಿಪೆನು ೧೧೯

ಅಗರು ಧೂಪದ ಧೂಮಲೇಖೆಯ ನಱುಗಂಪ
ನಗಲದೀಂಟುವ ತುಂಬಿವಿಂಡು
ಮಿಗೆ ರಂಜಿಸಿದುದು ತಮಾಲಲತಿಕೆಯೊಳು
ಸೊಗಯಿಪ ಫಲತತಿಯೆನಲು ೧೨೦

ಕಟ್ಟಿದ ವೈಜಯಂತಿಗಳ ಸಂದಣಿ ಬಾಂ
ಬಟ್ಟೆಗರೆಡೆಯಾಟವನು
ಕಟ್ಟಿದುದೆಂದೆನಲಾ ಮಂಟಪದ ಸಮು
ಕಟ್ಟನದೇನ [2]ಬಣ್ಣಿಪೆನು[2] ೧೨೧

ಪಂಚಬಾಣಂಗಳ ನಡುವೆ ಕಣ್ಗೆಸೆದಿರ್ಪ
ಪಂಚಸಾಯಕನಂತೆ ಕಾಂತಾ
ಪಂಚಕದೊಡಗೂಡಿ ಕುವರನೆಸೆದನಾ
ಕಾಂಚನಮಣಿ[3]ವಿಷ್ಟರ[3]ದೊಳು ೧೨೨

ಆ ಯುವತಿಯರೈವರ ತಾತರೊಡಗೂಡಿ
ರಾಯನರಸುಗ[4]ಳು[4]ವೆರಸಿ
[5]ಓಯಾರದೊಳು[5] ಮುಂಗಡೆಯೊಳೆಸೆ[6]ದನು[6] ಸುರ
ರಾಯನಂತಧಿಕಲೀಲೆಯೊಳು ೧೨೩

ಪೆಂಡವಾಸದ ಮಧ್ಯದೊಳು ಹರಿಹರದೇವಿ
ಮಂಡಲಾಧಿಪನಾಣತಿಯೊಳು
ಕಂಡಳೊಯ್ಯನೆ ಕುವರನ ಮೊಗವನು ಸೂಱೆ
ಗೊಂಡಳಿಂದ್ರನ ಪದವಿಯನು ೧೨೪

ಇರೆ ಸಾಮಂತಸೀಮಂತಿನಿಯರು ಸುತ್ತ
ಹರಿಹರದೇವಿ ಕುವರನ
ಇರ[7]ವ[7] ನಿಟ್ಟಿಸಿ ಹರುಷಾ[8]ಶ್ರುವ[8] ಕಣ್ಗಳಿಂ
ಸುರಿದಳು ಸಂತಸದೊಳಗೆ ೧೨೫

---

[1] ಮನಕೆ ಕ (ಅ ಇ) [2] ನೊರೆವೆನು (ಐ) [3] ಪೀಠ (ಎ ಗ) [4] ಳ (ಇ ಉ) [5] ವಾಯಾರದೊಳು (ಅ) ವೋಯಾರದಿಂ (ಇ ಐ) [6] ದ (ಅ ಇ ಎ ಗ) ದಾ (ಉ) [7] ದವ (ಅ ಐ) [8] ಶ್ರು (ಅ ಇ ಎ ಕ ಗ).

ದಿಸಸೂತ್ರ ಪಲ್ಲವ ದರ್ಭಾಕ್ಷತೆ ರತ್ನ
ವಿಸರ ದರ್ಪಣ ಸರ್ವಧಾನ್ಯ
ಎಸೆದಿರೆ ಪೂರ್ಣಕಳಸವೇದಿಕೆಯೊಳು
ಪೊಸ ಬಗೆವೆತ್ತು ಮೆಱೆದುದು ೧೨೬

ಸಿರಿಖಂಡದ ಸಾದಿನ ಕಪ್ಪುರದ ಕ
ತ್ತುರಿಯು ಕುಂಕುಮದ ಕರ್ದಮದ
ಹರಿ ನೀಲ ರಜತ ಕನಕ ಮಣಿ ಶಶಿಕಾಂತ
ದುರುಥಾಜ[1]ನಂ[1]ಗಳೆಸೆದವು ೧೨೭

ಇಂತೆಸೆದಿರ್ಪ ಸಕಲಮಂಗಲವಸ್ತು
ಸಂತತಿಯಿಂದ ರಾಜಿಸುವ
ಕಾಂತವಿಲಾಸವೇದಿಕೆಯೊಳಾ ರಾಯನ
ಕಾಂತೆ ಸಂತಸ ಕೈಮಿಗಲು ೧೨೮

ಪಳಿ ಪಟ್ಟೆ ರನ್ನದ ಬಾಯಿನ ಕರ್ಪೂರ
ವ[2]ಳು[2]ಕು ವೀಳೆಯ ಪರಿಮಳವ
ಒಲಿದಿತ್ತಳವರಿವರೆನ್ನದೆ ಸುರಲತೆ
ಯಿಳಿದು ಬಂದಂತೆ ಭೂತಳಕೆ ೧೨೯

ಇಂತು ಮುತ್ತೈದೆಯರಿಗೆ ಪುಣ್ಯಾಂಗನಾ
ಸಂತತಿಗೆಳೆವೆಣ್ಗಳಿಗೆ
ಸಂತಸದಿಂ ರನ್ನಬಾಯಿನಗಳನಾ
ಕಾಂತೆಯಿತ್ತಳು ಕೈದಣಿ[3]ಯೆ[3] ೧೩೦

ನೂಲ ತೊಂಗಲ ನೂಪುರದ ರವೆಯದ ಹೊನ್ನ
ತೋಳಬಂದಿಯ ಮೇಖಲೆಯ
ಬಾಲಕಿಯರು ರನ್ನ [4]ಬಾಯಿನಗಳನಾಂತು[4]
ಲೀಲೆ ಕೈಮಿಗಲೆಯ್ದಿದರು ೧೩೧

ಮಿಂಚಿನ ಪಡೆಯಂತೆ ಕಡೆಗಣ್ಣ ಕಾಂತಿ ಪ
ಳಂ[5]ಚಲೆ[5]ಯಲು ದೆಸೆಗ[6]ಳನು[6]
ಪಂಚರತ್ನದ ಬಾಯಿನವಾಂತು ಬಂದರಂ
ದಂಚಿತಾಕ್ಷಿಯರು ಕೆಲಬರು ೧೩೨

---

[1] ನ (ಅ ಉ ಎ ಐ ಗ) [2] ೪ (ಅ) [3] ಯದೆ (ಅ) [4] ದ ಬಾಯಿನಂಗಳ (ಐ) [5] ಚಿ ಮೆಱೆಯೆ (ಎ ಗ) [6] ಳಿಗೆ (ಎ ಗ).

ಮಂಗಲಗೀತ ಮಹಾವಾದ್ಯರವ ಪು
ಣ್ಯಾಂಗನಾಶೀರ್ವಾದ[1]ಮೊದವೆ[1]
ಭೃಂಗಕುಂತಳೆಯರ ಪಿತೃಗಳು ಪೂರ್ಣಕುಂ
ಭಂಗಳನೆತ್ತಿ ಲೀಲೆಯೊಳು ೧೩೩

ಸಂತಾನಾಭಿವೃದ್ಧಿಗೆ ಪೊಯಿ ನೀರೆಱೆ
ವಂತಾ ಕುವರಗಂದವರು
ಸಂತಸ[2]ಮಿಗೆ ಕೈ[2]ಧಾರೆಯೆಱೆದರು ಭೂ
ಕಾಂತ ನಲಿಯೆ ಮನದೊಳಗೆ ೧೩೪

ಈ ತೆಱದಿಂ ಪಾಣಿಗ್ರಹಣಂಗೆಯ್ದು
ಭೂತಳಪತಿ ಯಾಚಕರಿಗೆ
ಪ್ರೀತಿ ಕೈಮಿಗೆ ವಸ್ತುವಾಹನವಿತ್ತು ಗು
ಣಾತಿಶಯವ [3]ತೋಱು[3]ಸಿದನು ೧೩೫

ಭೂದೇವರಿಗೆ ಭೂಮಿದಾನಗಳನು ಕ
ನ್ಯಾದಾನಗಳನು ಭೂಮೀಶ
ಆದರದಿಂದಿತ್ತು ಜಸವೆಣ್ಣ ಮದುವೆಯ
[4]ನಾ[4]ದನದೇನ [5]ಬಣ್ಣಿಪೆ[5]ನು ೧೩೬

*ತೆಂಕಣಗಾಳಿಯ ನಸುಸೋಂಕಿನಿಂ ಬಿಡ
ದಂಕುರಿಸುವ ಚೂತಲತೆಯ
ಸಂಕುಳದಂತೆ ವಧುಗಳು ರಾಮನ ಕಯ್ಯ
ಸೋಂಕಿನಿಂ ಪುಳಕವೆಯ್ದಿದರು ೧೩೭

ಅರಲಂಬುಗಳ್ಕೈದೊಂದೆ ಕಾಲದೊಳು ಬಂ
ದಿರದೆ ಸೋಂಕಿದ ತೆಱದಿಂದ
ತೆರೆ ಮಸಗಿದುದು ಮೆಯ್ಯೊಳು ರೋಮಾಂಚನ
ಧರಣಿಪತಿಯ ನಂದನನಗೆ ೧೩೮

---

1 ಮೊಳಗೆ (ಇ ಎ ಗ) 2 ಕೈಮಾಱೆ (ಇ ಉ ಎ ಗ) ಕೈಮಿಗೆ (ಐ)
3 ಕಾಣಿ (ಇ) 4 ಮಾ (ಅ ಎ ಗ) 5 ಪೇಳುವನು (ಉ ಎ ಐ ಗ) *(ಉ) ಪ್ರತಿಯಲ್ಲಿಲ್ಲ.

[1]ನವವಧುಗಳ ನರಪಾಲ[1]ನಂದನನನು
ವಿವರಿಸಿ ನೋಡಿ ಬಲ್ಲವರು
ಇವನಿವರಿಗೆ ತಕ್ಕ[2]ವನಿವ[2]ರಿವನಿಗೆ
ತವೆ ತಕ್ಕರೆಂದು ನಲಿದರು ೧೩೯

ಪಂಚಮಹಾವಾದ್ಯ ವೊಳಗೆ ಕಂಪಿಲನೃಪ
ಪಂಚಕಲ್ಯಾಣಮನೊಸೆದು
ಪಂಚೇಷುನಿಭರೂಪ[3]ಗೆ ಕುವರಗೆ[3] ಸುಪ್ರ
ಪಂಚದಿಂ ಮಾಡಿ ನಲಿದ[4]ನು[4] ೧೪೦

ಮರಕತ ಮಣಿಕುಂಡಲರಶ್ಮಿ ಕದಪಿನೊಳ್
ಪ[5]ರ[5]ಕಲಿಸಿರೆ ನೃಪಸುತನ
ಸುರುಚಿರವದನವೆಸೆದುದು ಶೈವಾಲಂ
ಬೊರೆದಂಬುಜದಂತೆ ಕಣ್ಗೆ ೧೪೧

ಅಂಗದಯುಗಳವಾ ಕುವರನ ಬಾಹುಯು
ಗಂಗಳೊಳಗೆ ಕಣ್ಗೆಸೆದವು
ಪಿಂಗದೆ [6]ವಿಜ[6]ಯಲಕ್ಷ್ಮಿಯ ಮ[7]ಣಿಮಯ[7]ವಿಷ್ಟ
ರಂಗ[8]ಳಂ[8]ತೇನ ಬಣ್ಣಿಪೆನು ೧೪೨

ಶರಣಾಗತವೈರಿಭೂಮಿಪವಜ್ರಪಂ
ಜರದಂತೆ ಕಣ್ಗೆಸೆದಿರ್ಪ
ವರಮಣಿ ಮಕುಟವಾ ರಾಜಕುಮಾರನ
ಶಿರದೊಳಗೊಂದಿ ಮೆಱೆದುದು ೧೪೩

ಉತ್ತಮಕೀರ್ತಿತೇಜಂಗಳ ಬಿತ್ತನು
ಹೊತ್ತ[9]ನೀ[9] ಕುವರನೆಂದೆನಲು
ಮುತ್ತುರನ್ನಗಳಿಂದ ಮೆಱೆವ ಕಂಠಿಕೆ ರಂಜಿ
ಸಿತ್ತು ಕೊರಲೊಳೇ[10]ವಣ್ಣಿಪೆನು[10] ೧೪೪

---

1 ನವವಧುಗಳನು ನರಪತಿ (ಅ ಇ ಎ ಗ) ಅವರ್ಯೈವರ ನರಪತಿ (ಉ)
2 ನವ (ಇ ಎ ಗ) 3 ಗೆ ಸತಿಯುರ (ಇ ಎ ಗ) ನ ಕುವರಗೆ (ಐ) 4 ರು (ಐ)
5 ರಿ (ಅ) 6 ಲೀಲೆ (ಐ) 7 ಣಿ (ಐ) 8 ದಂ (ಅ ಎ ಗ) 9 ನು (ಉ) 10 ನೆಂಬೆ (ಕ).

ಕಂಡು ಕುವರನ ಲಾವಣ್ಯವನುಱೆ ಬೀಳು
ಕೊಂಡು[1]ದು[1] ಕುಸುಮ ಸಾಯಕನ
ಗಂಡಗಾಡಿಯ ಗರ್ವವೆನೆ ರಾಮನ ರೂಪ
ಕೊಂಡಾಡುವರೆನ್ನಳವೆ ೧೪೫

ಪಿಂಡು[2]ಗಂ[2]ಕಣದುಲಿಪಂಗಜನೃಪಜಯ
ಡಿಂಡಿಮನಾದದಂತೆಸೆಯೆ
ಚಂಡವಿಕ್ರಮಗೆ ಚದುರೆಯ[3]ರು[3] ಚಾಮರ
ಮಂಡಳಿಯನು ಢಾಳಿಸಿದರು ೧೪೬

ತೊಡವುಗಳಾ ಕುವರನ ಮೆಯ್ಯ ಕಾಂತಿ[4]ಯಿಂ[4]
ಪಡೆದವು ಗುಣವನೆಂದೆನಲು
ನುಡಿಯಬಹುದೆ ನರಲೋಕ ಜಯಂತನ
ಕಡುಗಾಡಿಯ ಮೋಹನವ ೧೪೭

ರೂಢಿವಡೆದ ಕುವರನ ರೂಪಿನ ಗಂಡ
ಗಾಡಿಯ ಗಹಗಹಿಕೆಯನು
ನೋಡಿದರಾನಂದಿಸಿದರು ಪೌರರು ಬಾ
ಯ್ಗೂಡಿ ಬಣ್ಣಿಸಿ ಪೊಗಳಿದರು ೧೪೮

ತಮತಮಗೊಲಿದು [5]ಕೊಂಡಾಡೆ ಪೌರರು[5] ಭೂ
ರಮಣನ ಸುಕುಮಾರನಿಗೆ
ಸುಮುಹೂರ್ತದೊಳು ಯುವರಾಜಪಟ್ಟವನಾ
ಸಮಯದೊಳೊಲಿದು ಕಟ್ಟಿದರು ೧೪೯

ನಲಿಯೆ ನಂಟರು ಕೊಂಡಾಡೆ ಕೋವಿದರು ಮ
ತ್ತೊಲಿಯೆ ಸಾಮಂತಸಚಿವರು
ಬಲವೆಲ್ಲ ಬಣ್ಣಿಸೆ ಪಟ್ಟವ ಕುವರಗೆ
ನಲವಿನಿಂದರಸ ಕಟ್ಟಿದನು ೧೫೦

ಹೊತ್ತಹೊಱೆಯ ಕುಱಿತೆಡೆಯೊಳಿಳಿಪಿದನಂ
[6]ದೊ[6]ತ್ತಿಯಾಳುವ ರಾಜ್ಯಭರವ
ಪೆತ್ತಮಗನಿಗಿತ್ತು ಭೂವರನಾನಂದ
ವೆತ್ತನದೇನ [7]ಬಣ್ಣಿಪೆನು[7] ೧೫೧

---

[1] ದಾ (ಐ) [2] ಕಂ (ಐ) [3] ರ (ಐ) [4] ಯ (ಅ) ಯಂ (ಆ ಎ ಗ)
[5] ಪೌರರು ಕಂಪಿಲ (ಐ) [6] ತೊ (ಇ) [7] ಪೇಳುವೆನು (ಇ ಐ ಗ).

ಉರಿದವು ಕಂಭಗಳುಪ್ಪರಿಗೆಯು ನೆ[1]ಲೆ[1]
ಜರಿದವು ಗಗನ ಕೆನ್ನೀರ
ಸುರಿದುದು ರಿಪುಪುರ[2]ಗಳೊಳು[2] ಕುವರಗೆ ಭೂ
ವರನೀಯೆ ರಾಜ್ಯಭಾರವನು ೧೫೨

ಕಟ್ಟಿದ ಗುಡಿತೋರ[3]ಣಗಳುರಿ[3]ದವು ಕೂ
ಗಿಟ್ಟವು ಬಾಗಿಲರಿಗಳ
ಪಟ್ಟಣದೊ[4]ಳು[4] ರಾಜೇಂದ್ರಸಂತಸದಿಂದ
ಕಟ್ಟೆ ಕುವರಗೆ ಪಟ್ಟವನು ೧೫೩

ನೆಗೆದವು ಧೂಮಕೇತುಗಳು ತಾ[5]ರೆಗಳಂ[5]
ದೊಗೆದವು ಪಗಲೊಳರಿಗಳ
ನಗರದೊಳಗೆ ನರನಾಥನಾನಂದದಿಂ
ಮಗಗೆ ಕಟ್ಟಲು ಪಟ್ಟವನು ೧೫೪

ಮದುವೆಯ ಮಾಡಿ ಕುಮಾರಗೆ ಯುವರಾಜ
ಪದವಿಯನಿತ್ತು ಕಂಪಿಲನು
ಉದಧಿ [6]ವೇಷ್ಟಿತ[6] ಭೂಮಿ ಕೈಗೆ ಬಂದಂತತಿ
ಮುದವನೆಯ್ದಿದನೆದೆಯೊಳಗೆ ೧೫೫

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳ[7]ಗೆರಡ[7]ನೆಯ
ವಿದಿತಾಶ್ವಾಸದೊ[8]ಳ್ಮೂಱನೆಯ[8]ದು ಸಂಧಿ
ಮೃದುಪದಚಯ ಸಂಬಂಧಿ ೧೫೬

---

[1] ಲ (ಇ). [2] ದೊಳು (ಅ) [3] ಣಂಗಳುಲ (ಇ) ಣಂಗಳುರಿ (ಐ) [4] ಳಗೆ (ಇ ಎ)
[5] ರಗೆಗಳಂ (ಎ ಗ) ರೆಗೆಯಂ (ಐ) [6] ಪೂರಿತ (ಅ) [7] ಗೆಂಟ (ಇ) [8] ಳೆಂಟನೆಯ (ಇ)
* (ಅ ಎ ಐ ಕ ಗ) ಗಳಲ್ಲಿಲ್ಲ.

# ಒಂಬತ್ತನೆಯ ಸಂಧಿ

## ದಿವ್ಯಾಶ್ವ ಲಾಭ

ಈಶ್ವರನಾಣತಿಯಿಂದ ರಾಮಗೆ ದಿ
ವ್ಯಾಶ್ವ ಕೈಸೇರಿದುದೊ[1]ಸೆ[1]ದು

ರಾಮನಖಿಲಜನ ನಯನಾಂತರಂಗಾಭಿ
ರಾಮನಮಲತರ ಕೀರ್ತಿ
ರಾಮರಮಣ ಯಾಚಕ ಸುರಭೂಜಾ
ರಾಮನೆಸೆದನು ರಾಗದೊಳು ೧

ಗೆಲೆ ನನೆಗಣೆಯು ಕಣ್ಮಲರು ಕರ್ವಿನ ಬಿಲ್ಲ
ನಿಳಿಕೆಯ್ಯೆ ಪುರ್ಬವೆ[2]ವೀಥಿ[2]
ಸಲೆ ಸೋಲಿಸಲಳಿವೆದೆಯನಂಗಜನಂ
ತೆಳಸಿದನಾ ರಾಯಕುವರ ೨

ಆವೆಡೆ ಬಲುಬಂಟರುಂಟಾವೆಡೆ ಬಲು
ರಾವುತರುಂಟಲ್ಲಿಂದ
ಕೋವಿದರಿಂದ ಬರಿಸು[3]ವನಾ[3] ಕುವರ ನಾ
ನಾವಸ್ತುಗಳ ಕೊಟ್ಟು ಕಳುಪಿ ೩

ವಿತರಣದಿಂದ ವಿನಯದಿಂದ ವಿವಿಧವಾ
ಕ್ಚತುರತೆಯಿಂದ ಕುವರನು
ಕ್ಷಿತಿಯೊಳಗುಳ್ಳ ಮಹಾವೀರಭಟ[4]ರ ಸಂ[4]
ತತಿಯನೊಲಿದು ಕೂಡಿದನು ೪

ಹೇಡಿನೃಪಾಲರೊತ್ತಿನೊಳಿ[5]ರೆ ನ[5]ಮಗಿನ್ನು
ಖೋಡಿ ತಪ್ಪದು ಮುಂದಕೆಂದು
ನಾಡೊಳಗುಳ್ಳ ಬಿರಿದಿನ ಬಂಟರು ಬಂದು
ಕೂಡಿ[6]ತಾ ರಾಯಕುವರಗೆ ೫

---

[1] ಲಿ (ಉ)  [2] ವೀಥಿ (ಎ ಉ ಗ) ವೀದಿ (ಐ)  [3] ವಾ (ಇ ಉ ಎ ಗ) ಸುತ (ಐ)  [4] ಸಂ (ಎ ಗ)  [5] ರಲೆ (ಉ)  [6] ದರಾ ಕುವರನಿಗೆ (ಉ).

ಕೂಳಿನಾಸೆಗೆ ಖೂಳದೊರೆಗಳೊತ್ತಿನೊಳಿರೆ
[1]ಕೇ[1]ಳಬಾರ[2]ದ[2] ಕೊಱತೆಯನು
ಕೇಳದಿರೆವು ನಾ[3]ವಿನ್ನೆಂದವ[3]ಗೆ ಕ
ಟ್ವಾಳ್ ಕೈಸೇರಿತು ಬಂದು ೬

ಪೊನ್ನೀವ ಗಡ ತಪ್ಪ ಸೈರಿಪ ಗಡ ನೆರೆ
ಮನ್ನಿಪ ಗಡ ಕಾಳಗದೊಳು
ಬೆನ್ನೀಯ ಗಡ ರಾಮನೆಂದು ವೀರರು ಬಂದು
ಚೆನ್ನರಾಮನ ಪೊರ್ದಿದರು ೭

ಪರವಸ್ತುಗಳಿಗಾಟಿ[4]ಸ[4] ಗಡ ಪರವೆಣ್ಣ
ನಿರವ ನಿಟ್ಟಿ[5]ಸಿ[5] ನೋಡ ಗಡ
ಕರೆದೀವ ಗಡ ಕಲಿಗಳಿಗೆಂದು ಬಂಟರು
ಭರದೊಳವನ ಸೇರಿದರು ೮

ಪಂ[6]ತ[6]ವಱಿದು ಪಾಡಱಿದು ಬಂಟರ ಮಿಗೆ
ಸಂತೈಪ ಗಡ ಸಮರದೊಳು
ಪಿಂ[7]ತಿ[7]ಹನಲ್ಲ ಗಡೆಂದು ಕು[8]ವ[8]ರಗಂದ
ನಂತಭಟರು ಸೇರಿದರು ೯

ಪರಿಹಾಸಕನಲ್ಲ ಗಡ ಪರಗುಣಗಳಿ
ಗಿರದೆ ಮ[9]ಚ್ಚ[9]ರಿಪನಲ್ಲ ಗಡ
ಪರಿಹೃತಪರದಾರಕಥನಗಡೆಂದವ
ಗಿರದೆ [10]ವೀರರು[10] ಸೇರಿದರು ೧೦

ತೆಱನಱಿಯದೆ ಪೊಕ್ಕು ಬೆದಱಿ ಸಂಗ್ರಾಮದಿಂ
ಮುಱಿದೋಡಿ [11]ಬಂದು ಬಂ[11]ಟರಿಗೆ
ಕೊಱತೆಯಿಕ್ಕುವ ಕೊಲ್ಲಟಿಗ ದೊರೆಗಳ ಬಿಟ್ಟು
ನೆಱೆಗಲಿಗಳು ಸೇರಿತವಗೆ ೧೧

---

[1] ತಾ (ಅ ಇ ಎ ಐ ಗ) [2] ದು (ಅ ಇ ಉ) [3] ವಿನ್ನೆಂದವನಿ (ಇ) ವೆಂದ ವನಿ (ಐ) [4] ಸಂ (ಇ) [5] ಸ (ಇ) [6] ಥ (ಅ ಇ ಉ) [7] ತ (ಅ ಇ ಐ) [8] ಮಾ (ಇ ಐ) [9] ತ್ಸ (ಅ ಇ ಉ) [10] ಬಂಟರು (ಇ ಉ ಎ ಗ) [11] ಬಂದ ಭ (ಅ ಉ).

ಇಱಿದ [1]ಬಂ[1]ಟರಿಗೀಯಲಾಱದವರ ಮೇಲೆ
ಕೊಱತೆಯಿಕ್ಕುವ ಖೂಳನೃಪರ
ಜಱಿದೊಯ್ಯನೆ ಪೊ[2]ರ್ದಿ[2]ದರು [3]ಜಾತಿ[3]ವೀರರು
ನೆಱೆಗಲಿ ರಾಮನಾಥನನು ೧೨

ಬೇಡಿದುದನು ಕೊಟ್ಟಪೆವೆಂ[4]ದು ಸೇವೆಯ[4]
ಮಾಡಿಸಿಕೊಂಡು ಭಟರನು
ಖೋಡಿಗಳೆವ ಕೋಮಟಿಗ ದೊರೆಗಳ ಬಿಟ್ಟು
ಕೂಡಿತು ವೀರರಾಮನಿಗೆ ೧೩

ಒಳಗಱಿಯದೆ [5]ಹೊ[5]ಱಗಱಿಯದೆ ಬಂಟರ
ನಿಳಿಕೆಯ್ವ ಭಂಡನೃಪರನು
ಕ[6]ಳೆ[6]ದು ಕಲಿಗಳು ಬಂದರು ರಾಮನಾಥನ
ಬಳಿಗೆ ಬಹಳ ವಿಭವ[7]ದೊಳು[7] ೧೪

*ಇಳೆಯೊಳಗಣ ನೀರೆಲ್ಲ ಬಂದಂಬುಧಿ
ಯೊಳಪೊಗುವಂತೆ ಬೇಗದೊಳು
ನೆಲದೊಳಗಣ ವೀರಭಟರೈತಂದಾ
ಕಲಿರಾಮನ ಪೊರ್ದಿದರು ೧೫

*ಪರೆದ ಸುವರ್ಣಪರಾಗವಿತತಿ ರಸ
ದುರುಳಿಯ ಪಿಡಿವ ತೆಱದೊಳು
ಧರೆಯೊಳಗುಳ್ಳ ಕಾಲಾಳು ಮೇಲಾಳು ಬಂ
ದಿರದೆ ಪೊರ್ದಿದರು ರಾಮನನು ೧೬

ಚುಂಬಕಪನು ಸೂ[8]ಜಿ[8]ಗಳೆಯ್ತಂದವ
ಲಂಬಿಸುವಂತೆ ಕಲಿಗಳು
ಇಂಬಿ[9]ದ[9]ಹುದು ನಮಗೆಂದು ರಾಮನನಾ
ಡಂಬರದಿಂದ ಪೊರ್ದಿದರು ೧೭

ಘಳಿಗೆ ಘಳಿಗೆ ಝೂವ ಝೂವ [10]ತಪ್ಪದೆ ಹೊನ್ನ[10]
ತಳ್ತುವದೆ ಜೀವಿತಗೊಂಬ
ತುಳಿಲಾಳ್ಗಳಲ್ಲದೆ ರಾಮನ ಮೆಯ್ಗಾವ
ಲೊಳಗಿಲ್ಲ ಲೆಕ್ಕದಾಳುಗಳು ೧೮

---

[1] ಭ (ಅ) ಭಂ (ಇ ಉ ಎ ಗ) [2] ರ್ದ್ದಿ (ಇ) [3] ಬಂದು (ಎ ಗ) [4] ದಾಸೆಯ (ಐ) [5] ಪೊ (ಐ) [6] ಳೆ (ಅ ಐ) [7] ದಲಿ (ಇ ಎ ಗ) [8] ಚಿ (ಎ ಐ ಗ) [9] ದಿ (ಅ ಉ) [10] ಕೆ ದಿನ ದಿನ (ಉ) ದಿನಕೆ ದಿನ (ಐ). * (ಉ) ಪ್ರತಿಯಲ್ಲಿಲ್ಲ.

ಬಿರಿದನಿ[1]ಕ್ಕ[1]ದ ಬೀರಕೆ ಮೆಱೆಯದ ಬಲು
ಧುರಕೆ ಹೋರದ ರಾವುತರ
ನೆರವಿಯಿಲ್ಲಾ ರಾಮನೊಳಗೆನೆ ರಾಮಗೆ
ಧುರಕದಿರಹ [2]ರಾಯ[2]ರುಂಟೆ ೧೯

ರವಿಯ ಕುದುರೆಯುನಿಂದ್ರನ [3]ವಾ[3]ಜಿಯನತಿ
ಜವದಿಂದ ಜ[4]ಋ[4]ವ ತೇಜಿಗಳ
ನಿವಹವೆಸೆದವು ಕುವರನ ಮೈಯಾಗ್ವಲ
ತವಕದ ಬಲುರಾವುತರಿಗೆ ೨೦

ಸಾರ[5]ಸಕಲಲಕ್ಷಣಗುಣ[5]ದಿಂ ಪಂಚ
ಧಾರೆಯ ರೂಪುರೇಖೆಗಳ
ಚಾರುತೆಯಿಂ ರಾಜಿಪ ನೂಱಿಪ್ಪತ್ತು
ವಾರುವಗಳು ರಾಮ[6]ಗಿಹವು[6] ೨೧

ಆ ವಾರುವಗಳೊಳಗೆ ವೀರರಾಮಗೆ
ಮೂವತ್ತು ಜಾತ್ಯಶ್ವಗಳು
ಜೀವವಾಗಿಹವವಱಿರವ ಪೊಗಳುವ[7]ರೆ[7]
ರೇವಂತಗರಿದೊರ್ವರಳವೆ ೨೨

ಅರಮನೆಯೊಳಗಿರ್ಪುದೊಂದು [8]ಪ[8]ವಳವರ್ನ
ದುರುತರ ಜಾತ್ಯಶ್ವವದಱ
ಇರವನದವನಿಗೆ ಬಂದ ತೆಱನನಾ
ನೊರೆವೆ ಲಾಲಿಪುದು ಕೋವಿದರು ೨೩

ಅಂದಗಜೆಯ ಕೋಪದಿಂದೀಶ್ವರ ಪೋ
ಗೆಂದೆನೆ ಮರ್ತ್ಯಕರ್ಜುನನ
ನೊಂದು ನುಡಿಯಲವನವನನಾ ಪರಮನಿಂ
ತೆಂದು ನುಡಿದು ತಿಳುಪಿದನು ೨೪

ಹಿಂದೆ ನಿನ್ನಿಂದಳಿದಸುರರವನಿಗೆ
ಯ್ತಂದು ತುರುಕರಾಗಿ ಪುಟ್ಟಿ
ಕೊಂದು ಕೂಗಿ[9]ಡು[9]ತ್ತೈದರೆ ಮುಂದನಱಿಯದೆ
ಸಂದ ಮನುಜಲೋಕವನು ೨೫

---

[1] ಕ್ಕ (ಇ) [2] ಛಂಟ (ಇ) [3] ತೇ (ಐ) [4] ಋ (ಐ) [5] ಗುಣಲಕ್ಷಣ (ಐ) [6] ನಿಗೆ (ಅ ಉ) [7] ಡೆ (ಇ ಎ ಗ) [8] ಧ (ಐ) [9] ಡಿಸು (ಅ ಉ) ಡಿ (ಇ) ಸು (ಐ).

ದೇವಾಲಯಗಳನೊಡೆದು ಕೆಡಿಸಿದರು
ದೇವರ ಕಿತ್ತು ಧರಣಿಯ
ದೇವರ ಸತ್ಕರ್ಮಗಳ ಕೆಡಿಸಿದ[1]ರು ಧ
ರಾವಳಯದೊಳು[1] ದಾನವರು  ೨೬

ಅವರನಾಜಿಯೊಳಂತಕಪು[2]ರಿಗೆ[2]ಯ್ದಿಸಿ
ದಿವಿಜಕಾಮಿನಿ[3]ಯ ಗರ್ವವನು[3]
ತವೆ ಮುಱಿದೆಮ್ಮಲ್ಲಿಗೆಯ್ದೆಂದು ಪಾರ್ಥಗೆ
ಶಿವ ನುಡಿಯಲು ಕೃಪೆಯಿಂದ  ೨೭

ಅಂದಿನ ಬಿಲ್ಲಲ್ಲಂದಿನ[4]ರಥವಿ[4]
ಲ್ಲಂದಿನ [5]ಬಾಣ[5]ವಿಲ್ಲವರ
ಕೊಂದಿಕ್ಕು[6]ವಂದವೆಂ[6]ತೆಂದು ಹರಗೆ ನರ
ನಂದು ಬಿನ್ನಹವ ಮಾಡಿದನು  ೨೮

ಸುರರಾಜನ ದಿವ್ಯವಾಜಿ ಭೂತಳಕ್ಕವ
ತರಿಸಿ ನಿನಗೆ ದಾನವರ
ಧುರಕೆ ಸಹಾಯವಾದಪು[7]ದು[7] ನಿನಗೆ ಬಂ
ದಿರದೆ ಸೇರುವ ಸಮಯ[8]ದೊಳು[8]  ೨೯

ಮುರರಿಪುವಿನ ಶಾರ್ಙ್ಗ ನಕುಲನ ಬಲ್ಲೆಹ
ವರಸಹದೇವನ ಖಡ
ದೊ[9]ರ[9]ಕೊಂ[10]ಬವು[10] ನಿನಗೆಂದಗಜಾಪತಿ
ನರನ ಚಿತ್ತವ ತಿಳು[11]ಪಿ[11]ದನು  ೩೦

ಎನ್ನ ಕಯ್ಯೊಳಗೆ ಬೊಬ್ಬಿಡುವ ಬೊಮ್ಮನ ತಲೆ
ಯನ್ನೆಲಕೀಡಾಡಿಸಿ[12]ದ[12]
ನಿನ್ನ ಮಱೆವೆನೆ ಪೋಗೆಂದೀಶ ಪಾರ್ಥನ
ಮನ್ನಿಸಿ ಕಳುಪಿದನಿಳೆಗೆ  ೩೧

---

[1] ರು ಧರಾವಳಿಯೊಳು (ಅ) ರವರ್ಥೋರ್ವಳಯದೊಳು (ಐ) [2] ರಕ (ಐ)
[3] ಯೊರ್ವಳನು (ಇ ಎ ಗ) [4] ಬಾಣವಿ (ಐ) [5] ರಥ (ಐ) [6] ವುದೆಂ (ಉ)
[7] ದುದು (ಎ) ದದು (ಗ) [8] ದಲ (ಐ) [9] ರೆ (ಐ) [10] ಬುವುದದು (ಇ)
ಬುದದು (ಎ ಗ) [11] ಹಿ (ಅ) [12] ದುದನು (ಎ ಗ).

ಬಳಿಕ ಬಾಂದೊಱೆ[1]ದಾ[1]ಳ್ದನ ದಿವ್ಯದೇ[2]ಹವ[2]
[3]ತ್ರಿಳಿ[3]ದು ನಿಟ್ಟಿಸಿ ದೇವ ನಿನ್ನ
ಇಳಿಗೆ ಬೇಗದೊಳೆನ್ನ ಬರ್ಪಂತೆ ಮಾಡೆಂ
ದಿಳಿದನಿಳೆಗೆ ಫಲುಗುಣನು ೩೨

ಕರೆದೀಶ್ವರನಿಂ[4]ದ್ರನ[4] ನಿನ್ನ ಮಗನ ಸಂ
ಗರಕೆ ನಿನ್ನ[5]ಶ್ವಾಂಶ[5]ವನು
ಧರಣಿಯೊಳಗೆ ಪುಟ್ಟಿಸೆನೆಯುವನದನಾ
ದರದೊಳಂಗೀಕರಿಸಿದನು ೩೩

ಬಳಿಕ ಬಲಾರಾತಿ ನಿಜತುರಗಾಂಶವ
ಕಳುಪಲೀಶ್ವರನಾಜ್ಞೆಯಿಂದ
ಇಳೆಗವತರಿಸಿ ವನಾಯು ದೇಶದೊಳದು
ಘುಳಿಲನೆ ಬಂದು ಪುಟ್ಟಿದುದು ೩೪

*ಅರಲಿರ್ದೆಡೆಯೊಳಿರ್ದು ಪರಿಮಳವನು ದಿಗ್ವಿ
ಸರಕೆ ಕಳಿಪುವಂತಾ ತುರಗ
ಸುರಲೋಕದೊಳಿರ್ದು ತನ್ನಂಶವನಾ
ಧರೆಗೆ [6]ಕಳುಪಿ ಪುಟ್ಟಿಸಿದುದು[6] ೩೫

†ತರಣಿಯು ಬಿಟ್ಟು ಕಿರಣ ಕುಸುಮವ ಬಿಟ್ಟು
ಪರಿಮಳವೆಯ್ದುವಂದದಲಿ
ಸುರತುರಗವ ಬಿಟ್ಟದಱ ಭಾಗ ಬಂದೀ
ಧರಣಿಯೊಳಗೆ ಜನಿಸಿದುದು ೩೬

ನೂಱಾಱು ಕುದುರೆಯ ತ[7]ಲೆ[7]ಗುದುರೆಯ ರೂ[8]ಪ[8]
ಮೀಱಿ ಪೊಗಳಲಳವಲ್ಲ
ಮೂಱು ಲೋಕದ [9]ಚೆಲ್ವ ತಲೆಗುದುರೆಯ ಕ[9]
ಣ್ಣೂಱಿ ಪೊಗಳಲೊರ್ವರಳವೆ ೩೭

---

[1] ಯಾ (ಉ) [2] ಹಾಮ (ಎ ಐ ಗ) [3] ತಳೆ (ಅ ಎ ಗ) [4] ದ್ರ (ಅ ಇ ಉ)
[5] ಯು ಅಶ್ವ (ಎ ಗ) [6] ಪುಟ್ಟಿಸಿ ಕಳುಪಿದುದು (ಅ ಉ) [7] ಲ (ಅ) [8] ಪು (ಐ)
[9] ಕಲಿಗುದುರೆಯ ಚೆಲ್ವ ಕ (ಅ ಉ) ಚೆಲ್ವ ತಲೆಗುದುರೆಗೆ ಕ (ಎ ಐ ಗ). * (ಉ) ಪ್ರತಿಯಲ್ಲಿಲ್ಲ. † (ಐ) ಪ್ರತಿಯಲ್ಲಿಲ್ಲ.

ತಲೆ ಮೊಗ ಪೆಗಲು ಕೊರಲು ಕಕ್ಷ ವಕ್ಷ
ಸ್ಥಲ ಜಾನು ಜಂಘೆಗಳಿರವ
ಸಲೆ ಪೊಗಳುವರಳವಲ್ಲೆನಲದಕೀ
ನೆಲದ ವಾಜಿಗಳು ಪಾಸಟಿಯೆ　　　೩೮

ಪವಳವರ್ಣವ ಗೆಲೆ ಮೈವಣ್ಣ ಪವನನ
ಜವ ಮಿಗೆ ಚೆಲ್ವಚಿತ್ರದೊಳು
ಪವಣಿಸಿ ಬರೆದ ಕುದುರೆಯನೇಳಿಸಲದ
ಱವಯವದಿರವನೇನೆಂಬೆ　　　೩೯

†ಬಾಯ ಪರಿಮಳ ಬಾವನ್ನಗಂಪಿಗೆ ಸಮ
ವಾ[1]ಯಿಕಾ[1]ರಣವಾಗೆ ನಟಿಸೆ
ಕಾಯದ ವಿನ್ಯಾಸಗುರುವೆನಲದಱ ವಿ
ಡಾಯವನೇನ ಪೇಳುವೆನು　　　೪೦

*ಅಂಚೆಯ ಕಣ್ಣನಲ್ಲೆನಿ[2]ಸಿ[2] ಕಣ್ಗಳು ಕಾರ
ಮಿಂಚನೇಳಿಸಲವಯವದ
ಚಂಚಲತೆಗಳೆನಲದ ಪೊಗಳು[3]ವರೆ[3] ವಿ
ರಿಂಚಿಗಲ್ಲದೆ ನರರಳವೆ　　　೪೧

ಮಿಱಿದ ಚಲ್ವಲಕ್ಷಣಗಳಲ್ಲದೆ ಮೇ
ಲೇಱಲೀಯದೆ ವಾಹಕರ
ದೂಱಿಗೀಡಾಗಿ ದುಷ್ಟಾಶ್ವವೆನಿಸಿಕೊಂಡು
ತೋಱುಗುದುರೆಯಾಗಿಹುದು　　　೪೨

ಊಳಿಗದವರಲ್ಲದೆ ಪೊಸಬರ ಮೆ
ಯ್ಗಾಳಿ ಸೋಂಕಲು ಖುರದಿಂದ
[4]ಪೋ[4]ಳು ಮಾಡುವುದವನಿಯನಾಕಾಶಕೆ
ಧಾಳಿಯಿಡುವುದು ಕಾಲಿಂದ　　　೪೩

---

[1] ಯುಕ (ಐ)　[2] ಸೆ (ಐ)　[3] ವಡೆ (ಎ ಐ ಗ)　[4] ಪಾ (ಎ ಗ).
†(ಉ) ಪ್ರತಿಯಲ್ಲಿಲ್ಲ　* ಈ ಪದ್ಯ ಮುಗಿದಮೇಲೆ (ಇ) ಪ್ರತಿಯಲ್ಲಿ,
ತರುಗಿರಿಗಳನೆಲ್ಲ ನೊಸಲಲಕಾವಳಿ
ಮೆಱೆದುದು ನುಣ್ಮೊಗವದಱ
ಮಱುದುಂಬಿವಿಂಡಿನಿಂ ಬಳಸಿದಂಭೋಜನ
ತೆಱನಂತೆಳೆವಿಸಿಲನೊಳು
ಈ ಪದ್ಯ ಇದೆ, ಬೇರೆ ಯಾವ ಮಾತೃಕೆಯಲ್ಲಿಯೂ ಇಲ್ಲ.

ಬಂದು ನೋಡುವರು ಬಾಯ್ನೀರೊಱೆವರು ಗಂ
ಡಂದವ ನೋಡಿ ಕುದುರೆ[1]ಗೆ[1]
ವಂದನೆಯನು ಮಾಡುವರು ಬೆನ್ನ ಕೊಡದಿರೆ
ನೊಂದು ಪೋಗುವರ್ಧವನಿಪರು ೪೪

ಖಾನ ವಜೀರ ಮಲ್ಲುಕರಾ ಕುದುರೆಯ
ಮಾನವಿನ್ಯಾಸವ ನೋಡಿ
ಆನಂದವಡೆದೆದೆಯೊಳು ಬೆನ್ನ ಕೊಡದಿರೆ
ಮಾನಸದೊಳು ಮಱುಗುವರು ೪೫

*ಸು[2]ರು[2]ತಾಳರು ನೋಡಿ ಕರ್ತಾರಗಲ್ಲದೆ
ನರರ್ಗಿದು ಯೋಗ್ಯವಲ್ಲೆಂದು
ಕರವ ನಡುವಿಗಿಕ್ಕಿ ಶಿರವ ಬಾಗುವರೆನ
[3]ಲ[3]ರವನೇನೆಂಬೆ ನಾನದಱ ೪೬

ಅಲ್ಲಿಗಲ್ಲಿಗೆ ಶೂಕಳಾಶ್ವವನದ ಭೂ
ವಲ್ಲಭರಿಗೆ ತೋಱುಸುತ
ನಿಲ್ಲದೆ ತೆಂಕಣ ದೆಸೆವಿಡಿದೆಯ್ದಿದ
ಬಲ್ಲದನೋ[4]ರ್ವ[4] ಪರದನು ೪೭

ಇಕ್ಕೆಲದೊಳು ಕಬ್ಬಿ[5]ಯೊಳು[5] ಕಟ್ಟಿ ನೇಲುತಿ
ರ್ಪಕ್ಕಿನ ಗುಂಡುಗಳಿಂದ
ದಿಕ್ಕು[6]ದಿಕ್ಕಿನ ಹಗ್ಗದ ಹೊಟೆಯಿಂ[6]ದತಿ
ಕಕ್ಕಸ[7]ದಿಂ[7] ನಡೆಯಿಪರು ೪೮

ಕಾಲಿಂದ ನೆಲನ ಪೊಯ್ದಾಡೆ ಪಿಡಿಗಲ್ಗಳಂ
ಮಾಲೆಯಾಡಿದ ತೆಱದಿಂದ
ಮೇಲೆಸೆದಿಹವಂಬರದೊಳೆನಲದಱ ಕ
ರಾಳತನವನೇನನೆಂಬೆ ೪೯

---

1 ಯ (ಇ ಎ ಗ) 2 ರಿ (ಇ) 3 ರಿ (ಇ ಐ) 4 ಡಿ (ಇ) 5 ಯ (ಇ)
6 ದಿಕ್ಕುಗಳ ಹಗ್ಗಗಳ ಹೊಟೆಯಿಂ (ಇ ಉ ಐ) ದಿಕ್ಕುದಿಕ್ಕಿನ ಹಗ್ಗದ ಹೊಟದಿಂ (ಅ)
7 ದೊಳು (ಐ). * (ಉ) ಪ್ರತಿಯಲ್ಲಿಲ್ಲ.

ಬಾಲ[1]ವನದು ಬೀಸಿದೊಡೆ[1] ಮರಮೊಳೆಗಳ
ಜಾಲವೆಸೆದುದಂಬರದೊಳು
ಭೂಲೋಕದಿಂದ ನಂದನಕೆಯ್ದುವ ತರು
ಮಾಲೆಯಂತೇನ[2]ಬಣ್ಣಿಪೆನು[2] ೫೦

ಶ್ವಾಸಾನಿಲನೆಸಗಿದೊಡೆ ಜಂಝಾವಾಯು
[3]ಬೀ[3]ಸಿದಂತಿಹುದು ಹನುಮಿಸೆ
ವಾಸವಗರ್ಜನದಂತಿಹುದದರ ಕ
ಟ್ಟಾಸುರವನು ಪೇಳ್ವೆನೇನ ೫೧

ಧಾರುಣಿಯನು ಖುರದಿಂದಪ್ಪಳಿಸೆ ಬಿಲ
ದ್ವಾರದಂತಿ[4]ಹವು[4] ಕುಳಿಗಳು
ಆರಭಿವರ್ಣಿಸಲಳವಾ ವಾರುವ
ನಾರಭಟೆಯ ವೃತ್ತಿಯನು ೫೨

ಮುಚ್ಚಿದಂತಾಲಿಸು[5]ವ[5]ದು ಮುಱಿದಂತೆ ಕ
ಣ್ಮುಚ್ಚುವುದದು ದೆಸೆದೆಸೆಗೆ
ಬಿಚ್ಚುವುದುಱೆ ಬೆಚ್ಚು[6]ವ[6]ದು ಬಿಡ[7]ದೆಳೆವುದಂ
ದಚ್ಚಿಗ[7]ಗೊಳಿಪುದವರನು ೫೩

ಕಚ್ಚಿಡುವುದು ಮರಮೊಳೆಗಳ ಕಲ್ಗಳ
ನುಚ್ಚುನೂಱಾಗಿ [8]ಪೋಳು[8]ವುದು
ಮಚ್ಚರಿಸುವುದು ಮಲೆವುದಾ ರಾಮನ
[9]ಮಚ್ಚಿ ಜಾನಿಪುದು ಮನದೊಳು[9] ೫೪

ಎಂಟುದಿಕ್ಕಿನ ಹಗ್ಗಗ[10]ಳನೊ[10]ತ್ತಿ ಪಿಡಿ[11]ದೀ
ರೆ[11]ಂಟಾಳು [12]ಧ್ವನಿಗಯ್ಯೆ ಬಳಿಕ[12]
ಉಂಟಿಲ್ಲವೆಂಬಂತಡಿಯನಿಕ್ಕುವುದದು
ತುಂ[13]ಟ[13]ಗುದುರೆಯೆಂಬಂತೆ ೫೫

---

[1] ದಿಂದದು ಬೀಸಿದೊಡೆ (ಇ ಐ) ದಿಂ ಬಾಜಿಬೀಸಿದಡೆ (ಇ ಉ ಎ ಗ) [2] ಪೇಳು ವೆನು (ಐ) [3] ವೀ (ಐ) [4] ಹುದು (ಇ ಉ ಗ) [5] ವು (ಎ ಐ ಗ) [6] ವು (ಐ) [7] ದೆಳೆವುದಂದಚ್ಚೆ (ಅ) ದೆಳೆವುತಲಚ್ಚಿ (ಎ) ದೆಳೆವುತಲಚ್ಚಿಗ (ಐ) [8] ಪೊಯ್ಯು (ಉ) ಸು (ಎ ಗ) ಮಾಡು (ಐ) [9] ಮೆಚ್ಚಿ ಧ್ಯಾನಿಪುದಾ ತುರಗ (ಇ) [10] ಳೊ (ಐ) [11] ದಿರೆಂದೆ (ಅ) ದಿರಲೆಂ (ಉ) ದಿರೆಎಂ (ಗ) [12] ಗಳು ದನಿಮಾಡೆ (ಐ) [13] ಟು (ಐ).

*ಗೋ[1]ವರ[1] ಸಹಣಿಗಳಬ್ಬರ ದೆಸೆದೆಸೆಗಳ
ತೀವಿರಲಾ ಕುದುರೆಯನು
ಸಾವಧಾನತೆಯೊಳು ತಂದೆಯ್ದಿಸಿದನು
ಗೋವೆಯನಾ ವಣಿಗ್ವರನು ೫೬

*[2]ದ[2]ಬ್ಬುಕೆ ಪಾಳಾಸ ದೆಸೆ[3]ಮಿಳಿ ಚೆಲ್ಲಹ[3]
ಕಬ್ಬಿ ತಾಪಣೆ ಮೇಲಕ್ಕೆ
ಉಬ್ಬಲೀಯದ ಕಬ್ಬುನದ ಗುಂಡು ಪಾಡಿಗ
ಳಬ್ಬ ರ[4]ವಿ[4]ರೆ ಸುಮ್ಮನಿಹುದು ೫೭

ಬಿಸಿಲಕುದುರೆಯಂತೆ ಚಿತ್ರದ ತುರಗದಂ
ತೆಸೆದಿಹುದದು ಕ[5]ಣ್ಗಳಿಗೆ[5]
[6]ಪ[6]ಸಿದ ಪೆರ್ಬುಲಿಯಂತೆ ಸಿಂಹದಂತಿರದೆ ಗ
ರ್ಜಿಸುವುದೊತ್ತಿಗೆ ಬರೆ ನರರು ೫೮

ವೀರರುದ್ರನ ಸಹಣಿಗಳು ನೋಡಿದ[7]ರದ[7]
ವೀರಬಲ್ಲಾಳನ ಮನೆಯ
ಭೂರಿವಾಹಕರು ನೋಡಿದರದಱೊ[8]ತ್ತನು[8]
ಸೇರಲಮ್ಮದೆ [9]ತಿರು[9]ಗಿದರು ೫೯

ಒತ್ತಿಗೆ ಸೇರಿ ಮೈದಡವಿದ ಸಹಣಿಗೆ
ಹತ್ತು ಸಾವಿರ ಟೆಂಕೆಯನು
ಇತ್ತಪೆವೆಂದು ವಜೀರಮಲ್ಲುಕರು ನೋ
ವುತ್ತ ಮನದೊಳೆ[10]ಯ್ದುವ[10]ರು ೬೦

ಕೇಳಿದನಾ ವಾರ್ತೆಯ ರಾಮನಾಥನು
ಪೇಳಿದ[11]ನೊಸೆದು ರಾಯನಿಗೆ[11]
ಆಲಿಸಿ ಮಗನ ನುಡಿಯನಾ ನರಪತಿ
ಯಾಳಿದನಾನಂದಾಬ್ಧಿ[12]ಯೊಳು[12] ೬೧

---

[1] ವ (ಇ ಎ ಗ) [2] ಡ (ಐ) [3] ಮಿಳಿ ಚಲ್ವಹ (ಅ) [4] ವಿ (ಇ ಐ ಗ) [5] ಣ್ಗೆ ಚಿತ್ರ (ಇ ಎ ಗ) [6] ಹ (ಅ ಇ ಉ) [7] ರಾ (ಐ) [8] ತ್ತಿಗೆ (ಐ) [9] ತೊಲ (ಇ ಎ) [10] ಯ್ದಿದ (ಇ ಎ ಗ) ಯ್ದುತಿಹ (ಉ) [11] ನಶ್ವವಿಕ್ರಮವ (ಇ ಎ ಗ) [12] ಯನು (ಇ ಎ ಗ). *(ಉ) ಪ್ರತಿಯಲ್ಲಿಲ್ಲ.

ಶೂಕಳಾಶ್ವವನದ[1]ನೆಂತೇ[1]ಖಿದಪೆ ನಿನ್ನ
ಜೋೕಕೆಗದೆಂತು ಬಂದಪುದು
ಲೋಕದ ನರನಾಥರೊಲ್ಲದ ಕುದುರೆಯ
ದೇಕೆ ನಿನಗೆ ಪೇಳು ಮಗನೆ ೬೨

ಬೆನ್ನ ಕೊಟ್ಟ[2]ರೆ[2] ಸಾಕು ನಿನಗೆದು ಬೇಡಿದ
ಹೊನ್ನ[3]ಕೊಟ್ಟ[3]ದ ಕಟ್ಟಿಕೊಡುವೆ
ಮನ್ನಿಪುದಲ್ಲ ಗಡದು ಸಹಣಿಗಳ ಸಂ
ಪನ್ನ ಗಡದು ದುರ್ಗುಣದೊಳು ೬೩

ನೋಡುಗುದುರೆಯಲ್ಲ[4]ದದು[4] ಸಂಗರಭೂಮಿ
ಗೀಡಹ ಕುದುರೆಯಲ್ಲ ಗಡ
ಕೇಡಹುದದಱಿಂದ [5]ನಿನಗೆ ನೀನದಱಿ[5] ಮಾ
ತಾಡಬೇಡೆಲೆ ಮಗ ರಾಮು ೬೪

ಎಂದು ನುಡಿ[6]ದ[6] ತಂದೆಯ ಕಿವಿಯೊತ್ತಿಗೆ
ಬಂದೇಕಾಂತದೊಳವನು
ಅಂದತಿ ಭೀತಿಭಕ್ತಿಯೊಳು ಕೈಗಳ ಬಾಯ್ಗೆ
ತಂದು ಬಿನ್ನೈಸಿದನಿಂತು ೬೫

ಬಂದಪೆ ಗೋವೆಯೊಳೊಂದಶ್ವ [7]ನೀನ[7]ದ
ಱಿಂದ ಭೂಮಿಯ ರಾಯರನು
ಮುಂದುಗೆಡಿಸಿ ಸು[8]ರುತಾಳ[8]ಬಲವ ಹಿಂದು
ಮುಂದು ಮಾಡುವೆ ದಂಡು ಬರಲು ೬೬

ಕೊಡದದು ಬೆನ್ನ ಭೂಮಿಯ ರಾಯರಿಗೆ ನಿನ್ನ
ನುಡಿಗೇಳದ ಮುನ್ನ ನಿನಗೆ
ಅಡಿಯಾದಪುದೊಳಗಾದಪುದದ ನೀನು
ತಡೆಯದೆ ತರಿ[9]ಸೆ[9]ದಱೊಡೆಯ ೬೭

ಬಾಳೊಂದನು ಬಲ್ಲೆಹವೊಂದನು ಶರ
ಜಾಲಸಹಿತ ಶಾರ್ಙ್ಗವೊಂದ
ಲೀಲೆಯಿಂದೀವನು ನಿನಗವಱಿರವನು
ಪೇಳ್ವೆ ಮಗನೆ ಕೇಳೆಂದು ೬೮

---

[1] ನೆಂತ (ಇ ಐ ಗ) ನೇ ಕೇ (ಉ) [2] ಡೆ (ಉ ಗ) [3] ನಿತ್ತ (ಇ ಎ ಗ)
[4] ದೆ (ಐ) [5] ನಿನಗಿನ್ನದಱಿ (ಉ) ನನಗೆ ನೀನದಱಿ(ಐ) [6] ವ (ಐ) [7] ನಿನಗೆ (ಅ)
[8] ರುತ್ರಾಣ (ಉ) ರತಾಳ (ಎ ಗ) [9] ಸಿ (ಎ).

ಇಂದು ರಾತ್ರಿಯೊಳಿಂದುಶೇಖರ ಕನಸಿಗೆ
ಯ್ತಂದು ಮಹಾಕೃಪೆಯಿಂದ
ನಿಂದು ನಿರೂಪಿಸಿದನು ನಗುತೆನಗೆಂದು
ತಂದೆಗವನು ಪೇಳಿದನು ೧೯

ಇಂತು ಕನಸ ಪೇಳಿದ ನಿಜತನುಜನ
ಸಂತಸ ಮಿಗಲಪ್ಪಿಕೊಂಡು
ಮುಂತಣ ಬವರಕಿನ್ನ[1]ಳು[1]ಕಿಲ್ಲವೆಂದು ಭೂ
ಕಾಂತ ನಲಿದನೆದೆಯೊಳಗೆ ೨೦

ಬಳಿಕ ಕರೆದು ನೃಪನಾ ಸ್ವಪ್ನವನು ಮಂತ್ರಿ
ಗೊಲಿದು ಪೇಳಲು ನಲಿದವನು
ಬಲುಸಹಣಿಗಳ[2]ನು ರಾಯಭಾರಿಗಳನು
ಕಳುಪಿದನಾ ಗೋವೆಗಂದು[2] ೨೧

ಉಡುಗೊಱೆ ಬಿ[3]ಳಿ[3]ಯೆಲೆಯಡಕೆ ಕಜ್ಜಾಯಗ
[4]ಳಿಡಿದ ಕಂಬಿಗಳಾ[4] ತುರಗದ
ಒಡೆಯಗೆ ತೆರಳಿದ[5]ವಾ[5] ರಾಯಭಾರಿಗ
ಳೊಡನಾ ಮಂತ್ರಿಯಾಜ್ಞೆಯೊಳು ೨೨

ಪಾವುಡಗಳ ತೆ[6]ರಳಿ[6]ಸಿಕೊಂಡು ನಾಲ್ಕೈದು
ಗಾವುದಗಳ ದಿನದಿನಕೆ
ಓವದೆ ನಡೆದು ಬಂದವರು ಪೊಕ್ಕರು ಬೇಗ
ಗೋವೆಯ ಬಲುಪಟ್ಟಣವನು ೨೩

ಬಂದು ಕಂಡರು ಮೇಲವರಾ ಕುದುರೆಯ
ಬಂದಿಕಾಱ[7]ನನು[7] ಬೇಗದೊಳು
ತಂದ ಪಾವುಡಗಳನೊಪ್ಪಿಸಿದರು ಮೇಲೆ
ಬಂದ ಕಾರ್ಯವನು ಪೇಳಿದರು ೨೪

ತೋಱಿಲಾ ಕುದುರೆಯನವ[8]ಸ[8]ವರಿಗೆ ಕ
ಣ್ಣೂಱಿ ನಿಟ್ಟಿ[9]ಸಲವರ[9]ದನು
ಪಾಱಿತದಱ ದುಷ್ಟತನ ಹೇಷಾರವ
ಮೀಱಿತದಕೆ ಮೇಲೆ ಮೇಲೆ ೨೫

---

[1] ಳಿ (ಅ ಉ) [2] ಕಳುಪಿದನು ಗೋವೆಯ ಬಲುಪಟ್ಟಣಕವನಂದು (ಇ ಎ ಗ) [3] ಡಿ (ಅ) [4] ಳಡಿಕಿದ ಕಂಬಿ (ಇ ಎ) ಳಿಡಿದ ಕಂಬಿಗಳ (ಅ ಐ) [5] ನಾ (ಅ) [6] ಗಯಿ (ಇ) [7] ನ (ಇ) [8] ರ (ಇ) [9] ಸಿ ನೋಡಲ (ಅ ಐ).

ಒತ್ತಿಗೆ ಸೇರಿದೊಡೊಪ್ಪಿಸಿದುದು ಮೆಯ್ಯ
ನೆತ್ತಿ ಬಾಲವ ಗುಡಿಗಟ್ಟಿ
ಮತ್ತೆ [1]ಬಲನ ನೋಡಿ[1]ದುದು [2]ಘುಲಘುಲವೆಂ[2]
ದಿತ್ತುದು ಮುದವನವರಿಗೆ ೭೬

ನಲಿದರು ರಾಯಭಾರಿಗಳು ಸಹಣಿಗಳಂ
ದುಲಿದ[3]ನಾ ಕುದುರೆವರದನು[3]
ನಲವೇಱದನು ನರೇಂದ್ರಪದವಿ ಕರ
ತಳಕೆ ಬಂದಂತೆ ಪೆರ್ಚಿದನು ೭೭

ಕರೆಯಲೊಡನೆ ರಾಯಭಾರಿಗಳೊಡನಾ
ಪರದ ಪಯಣಗತಿಯಿಂದ
ಭರ[4]ದೆ[4] ಪೊಕ್ಕನು ಹೊಸದುರ್ಗವನ್ನವನನು
ಕರೆದು ಕಂಪಿಲ ಮನ್ನಿಸಿದನು ೭೮

ಪಡಿಬೀಡಾರದಿಂದುಡುಗೊಱೆಯಿಂದ ಮೆ
ಲ್ನುಡಿಯಿಂದವ[5]ನ[5]ನು ಸತ್ಕರಿಸಿ
ನಡುವಗಲಿಳಿಯೆ ನಂದನಗೂಡಿ ನರನಾಥ
ತಡೆಯದೋಲಗಕೆಯ್ದಿದನು ೭೯

ಕರೆಯಿಸಲಾ ವಾರುವನ ಕೊಂಡಾ ವಣಿ
ಗ್ವರನೆಯ್ದಿದನೋಲಗವನು
ತುರಗದಂಗೋಪಾಂಗಲಾವಣ್ಯಲಕ್ಷಣ
ದಿರವ ನಿಟ್ಟಿಸಿದನರಸನು ೮೦

ಮನದೊಳು ಗುಡಿಗಟ್ಟಿ ತನುಜನ ಮೊಗವನಂ
ದನುನಯದಿಂ ನೋಡಲವನು
ಜನಕನಿರವನಱಿದೊಯ್ಯನೊಯ್ಯನೆ ಬಂದಾ
ಘನತುರಗವ ಸೇರಿದನು ೮೧

ಗಾರುಡಿಗನ ಕಂಡ ಘಟಸರ್ಪನಂತಾ
ವಾರುವನವನ [6]ನಿಟ್ಟಿ[6]ಸುತ
ಕ್ರೂರತೆಯನು ಬಿಟ್ಟು ಬಲ[7]ವ[7] ನಿಟ್ಟಿಸುತ ಹೇ
ಷಾರವವನು ಮಾಡಿದುದು ೮೨

---

[1] ಬಾಲವನೋಡಿ (ಇ ಎ ಗ) ಬಲನನೊಡ್ಡಿ (ಐ) [2] ಲಘುಲಘುಯೆಂ (ಇ ಎ ಐ) [3] ರಾ ಕುದುರೆವರದರು (ಇ ಎ ಗ) [4] ದಿ (ಎ ಉ ಐ) [5] ರ (ಅ ಇ ಉ ಎ ಗ) [6] ನೀಕ್ಷಿ (ಇ ಉ ಎ ಗ) [7] ನ (ಉ ಐ).

ನೋ[1]ಡುತ[1] ರಾಮನ ಮೊಗವನು ದುಷ್ಟತೆ
ಯೋಡಿತು ನೆಲನ ಕಾಲಿಂದ
ಕೂಡೆ ಕೆರೆದು ಹನುಮಿಸಿತಿಂದ್ರ[2]ನ[2] ಕಂಡ
ಗಾಡಿ ಕೈಸೇರಿ[3]ತಂದದಕೆ[3] ೮೩

ಚಪ್ಪರಿಸಿದನು ಕಂದವ ಮೊಗವನು ಬಿಗಿ
ಯಪ್ಪಿಕೊಂಡನು ಮುದ್ದಿಸಿದನು
ಕರ್ಪುರಗಂಧವನು[4]ರಕೊಟ್ಟಿಸಿದನ[4]ದ
ಟಿಪ್ಪುವ ಪದಕೆ ಮಣಿದನು ೮೪

ಪರದನಾನಂದದಿಂ ಪರವಶ[5]ವೋ[5]ದನಂ
ದರಸನೆರ್ದೆಯೊಳು ಪೆರ್ಚಿದನು
ಪರಮಹರುಷವನೆಯ್ದಿದನು ಬೈಚಪ್ಪನು
ತುರಗ ರಾಮನಿಗೊಳಗಾಗೆ ೮೫

ಪಾನಕ ತುಪ್ಪ ಸಕ್ಕರೆ ರೊಟ್ಟಿಯಿಂದ ಸ
ನ್ಮಾನಿಸಿ ಸಹಣಿಗಳದಕೆ
ಜೀನವೆ[6]ಸದ[6] ಹಲ್ಲಣವ[7]ನು[7] ಹಾಯ್ಕಿದ
ರಾ ನರನಾಥನೊರೆಯಲು ೮೬

ಮಿಸುನಿಯ ಟಂಕೆ ಸೇರಿದ ಮೊಗಮುಟ್ಟಿನ
ಮಿ[8]ಸಿ[8]ಕಿಯನಾ ವಾಹಕರು
ಒಸೆದು ಸೇರಿಸಿದರಿ[9]ಳಿಯದೇ[9]ಱದಂತೆ ಕ
ಣ್ಗೆಸೆಯಲಾ ಜಾತಿತುರಗಕೆ ೮೭

ನೆತ್ತಿ[10]ಪೆ[10]ಂಚಕದೊಳೆಸೆವ ಕಟ್ಟಾಣಿಯ
ಮುತ್ತಿನ ಕುಚ್ಚುಗಳಿಂದ
ಒತ್ತಿ ಸೇರಿಸಿದ ರನ್ನದ ಖಡೆಯಗಳಿಂದ
ಮತ್ತೆ ಕಣ್ಗೆಸೆದುದಾ ವಾಜಿ ೮೮

---

[1] ಡಿತು (ಐ) [2] ನಂ (ಐ) [3] ದಂದದಲಿ (ಅ ಉ) [4] ರೆ ಕೊಡಿಸಿದನ (ಉ) ರ ಕೊಟ್ಟುಶಿರಕದ (ಇ ಎ ಗ) [5] ವಾ (ಐ) [6] ಸರ (ಅ) ಸೆವ (ಉ ಐ) ಸೆದ (ಇ ಎ ಗ) [7] ತಂದು (ಇ ಉ ಎ ಐ ಗ) [8] ಸು(ಇ ಉ ಗ) [9] ಳೆಯದೆ (ಅ) [10] ಪ (ಅ ಇ ಉ ಎ ಗ).

*ಪೆಂಗೆಜ್ಜೆ ಘಂಟೆ ಮುತ್ತಿನ ಬೀದಿಯ ಜೀನ
ಸಿಂಗರ [1]ಲೋವೆಯನದ[1]ಱ
ಅಂಗದೊಳಗೆ ಸಂಗಡಿಸಲಾ ದಿ[2]ವ್ಯ[2]ತು
ರಂಗ ಕಣ್ಗೆಱೆ ರಾಜಿಸಿದುದು ೮೯

ನೋಡಿದರರಸುಗಳಾ ಕುದುರೆಯ ಗಂಡ
ಗಾಡಿಯ ಗಮಕದೇಳಿಗೆಯ
ನಾಡಾಡಿಯಲ್ಲಿದು ದಿವ್ಯಾಶ್ವವೆಂದು ಕೊಂ
ದಾಡಿದರೊಸೆದು ಬಾಯ್ಗೂಡಿ ೯೦

ಹರಿಪೀಠದಿಂದರಿಕರಿಹರಿಕಂಪಿಲ
ನಿರದೆಳ್ದು ಲೀಲೆ ಕೈಮಿಗಲು
ಭರದಿಂದ ಕುದರೆಯೋಱಾಟದೆಡೆಗೆ ಬಂದ
ನರಸು ಮೋಹರದೊಳಳ್ತಿಯೊಳು ೯೧

ಬಂದೊಯ್ಯನೆ ರಾಮನಾಥನ [3]ವದನಾರ[3]
ವಿಂದವ ನೋಡೆ ಕಂಪಿಲನು
ಅಂದು ಕಯ್ಯೆರಡಱಿಂ ಪಿಡಿದು ಪೊಂಗಳ ಬಲ
ವಂದಾ ಕುದುರೆಯ ಕಾಲ್ಗೆ ೯೨

ಪಿಡಿಪೊಂಗಳನಿಕ್ಕಿ ಮಣಿದು ಮನ್ನಿಸಿ ಮೊಗ
ದಡವಿ ಮೆಲ್ಲಗೆ ಬೆಂಗೆವಾಯ್ದು
ನಡೆಯಿಸಿ ನಲವೇಱಿ[4]ಸಿ[4] ಕಂದವ ತಟ್ಟಿ
ಬಿಡದೆ [5]ದ[5]ಟ್ಟಿಸಿ ತೋಱಿಸಿದನು ೯೩

ಒಡನೊಯ್ಯನೆ ಗಜವೇಡೆಯದೊಳಗದ
ಬಿಡದೆಬ್ಬಿಸಿಕೊಂಡು ಬಂದು
ತಡೆಯದೆ [6]ಸುಟ್ಟಾಸುಟ್ಟಿ[6]ಯೊಳಗೆ ಬಿಟ್ಟು
ಪೊಡವಿಯ ಬರೆ[7]ದ[7] ಬೆರಲೊಳು ೯೪

ಪರಿವೇಷಮಧ್ಯದ ಚಂದ್ರನೆರಳೆಯಂ[8]ತೆ[8]
ಪರಿಮಂಡಲಾಕೃತಿ[9]ವ[9]ಡೆದ
ಬೆರಲರೇಖೆಯೊಳು ಮೆಱೆದುದಾ ರಾಮನ
ತುರ[10]ಗವಾ ವೇ[10]ಡೆಯದೊಳಗೆ ೯೫

---

1 ಲೇಪೆಯನದ (ಅ ಉ) ನೆದೆಯೊನಲದ (ಇ) 2 ತ್ಯ (ಅ) 3 ವೊಗವಾರ (ಅ ಐ) 4 ಸಿದ (ಐ) 5 ಥ (ಉ) 6 ಸೂಠಾಸೂಠಿ (ಇ ಉ ಎ) 7 ದು (ಇ) 8 ತಾ (ಇ ಎ ಗ) 9 ಯೊ (ಉ) 10 ಗಾವೇ (ಎ ಐ) *(ಉ) ಪ್ರತಿಯಲ್ಲಿಲ್ಲ.

ನಿಡುಗೊಳ್ಳಿಯ ಸುತ್ತ ಬಳಸಿ ಬೀಸಿದವೋಲು
ಬಿಡದೆ ಕುಲಾಲಚಕ್ರವನು
ಪಿಡಿದು ತಿರುಪಿದಂತೆ [1]ವೇಡೆಯುವ[1]ದು ಕಣ್ಗೆ
ಕಡುರಯ್ಯವಾಗಿ ತೋಱಿದುದು ೯೬

ಅಡ್ಡಹಾಯ್ಕಿದನಾ ಕುದುರೆಯ ಕುವರ ಕ
ಯ್ಯೊಡ್ಡುದಪ್ಪದೆ ಸಂಚಿನಿಂದ
[2]ಎ[2]ಡ್ಡವಾಯ್ತುದು ಕಣ್ಗೆ ಕೊಲ್ಲಟಿಗ[3]ನು[3] ಕಯ್ಯ
ನೊಡ್ಡದೆ ಕರಣವಾಯ್ದಂತೆ ೯೭

ಭರದಿಂದ ನೂಕಿ ಮುಗುಚಲಾ ಹಯ ಶಿರ
ವೆರಡ ಧರಿಸಿ ನಿಂದಂತೆ
ಕರಮೆಸೆದುದು ರಾಯ ಕುವರನೇಱಾಟದ
ಪರಿಯನದೇನ ಬಣ್ಣಿಪೆನು ೯೮

ಆರೈದು ದೆಸೆಗವದೆಸೆಗೊದೆಯಲು[4]ಕಟ್ಟಿ[4]
ಹಾರಿ ರಾವುತ್ತನೆಂ[5]ತ[5]ಂತೆ
ಕಾರಮಿಂಚಿನ ಪೊಳಪೆಂತಂತೆಸೆದುದಾ
ವಾರುವನಾ ಕಳದೊಳಗೆ ೯೯

ಒಡೆಯುದೆ ಲಗ್ಗೆ ಬಿಡದೆ[6]ಪಾವುಸಡಗರ[6]
ವೆಡೆಯುಡುಗದೆ[7]ಜವ[7]ಗೆಡದೆ
ತಡೆಯುದೆ ನೂಱೆಂಟಾಳ ಮೇಲದು ಪೊಕ್ಕು
ದೊಡನೊಡನೇನ [8]ಬಣ್ಣಿಪೆನು[8] ೧೦೦

ರಸೆಗಿಳಿದುದೊ [9]ತನ್ನ[9]ಮುಂಬಂದ ಸಗ್ಗದ
ದೆಸೆಗೆಯ್ದಿದುದೊ ವಾಯುವಿನ
ಬಸುಱೊಳು ಪೊಕ್ಕುದೊ ಯೆನಲ[10]ದು ಸಾಗಿ[10]ದು
ದೊಸೆದು ಹರಿಯಬಿಡಲವನು ೧೦೧

---

[1] ಆಯೆಡೆಯ (ಇ ಎ ಗ) [2] ಗೆ (ಅ) [3] ನ (ಇ ಉ ಎ ಐ ಗ) [4] ಕಟ್ಟ (ಇ ಎ ಗ) [5] ಬ (ಐ) [6] ಸರವೇಢೆಯ (ಉ) [7] ದೆಸೆ (ಐ) [8] ಪೇಳುವೆನು (ಅ) [9] ತಾಂ (ಇ ಎ) [10] ದೆಸಗಿ (ಎ ಗ) ದುಪಾರಿ (ಉ).

ಇಳಿದು ಬಂದೆತ್ತಿ ಕೈಗಳ ಮುಗಿದಾತ್ಮಜ
ನಳವ ನಿಟ್ಟಿಸಿ ಸಂತಸದ
ಜ[1]ಲ[1]ನಿಧಿ[2]ಯಲಿ[2] ಮಿಂದು ಮಾ[3]ಣ್ದನೆ[3] ಭೂಪತಿ
ತಳೆದನಾನಂದಾಶ್ರುವನು ೧೦೨

ಬಳಿಕಾ ಕುದು[4]ರೆಯ[4]ಫುರದಗರಸುಗಳು
ತಳೆದಿದರ್ಾಭರಣಸಂಕುಳವ
ಇಳೆಯಾ[5]ಣ್ಮ[5]ನೊಲಿದು ಬಿಟ್ಟನು ಬಹುವಾಡವ
ನಲವನೇನೆಂಬೆನಾನವನ ೧೦೩

ಜನನಾಥನಾ ವಣಿಗ್ವರಗುಡುಗೊಱೆಯಿತ್ತು
ವಿನಯೋಕ್ತಿಯಿಂ[6]ದ ಸತ್ಕರಿಸಿ[6]
ಮನವೊಲಿದೆಯ್ತಂದು ಪೊಕ್ಕನಂದಿರದರ
ಮನೆಯನಿಂದ್ರೈಶ್ವರ್ಯದೊಳು ೧೦೪

ಬಳಿ[7]ಕ ದಿನಾವಸಾನ[7]ದೊಳೊಯ್ಯ[8]ನೊಯ್ಯನೆ[8]
ತಳರ್ದನರಸು ಚಾವಡಿಗೆ
ಜಳಧಿ ಮೇರೆಯ ಮೀಱಿದಂತೆ ನೃಪಾಲಕ
ರೊಲಿದೋಲಗಕೆಯ್ದಿದರು ೧೦೫

ಇಕ್ಕಿದ ಕುಂಡಲ [9]ಯೆ[9]ಕತಾಯಿ ಪೈರಣಿ
ಸುಕ್ಕುಗುಪ್ಪಸ ಕಿಱುವೆರಲ
ಚೊಕ್ಕಮುದ್ರಿಕೆ [10]ಚೆಲ್ವುವೆತ್ತಿ[10]ರಲಾಸ್ಥಾನ
ವೊಕ್ಕ[11]ನಾ[11] ಮಂತ್ರಿತಿಲಕನು ೧೦೬

ಬಳಿಕ ಬರಿಸಿ ಕುದುರೆಯ [12]ಸಾದಗಾಱಿ[12]ನ
ಬೆಲೆ[13]ಯೇನೀ ವಾಜಿಗೆ[13]ನಲು
ಬಲುಮೆಯನುಳಿದು ಪುಸಿಯು[14]ನಿಳಿಕೆಯ್ದಿಂತು[14]
ನೆಲೆವಾತ ನುಡಿದ ಸಚಿವಗೆ ೧೦೭

---

[1] ಳ (ಇ) [2] ಯೊಳು (ಇ ಎ ಐ ಗ) [3] ಱದೆ (ಇ ಎ ಐ ಗ) [4] ರೆ (ಅ ಉ ಎ ಐ) [5] ಳ್ಮ (ಐ) [6] ದುಪಚರಿಸಿ (ಐ) [7] ಕ ದಿನಾವಸಾಲ (ಅ) ಕೊಂದು ದಿನವಾಸ (ಇ ಎ ಗ) [8] ನೆ ಬಂದು (ಐ) [9] ಯ (ಐ ಗ) ವೆ (ಇ) [10] ಚೆಲುವಡದಿ (ಐ) [11] ನು (ಇ) [12] ಸೌಧಾಗಾಱಿ (ಐ) ಸೌದಾಗಾಱಿ (ಇ ಎ) ಸೌದೆಗಾಱಿ (ಅ) ಸಾದಾಕರ (ಉ) [13] ಯೀವಾಜಿಗೆಂದೆ (ಇ) ಯೀವಾಜಿಗೇನೆ (ಗ) [14] ನಿಳಿಕೈದವ (ಐ) ನುಳಿಕೆಯ್ದಿಂತು (ಗ).

ಪುಸಿಯೇಕೆ ನಿಮ್ಮವರೆಯ್ತಂದು ಬೇಗ[1]ದಿ[1]
ಮುಸುಡು[2]ದೋಱಿದಡಿದ ನಾನು[2]
ಮಿ[3]ಸಿಮಿಲಿ[3]ಮಾಡಿ ಕಂ[4]ಡಿರಿಸಿ[4]ಕ್ಕ ಪೋಗುವೆ
ನೊಸೆದೆನ್ನ ರಾಜ್ಯಕ್ಕಮಾತ್ಯ ೧೦೮

ಬೆಲೆಯೇತಕೀ ಕುದುರೆಗೆ ಮಂತ್ರಿ ಕೇಳು ಕಂ
ಪಿಲಭೂಮೀಶ್ವರನೆನಗೆ
ಒಲಿದಿತ್ತ ಬಹುವಾಡದ ರತ್ನದೊಡಿಗೆಯೆ
ಬೆಲೆಗಿಂದ ಯಿಮ್ಮಡಿಯಲ್ತೆ ೧೦೯

ಎನೆ ಮೆಚ್ಚಿ ರಾಯನಾ ಪರದಗೆ [5]ಬೆಲೆಯೆಂ[5]
[6]ದನುವದಿಸದೆ ಬೇಗ[6]ದೊಳು
ವಿನಯದಿಂದಿತ್ತನು ಹತ್ತು ಸಾವಿರ ಹೊನ್ನ
ಮನವೊಲಿದುಡುಗೊಱೆ[7]ವೆರಸು[7] ೧೧೦

ಪರಮಸಂತೋಷಮನೆಯ್ದುತಾ ಪರದನು
ಕರೆದು ರಾಯನನು ರಾಮನನು
ಒರೆದನೇಕಾಂತದೊಳಾ ತುರಗದ ಜನ್ಮ
ದಿರವನಾ ಮಂತ್ರಿಯ ಮುಂದೆ ೧೧೧

*ಈ ಸಿಂಗಾಡಿಯೀ ಖಡ್ಗವೀ ಬಲ್ಲೆಯ
ವೀಸು ಸಹಿತ [8]ಹು[8]ತ್ತಿನೊಳಗೆ
ಓಸರಿಸದೆ ಪುಟ್ಟಿತೀ ವಾಜಿಯೆಂದಾಣೆ
[9]ಗೋಸ[9]ಣೆಯಿಂದೊಪ್ಪಿಸಿದನು ೧೧೨

ಈ ಸಿಂಗಾಡಿಯೊಳೆಚ್ಚಡೆ ಕಣೆ ನಾಲ್ಕು
ಸಾಸಿರ ಮಾರಾಂತ[10]ರವ[10]
ಓಸರಿಸದೆ [11]ಪೋ[11]ಪುದು ನೋಡಿದಱ ವಿ
ಲಾಸವನೆಂದು ಪೇಳಿದನು ೧೧೩

---

[1] ದಿಂ (ಐ) [2] ಗಾಣಿಸದೊಡಿದನು (ಅ) ದೋಱಿದಡದ ನಾನು (ಐ) [3] ಸುಮಿಲ್ಲಿ (ಇ) [4] ಡಿರಿಯಿ (ಅ) ಷೆರಿಸಿ (ಇ) ಡಿರದಿ (ಉ) [5] ಬಲರೆಂ (ಇ ಎ ಐ) ಛಲರೆಂ (ಗ) [6] ದನು ವಂದಿಸಿ ವಿನಯ (ಐ) ದುನನುವದಿಸುತ ಬೇಗ (ಇ ಎ ಗ) [7] ವೆರಸಿ (ಇ ಉ ಐ) ಸಹಿತ (ಕ) [8] ಪು (ಉ) [9] ಘೋಷ (ಅ ಇ ಉ ಎ ಗ) [10] ವರ (ಐ) [11] ಪೋಗಿ (ಇ ಎ) ಪೋದ (ಐ) * ಈ ಪದ್ಯದಿಂದ ಮುಂದೆ ೧೧ನೆಯ ಸಂಧಿಯ ೨೨ನೆಯ ಪದ್ಯದವರೆಗೆ (ಅ) ಪ್ರತಿಯಲ್ಲಿ ಗ್ರಂಥಲೋಪ.

ಪೊಡೆದೊಡೀ ಖಡ್ಗದಿಂ ಪಾರೆಗಳೆನದಿ
ಕ್ಕಡಿಯಹವೀ ಬಲ್ಲೆಯುಕೆ
ಪಡಿಯಿಲ್ಲ [1]ತಿ[1]ವಿದೊಡಾನುವ [2]ಪಾಸಟಿ[2]ಯೆಂ
ದೊಡನೆ ಕೊಟ್ಟನು ರಾಮುಗವನು ೧೧೪

ಆ ಕೊಂಬುವಿಲ್ಲಿನ ಖಡ್ಗದ ಬಲ್ಲೆಯ
ದಾ ಕಡುಸತ್ವದೇ[3]ಳ್ಗೆಯನು[3]
ಭೂಕಾಂತಮಂತ್ರಿಗಳಿದಿರಿನೊಳಾ ರಾಮು
ನೇಕಾಂತದೊಳು ತೋಱಿಸಿದನು ೧೧೫

ನಲಿದು ಮನದೊಳವನೀಶ್ವರ ಪರದಂ
ಗೊಲಿದಿತ್ತು ಮತ್ತುಡುಗೊಱೆಯ
ತಳುವದೆಮ್ಮಲ್ಲಿಗೆ ಬರುತ ಬಾರಶ್ವಸಂ
ಕುಳವ ಕೊಂಡೆಂದು ಸತ್ಕರಿಸಿ ೧೧೬

ಅವನ ಕಳುಪಿದನಂದತ್ತಲೊಯ್ಯನೆ ಶತ್ರು
ಭುವನದೊಳಗೆ ಶಸ್ತ್ರಜಾತಿ
ತವಕದಿಂ ತ[4]ಲೆ[4]ಕೆಳಕಾದವಶ್ವಂಗಳ
ನಿವಹ ಕಣ್ಣೀರ ಕಱೆದವು ೧೧೭

ನೆಲೆವಾಡಗಳು ನೆಗ್ಗಿದವು ಮಾಳಿಗೆಗಳಂ
ದೊಲೆದವು ಮಣಿಲೋವೆಗಳು
ನೆಲಕಿಳಿದವು ರಿಪುಭುವನದೊಳಾ ವಾಜಿ
[4]ವೊ[4]ಲಿದು ರಾಮುಗ ಕೈಸೇರೆ ೧೧೮

ಅರಮನೆಯೊಳಗಿರ್ಪ ಪವಳವರ್ಣದ ದಿವ್ಯ
ತುರಗದ ಕಥನವಿದೀಗ
ಒರೆವೆನು ಮುಂತಣ ಕಥೆಯುನಾಲಿಪುದಾ
ದರದಿಂದ ರಸಿಕಜನಗಳು ೧೧೯

*ಇದು ಪರದಾರಸೋದರರಾಮನಾಥನ
ಪದಕೃತಿಯೊಳಗೆರಡನೆಯ
ವಿದಿತಾಶ್ವಾಸದೊಳ್ನಾಲ್ಕನೆಯದು ಸಂಧಿ
ಮೃದುಪದಚಯಸಂಬಂಧಿ ೧೨೦

---

[1] ತೀ (ಅ ಇ ಎ ಗ) [2] ಪಾಸಟಿ (ಉ ಎ ಐ ಗ) ಸಾಟಿ (ಎ ಗ) [3] ಳಿಗೆಯ
ಇ (ಎ ಉ ಗ) [4] ಯೊ (ಇ). *(ಎ ಐ ಗ) ಗಳಲ್ಲಿಲ್ಲ.

†ಇದು ಯದುಕುಲಾಮಾತ್ಯವಂಶದೊಳಗುದಯಿಸಿದ
ಸದಮಲಯಶೋವಿರಾಜಿತ ವಿಜಯನೃಪತನುಜ
ವಿದಿತವಿತರಣವಿನಯವಿಕ್ರಮವಿಭಾಸಿಯೆಂದೆನಿಪ
[ಮಾಧವನಾಮನ
ಉದರಾಬ್ಧಿಭವಚಂದ್ರ ನಂಜುಂಡನೊಲಿದೊರೆದ
ಕದನಕಲಿಕಾಲಕಪಿಕೇತು ಕಲಿ ಶುಚಿ ರಾಮ
ನುದಿತಕೃತಿಬಂಧದೊಳ್ ಮೃದುಪದನ್ಯಾಸದೊಳಗಾಶ್ವಾಸ
[ವೆರಡನೆಯದು ೧೨೧

---

†(ಇ) ಯಲ್ಲಿಲ್ಲ.

# ತೃತೀಯಾಶ್ವಾಸ

(ಒಂದನೆಯ ಸಂಧಿ)

## ಹತ್ತನೆಯ ಸಂಧಿ

### ಹುಳಿಹೇರು ಕಾಳಗ

**ಸೂಚನೆ : ಜಾಯಿಲಗಳ ಕತದಿಂ ರಾಮ ಬಲ್ಲಾಳ
ರಾಯನ [1]ರಾಜ್ಯವಿಳುಹಿದನು[1]**

ಬಲ್ಲಾಳನ ರಾಜ್ಯ ಬಣಬೆ ಕಂಪಿಲಭೂ
ವಲ್ಲಭನಾಳು ಭಾವಿಸಲು
ಬಲ್ಲಿದ ಬಸವಗಳಾಗಿ ಪಚುಹಿದು ತಿಂದು
ನಿಲ್ಲದೆ ಮೆಲ್ಕು ಮಾ[2]ಡುವವು[2] ೧

ಬಿಡದೆ ಸಂಬಳವ ಗದ್ಯಾಣವ ಕೊಂಬರು
ಪಿಡಿದು ಧನಿಕರ ಧನವನು
ಜಡಿದು ತೆಗೆದುಕೊಂಬರು ಕಂಪರಾಯನ
ಗಡಿಯುವರಾ ರಾಜ್ಯದೊಳಗೆ ೨

ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲ
ಬೇಟೆಯ ನಾಯ ಪಿಡಿವರು
ಲೂಟಿಮಾಡುವರು ಹೊಯ್ಸಳ[3]ದೊಳದಟ[3]ರ ಕಾ
ಲಾಟ ಕೈಮೀಱುರುತಿಹುದು ೩

ಅಟ್ಟ ಕೂಳುಟ್ಟ ವಸನ ತೊಟ್ಟ ಭಂಗಾರ
ಕಟ್ಟಿ[4]ದರ್[4] ಕೀಳಾ[5]ಯ[5]ತಗಳು
ಧಿಟ್ಟಕಂಪಿಲನ ಬಂಟರಿಗೆನೆ ಹೊಯ್ಸಳ
ದಟ್ಟು[6]ಳಿ[6]ಯನು ಪೇಳ್ವೆನೇನ ೪

---

[1] ನೆಲನ ನಡಿದನು (ಇ) ನೆಲನನಿಱುಹಿದನು (ಉ) [2] ಡಿದವು (ಇ) ಡುವುದು (ಎ ಗ) [3] ರೊಳಗವ (ಇ ಎ ಗ) ದೊಳವ (ಉ) [4] ದ (ಇ ಎ ಗ) [5] ಯಿ (ಗ) [6] ಳಿ (ಎ ಗ).

[1]ದ[1]ಕ್ಕ ಹಿಡಿವರು ಪಶುಗಳ ಮನೆಯ ಕನ್ನ
ವಿಕ್ಕುವರರರದೆ ಪುರಗಳ
ಹೊಕ್ಕಿಱಿವರು ಹೊಯ್ಸಳದೊಳು ರಾಮನ
ಸೊಕ್ಕಿದ ಗಡಿಯ ಮನ್ನೆಯರು ೫

[2]ಹುಳಿಹೇರೆಂಬೊಂದು[2] ಪೆಸರಗ್ರಹಾರದೊ
ಳಳವುಳ್ಳ ಜಾತಿಜಾಯಿಲನ
ಬಳಗವಿರಲು ರಾಮನಾ ವಾರ್ತೆಯ ಕೇಳಿ
ಕಳುಪಿದ ಚರರನಾ ಯೆಡೆಗೆ ೬

ಬಂದವರಾ ಪುರದಧಿಕಾರಿಯ ಮುಂದೆ
ನಿಂದು ರಾಮನ ರಾಯಸವನು
ತಂದುಕೊಡಲು ನೋಡಿಕೊಂ[3]ಡ[3] ನವರಿಗಿಂ
ತೆಂದನು ಕೋಪದಿಂದವನು ೭

ನಾಕು ಸುತ್ತೆತ್ತ ಕೊಲೆಗೆ ಖಡ್ಗಮುದ್ರೆ[4]ಯು[4]
ದೇಕೆ [5]ನಾನಿ[5]ದಕಂಜಿ ತನಗೆ
ಬೇಕಾದ ಜಾಯಿಲಗಳ ಕಳುಪಿದಡೆಮ್ಮ
ಭೂಕಾಂತನೆನಗೆ ಮುನಿಯನೆ ೮

ಜಾಯಿಲಗಳ ಬೇಡುವರೆ ದೂತರನೆಮ್ಮ
ರಾಯನ ಬಳಿಗಟ್ಟುದೆ[6]ನ[6]ಗೆ
ರಾಯಸ ಗಡ ನಾನಿದ[7]ಕೀ[7]ವಣ ಗಡ
ನಾಯಿಗಳನು ಚಿತ್ರವಲ್ತೆ ೯

ತನ್ನ ಬಿ[8]ರು[8]ದಿನೋಲೆಗಂಜಿ ಜಾಯಿಲಗಳ
[9]ನ[9]ನ್ನೊಡೆಯನ ಕೇಳ[10]ದಾ[10]ನು
ತನ್ನವರೊಡನಟ್ಟುವಣ ಗಡ[11]ಮೀ ಕಜ್ಜ
ಕಿ[11]ನ್ನೆಣೆಯಿಲ್ಲ ಭೂಮಿ[12]ಯಲಿ[12] ೧೦

---

[1] ಬೆ (ಉ ಎ ಗ) [2] ಹಳ್ಳಿಹಾರೇವೊಂದು (ಎ ಗ) ಹುಳಿಹೋರೆವೊಂದು (ಇ) ಹುಳಿಯಡರೆಂಬೊಂದು (ಕ) [3] ಡದ (ಇ) ಡವ (ಕ ಗ) [4] ಯಿ (ಊ ಎ ಕ ಗ) [5] ನಾವಿ (ಕ) ತಾನಿ (ಐ) [6] ನಮ (ಎ ಗ) [7] ಕಿಱು (ಇ) ಕೇ (ಉ) [8] ರಿ (ಇ ಐ) [9] ತ (ಎ ಐ) [10] ದದ (ಇ) [11] ಮಿಕ್ಕದಕಿ(ಇ) ಮೀ ಕಜ್ಜಮಿ (ಎ ಐ ಗ) [12] ಯೊಳು (ಇ ಉ ಎ ಗ).

ಬಲ್ಲಾಳರಾಯನ ರಾಜ್ಯಕೆ ತಾನೇನು
ವಲ್ಲಭನೇ ನಾನು ತನ್ನ
ಪಳ್ಳಿಯು ಗೌಡನೆ ಯೆಂದು ಮಾತಿನ ಬಾಳಿ
ನಲ್ಲ ಕೊಯ್ದನು ಮೂಗನವರ ೧೧

ನಿಮ್ಮ[1]ಗಡಿಯುವರೆಮ್ಮ[1] ರಾಜ್ಯದೊಳತಿ
ಹಮ್ಮಿನಿಂ ಹರಿದಾಡುವುದನು
ನಮ್ಮ ರಾಯನು ಕೇಳಿ ಕೋಪಾಟೋಪದ
ಬಿಮ್ಮಿನಿಂ ಮೆಯ್ಮಱ[2]ದಹನೆ[2] ೧೨

ಇಂದು ನಾಳಿನೊಳೆಮ್ಮ ರಾಯಕೋಪದೊಳೆತ್ತಿ
ಬಂದು ನಿಮ್ಮಯ ಠಾ[3]ಣೆಯ[3]ಗಳ
ಮುಂದುಗೆಡಿಸದಿರನೆಂದವರೊಡನವ
ನಂದು ನುಡಿದ[4]ನು ಬಿಱುಬನು[4] ೧೩

ಸು[5]ರಿತಾಳ್[5] ರಾಜಕಾರ್ಯಕೆ ಸುತ್ತಣರಸುಗ
ಳಿರಬೇಕೆನಗೆಂದು ನಿಮ್ಮ
ಹರಿದಾಟ[6]ಮ[6]ಸೈರಿಸಿ[7]ದನಲ್ಲದೊಡೆ[7]ಮ್ಮ
ನರಪತಿಗೆಣೆಯೆ ನಿಮ್ಮವರು ೧೪

ಬೆಟ್ಟವೇಱಿದ ಗರ್ವದಿಂದೆಮ್ಮ ರಾಜ್ಯವ
ನಟ್ಟುಳಿಯನು ಮಾಡುವುದನು
ಕಟ್ಟರಸಿನ್ನು ತಾಳನು ಸೈರಿ[8]ಸನೆಂದು[8]
ದಟ್ಟಿಸಿ ನುಡಿದನವರನು ೧೫

[9]ಲೆಂ[9]ಡಪುಂಡರ ಕೂಡಿಕೊಂಡು ರಾಜ್ಯವ [10]ನೀ
ವಂ[10]ಡಲೆವುದ[11]ನೆಮ್ಮ ರಾಯ[11]
ಕಂಡು ಸೈರಿಸುವನೆ ತುರು[12]ಕ[12]ದಂಡಿಗೆ ಕೆಳೆ
ಗೊಂಡಿರ[13]ಬೇಕ[13]ಲ್ಲದೊಡೆ ೧೬

---

[1] ವದಿರುಗಳೆಮ್ಮಯ (ಇ) ಯ ಗಡಿಯುವದಿರೆಮ್ಮ (ಐ) ಗಡಿಯುವಂದಿರೆಮ್ಮ (ಎ ಗ) [2] ದಿಹನೆ (ಇ) ದಿಹನು (ಎ) ದಿದನು (ಗ) [3] ಣ್ಯ (ಇ) ಣಯ (ಎ ಗ) [4] ಬಿಱುನುಡಿಯ (ಉ) [5] ರತಾಳ (ಇ) ರತಾಣ (ಉ) [6] ವ (ಇ ಉ ಎ ಗ) [7] ದೊಡಲ್ಲದೊಡೆ (ಉ) ದನಲ್ಲಿದೆನ (ಐ) [8] ಸಿಯೆಂದು (ಇ) ಸಿವೆಂದು (ಉಎಗಚಟ) ಸನೆಂದು (ಐ) [9] ಲಂ (ಉ ಕ) [10] ನಿರದಂ (ಇ ಎ ಗ) [11] ನಮ್ಮರಸ (ಐ) [12] ಕರ (ಇ) [13] ಬೇಕೆಂದ (ಇ ಎ ಕ ಗ).

ಕಡಲ್ಗಳ ಮೂಱಿನಾಳುವ ರಾಯ[1]ಗೆ[1] ಮಿಕ್ಕ
ಗಡಿಯ ಮನ್ನೆಯರು ಪಾಸಟಿಯೆ
ಕಡುಮುಳಿದೆತ್ತಿ ಬಂ[2]ದೊಡೆ[2] ನಮ್ಮ ರಾಯನ
ಪಡೆಗಿದಿರಹ ರಾಯರುಂಟೆ ೧೭

ಮುತ್ತಿನ ಹೊಳೆಗೆಮ್ಮ ರಾಯನ ಕಾವಲು
ಸುತ್ತಣ ಕರೆ[3]ವ[3]ಟ್ಟಣಗಳು
ತೆತ್ತು ಸುಂಕವ ಸುಖದೊಳಗಿಹರೆಮ್ಮ ನೃ
ಪೋತ್ತಮಗೆಣೆಯೆ ಮಿಕ್ಕವರು ೧೮

ಜಾತಿತುರಂಗಮವಿಳಿವ ಹೊಳೆಗ[4]ಳೆಮ್ಮ[4]
ನೀತಿನಿಪುಣ ನರಪತಿಯ
ಮಾತಿನೊಳಿಹವೆನೆ ನಾಡಗುದುರೆಯಾಳ್ವ
ಭೂತಳಾಧಿಪರವ[5]ರ್ಗೆ[5]ಣೆಯೆ ೧೯

ಅಗರು ಚಂದನ ಪಟ್ಟೆ ಝಲ್ಲಿ ಬ[6]ಪ್ಪ[6]ಂಬುಧಿ
ನಗರವಾಳುವ ನರಪತಿಗೆ
[7]ನಗರೆಕ[7]ಂಬಳಿ ಪೀಲಿಗಳನುಳ್ಳ ನಾಡಿನ
ವಿಗಡಮನ್ನೆಯರು ಪಾಸಟಿಯೆ ೨೦

ಸಂಬುಕ ಪಡಗು ಜೋ[8]ಗು[8]ಗಳಿಗೆ ಸುಂಕ[9]ಮ[9]
ಕೊಂಬ ರಾಜೇಂದ್ರನಿದಿರೊಳು
ತುಂಬುವೇಱಿಗೆ ಸುಂಕ[10]ವ ಕೊಂಬ[10] ನೃಪರಾ
ಡಂಬರ [11]ನೆರೆಯಲಾರ್ತ[11]ಪುದೆ ೨೧

ರಾಯಸವೆಂಬುದು ರಾಯಗಲ್ಲದೆ ಮಿಕ್ಕ
ನಾಯಕಮಕ್ಕಳಿಗುಂಟೆ
ರಾಯಬಲ್ಲಾಳನಲ್ಲದೆ ಮತ್ತೆ ಭೂಮಿಗೆ
ರಾಯರುಂಟೇ [12]ನಾವಱಿಯೆವು[12] ೨೨

---

1 ನಿಗೆ (ಉ) 2 ದರೆ (ಐ) 3 ಪ (ಉ ಎ ಗ ಮ[1]) 4 ಳೆಂದು (ಉ)
5 ಗೆ (ನಿ ಉ ಎ ಗ) 6 ರ್ತ (ಇ ಎ ಗ) 7 ನಪೆಗಂ (ಐ) 8 ಗಿ (ಇ)
9 ವ (ಇ ಎ ಗ) 10 ವೇಳುವ (ಇ ಎ ಗ) 11 ವದುಮೊಱೆದ (ಇ ಎ ಗ)
12 ತಾನಱಿಯೆ (ಐ).

ಮಲೆ ಮಂದಿರ ಘಟ್ಟ ಬೆಟ್ಟಗಳನು ಪೊಕ್ಕು
ನೆಲೆಯುಱಿಯದೆ ರಾಯನನು
ಹೊಲಬಱಿಯದೆ ತಾನು ರಾಯನೆಂದೆಂ[1]ಬೀ[1]
ಹೊಲೆ ಮಾತ್ತಿಗುತ್ತರವುಂಟೆ　　೨೩

ಎಂದು ನುಡಿದು ರಾಮನ ಚರರನು ಕೋಪ
ದಿಂದ ಪಿಡಿದು ನೂಕಿಸಲು
ಬಂದು ದುರ್ಗವ ಪೊಕ್ಕು ರಾಮನೋಲಗ[2]ಕೆ
ಯ್ತಂ[2]ದು ಕೈಮುಗಿದು ನಿಂದವರು　　೨೪

ಉಳಿಯು[3]ದೊಂದಿನಿತವನಾ[3]ಡಿದ ಮಾತುಗ
ಳೊಳಗೆ ಕುಮಾರಗಂದವರು
ತಳುವದೆ ಬಿನ್ನವಿಸಲು ಹರಿಪೀಠದಿಂ
ದಿಳಿದು ಬಂದನು ತಂದೆಯೆಡೆಗೆ　　೨೫

ಬಂದು ಕುಮಾರ ಪಣೆಗೆ ಕೈಗಳೆರಡನು
ತಂದು ಬಂದನು ಚರರಿಂದ
ಒಂದಿನಿತುಳಿಯದಾ [4]ಧೂರ್ತ[4]ನಾಡಿದ ಮಾತ
ನಂದು ರಾಯಗೆ [5]ಪೇಳಿಸಿದನು[5]　　೨೬

ಕೇಳಿದನವನಿಪನೆದೆಯೊಳು ಕೋಪವ
ತಾಳಿ[6]ದ ಕುವರ[6]ನ ಕೂಡೆ
ಪೇಳಿದನೀಗಳೆ ಪೋಗಿಯಾ ಪುರವನು
ಧಾಳಿಯಿಟ್ಟಿಱಿದು ತಾರೆಂದು　　೨೭

ಸನ್ನಾಹ ಭೇರಿಯ ಪೊಯ್ಸಿ ಬಲವ ಕೂಡಿ
ತನ್ನ [7]ವಾರುವನೇ[7]ಱಿ ರಾಮ
ಮನ್ನೆಯರೆಕ್ಕಟಿಗರು ರಾವುತ[8]ರ ಮೊಗ
ವನ್ನೋಡಿ ನಗುತ ನಡೆದನು[8]　　೨೮

---

[1] ಬಾ (ಉ)　[2] ಕೈತ (ಉ ಐ)　[3] ದಿಂದಿನಿತವನಾ (ಇ ಉ ಎ ಗ) ದೊಂದುವನಿನಿತಾ (ಐ) ದಿಂದಿನಿತುಮನಾ (ಕ)　[4] ದೂತ (ಇ ಐ)　[5] ಕೇಳಿಸಿದನು (ಇ ಎ ಕ ಗ) ಪೇಳಿದನು (ಉ ಐ)　[6] ಕುಮಾರ (ಇ ಎ ಗ)　[7] ಕುದುರೆಯೇ (ಐ) ರಥವನೇ (ಇ) ಹಯವನೇ (ಕ)　[8] ರ ನೋಡಿ ನಗುತ ತೆರಳಿದ ಪ್ರಯಾಣವ (ಇ).

[1]ಮು[1]ನ್ನೆಯುಗಹಳೆ ಚಂಬಕವಱೆ ಬೊಂಬುಳಿ
ಚಿನ್ನ ತಿತ್ತಿರಿ ಝಂಚೆಗಳ
ಭಿನ್ನನಿನಾದ[2]ವಲೆ[2]ಯೆ ದೆಸೆಗಳ ಸಂ
ಪನ್ನವಿಕ್ರಮನೆಯ್ದಿದನು ೨೯

ಪಡೆಯ ಭಾರವ ತಾಳಲಾಱದೆ ಫಣಿಪತಿ
ಪೆಡೆಯ ಪಲ್ಲಟಿಸಿ ಕಮಠನ
ನಡುಬೆ[3]ನ್ನು[3] ನಳ್ಕಿಸೆ ನಲವಿಂದ ಕುವರನಂ
ದೊಡನಿಕ್ಕಿದನು ಧಾಳಿಯನು ೩೦

ಒಂದಿರುಳೊಂದು ಪಗಲು ಧಾಳಿಯನಿಟ್ಟು
ಬಂದು ಮುತ್ತಿದನಾ ಪುರವ
ನಿಂದು ಕೋಟೆಯ ನೋಡಿ ಲಗ್ಗೆಗೆ ಮಂಧಿಯ
ನಂದು ಬಿಟ್ಟನು [4]ರಾಯಕುವರ[4] ೩೧

ಲಗ್ಗೆವ[5]ರಿಗೆ ತೆಕ್ಕೆ[5]ವರಿಗೆಗಳಿಂ ಬಂದು
ಮುಗ್ಗಿಕವಿದು ಕಾಲಾಳು
ತಗ್ಗಿನೆಡೆಯೊಳು ಕೋಟೆಯ ತೆನೆಗಳಿಗವ
ರೊಗ್ಗಿನಿಂ ಕಯ್ಯನಿಕ್ಕಿದರು ೩೨

ಎತ್ತಲೀಯದೆ ತಲೆಕೈಗಳ ಬಿಲ್ಲವ
ರೊತ್ತೊತ್ತೆಯಿಂದಾರ್ದೆಸುತ
ಹ[6]ತ್ತ[6]ಸಾರಿದರು ಹತ್ತಿದರು ಕೋಟೆಯನಂದು
ಕಿತ್ತ ಕಠಾರವೆಸೆಯಲು ೩೩

ಬ[7]ಱಿ[7]ಮಂಡೆ ಪೂಸಿದ ಗಂಧ ಕಾಸೆಯ ಧಟ್ಟಿ
ಮೆಱೆಯೆ ಸಬಳಿಗ[8]ರೆಯ್ತಂ[8]ದು
ತಱುಬಿದರಂದು [9]ಕೋ[9]ಟೆಯ ವ್ಯೆವ[10]ಸ[10]ದೊಳು
ಮಿಱುಗೆ ಸಬಳ ಕಯ್ಯೊಳಗೆ ೩೪

---

[1] ಸ (ಉ) [2] ವೆಸೆ (ಉ) ವರಿ (ಇ ಎ ಗ) [3] ನ್ನ (ಐ) [4] ಚೆನ್ನರಾಮು (ಕ) [5] ರೆ ತಕ್ಕೆ (ಎ ಗ) [6] ತ್ತಿ (ಇ) ತ್ತೆ (ಉ) [7] ಱೆ (ಉ) ಱು (ಎ ಐ ಗ) [8] ರೈತಂ (ಉ ಐ) [9] ಕೋಂ (ಉ) [10] ಶ (ಇ ಉ).

ಸುತ್ತ ಬಳಸಿ ಪೆಟಲವರು ಕೋವಿಗಳನು
[1]ತೆ[1]ತ್ತಿ ಸಲವರಾ[2]ರಭ[2]ಟೆಯು
ವೃತ್ತಿಯಿಂ ತಾ[3]ರಗೆ[3]ಗಳ ಗೂಳೆಯುವಿರ
ದೆತ್ತಿತು ಧ್ರುವಲೋಕದತ್ತ ೩೫

ತಂಬಟೆ ಡೋಳು ಚಂಬಕವಱೆ ಬೊಂಬುಳಿ
ಕೊಂಬು ಕಹಳೆಗಳ ದನಿಯು
ಬೆಂಬಳಿ ಸಂದು ಹಿಡಿದರು ಲಗ್ಗೆಯ[4]ನಾ
ಡಂಬರದಿಂದ ಸು[4]ಭಟರು ೩೬

*ಮುತ್ತಿದರಂದು [5]ಮೂವಳಸಾಗಿ ಕೋಟೆಯ[5]
ಹತ್ತಿದರಾರ್ದು ಕಾ[6]ಲವರು[6]
ಎತ್ತಲೀಯದೆ ತಲೆಯನು ಕವಿದೆಚ್ಚರಂ
ದೊತ್ತಿ ಬಿಲ್ಲವರು ಬೊಬ್ಬಿಡುತ ೩೭

ಕೋಟೆಯ ಕಾಣಲೀಯದ ತೆಱದಿಂ ಮುತ್ತಿ
ಮೀಟಿನ ಭಟರು ತೆನೆಯೊಳು
ತೋಟಿಯನೆಸಗಿದರಂದು ರಾಮನ ಕಣ್ಣ
ನೋಟವಿರಲು ತಮ್ಮ ಮೇಲೆ ೩೮

†ಪಲವಣ್ಣದ ಗವಸಣಿಗೆಯು ಕೋಟೆಗೆ
ನೆಲೆಗೊಳಿಸಿದರೆಂಬಂತೆ
ಸಲೆ ಮೆಱೆದವು ಬಣ್ಣಪರಿ[7]ಯ ಹರಿಗೆಗಳು[7]
ಬಳಸಿ ಕೋಟೆಯ ಮೈವಸದೊಳು ೩೯

ಲಗ್ಗೆವಱೆಯ ದನಿ ದೆಸೆಗಳ ಮೂಲೆಯ
[8]ನು[8]ಗ್ಗೆ ಕಾಲವರು ಮಾಮಸಗಿ
ಮುಗ್ಗಿ ಕವಿದು [9]ರಾಮ ನೋಡುತಿರಲು[9] ಬಲು
ಲಗ್ಗೆಯ [10]ಹಿಡಿದು[10] ಕಾದಿದರು ೪೦

---

[1] ಕ (ಇ ಉ ಎ ಗ) [2] ಭರ್ (ಉ) ರುಭ (ಐ) [3] ರೆಗೆ (ಇ ಐ)
ತೆರದಿಂ ಮುತ್ತಿ ಮೀಟಿನ (ಇ ಎ ಗ) [5] ಕೋಟೆಯ ಮೂವಳಸಾಗಿ (ಇ)
ಲಾಳು (ಉ) [7] ಹರಿಗೆಗಳಾಗ (ಇ) [8] ಲ (ಇ) [9] ನೋಡುತಿರಲು ಬಲ (ಉ)
ತೆಱದಿಂ ಮುತ್ತಿ (ಎ ಗ) *(ಎ ಗ) ಪ್ರತಿಗಳಲ್ಲಿಲ್ಲ †(ಉ) ಪ್ರತಿಯಲ್ಲಿಲ್ಲ.

ಗುಂಡೆತ್ತುವರ ತೊಲೆ [1]ಪು[1]ರಿದ ಮಳಲು ಪಾವು
[2]ಬಂಡಿ[2] ಕಾದೆಣ್ಣೆ ಕಗ್ಗಲಿಯು
ಕೆಂಡ ಕೇಸುರಿಗಳಿಂ ತೆನೆಗೆ [3]ಕಯ್ಯಿಕ್ಕಿ ದು[3]
ದ್ದಂಡ ಸುಭಟರು ಮಡಿದರು ೪೧

*[4]ಪಂ[4]ದಿ [5]ಪೋಟಿ[5]ಟ್ಟಿ ಸಬಳ ಭೀಮಗದೆ [6]ಕೊ[6]೦ತ
ಮುಂದುಗೆಡಿಸುವ ಕೈದುಗಳ
ಸಂದಣಿ ಖಣಿ[7]ಖಟಿ[7]ಲೆನೆ ಪುರದವರು ಕೈ
ಗುಂದದಳುಕದೆ ಕಾದಿದರು ೪೨

ಪೊಡೆವ ಲೌಡಿ[8]ಗೆ[8] ಪೊಯ್ವ ಕತ್ತಿಗೆ ಮಿಗೆ ಸೀ
ಳ್ದಿಡುವ ಖಡ್ಗಕೆ ಕರವಾಳ್ಗೆ
[9]ನ[9]ಡುವ [10]ಕೊಂ[10]ತಕೆ ಶಲ್ಲೆಹಕೆ ಪಿಂಡಿವಾಳಕೆ
ಸೆಡೆಯದವರು ಕಾದಿದರು ೪೩

ಕರುಳುರ್ಚೆ ಖಂಡ ಕತ್ತರಿಸೆ ಕಾಳಿಜ ಮಿಗೆ
ಸುರಿಯೆ [11]ಕೆ[11]ನ್ನೆತ್ತರುಚ್ಚಳಿಸೆ
ತೊರಳೆ ತುಂಡಿಸೆ ತೊಡೆಯುಡಿಯೆ ಕಾದಿದರಂ
ದೆರಡು ಥಟ್ಟಿನ ವೀರಭಟರು ೪೪

ಕೋಳು[12]ವೋ[12]ಗದೆ ಕೋಟೆ ಕಾದುತಿರಲು ರಾಮ
ತಾಳಿ ಕೋಪವ[13]ನೆದೆಯೊ[13]ಳಗೆ
ಆಳ ಮೂದಲಿಸುತ ಕುದುರೆ[14]ಯನ[14]ಗಳನು
ಲೀಲೆ ಕೈಮಿಗೆ [15]ದಾ[15]ಟಿಸಿದನು ೪೫

ನೀರಗಳನು ದಾಂಟಿ ವಾರುವ ಕೋಟೆಯ
ವೀರಭಟರ ಮಿಗೆ ದಾಂಟಿ
ಕೇರಿಕೇರಿಯೊಳು ಪರಿದು ಲೂಟಿ[16]ಯಾಡಿದ
ರೂರು ಕಿ[16]ಚ್ಚಿನ ಬೀಡಾಯ್ತು ೪೬

---

[1] ಸು (ಇ) [2] ಭಂಡಿ (ಉ ಐ) ಬಂಡಿಯು (ಗ) [3] ಕಯ್ಗಳನಿಕ್ಕಿ (ಕ)
[4] ವೊಂ (ಇ) [5] ಪೊಟ್ಟಿ (ಇ ಎ ಗ) [6] ಕು (ಐ) [7] ಕಟಿ (ಎ ಗ) ಕಠಿ (ಇ)
[8] ಯುಗದೆ (ಎ ಗ) ಗೆಗದೆ (ಇ) [9] ನೆ (ಇ) [10] ಕುಂ (ಉ ಐ) [11] ಕ (ಇ ಎ ಗ)
[12] ಹೋ (ಇ ಎ ಐ ಗ) [13] ಮನದೊ (ಇ) [14] ಯಾನೆ (ಐ) [15] ದಾಂ (ಉ ಕ)
[16] ಮಾಡುತಲೂರು ಕಿ (ಐ) * (ಉ) ಪ್ರತಿಯಲ್ಲಿಲ್ಲ.

ಮನೆಮನೆದಪ್ಪದೆ ಕೇರಿಕೇರಿಗಳೊಳು
ತನಿಗಿಚ್ಚು ನೆಗೆದು ದಳ್ಳುರಿಯ
ಕೊನೆ ನಾಲಗೆಯಿಂದ ತೆಗೆತೆಗೆದಾ ಪುರ
ಜನಗಳ ತಿಂದು ತೇಗಿ[1]ದುದು[1] ೪೭

*ಪೊಗೆವುತ ಪೊ[2]ಱಪೊಣ್ಮುತ ಪೊರ್ದಿದರ[2]ತಿಂ
ದುಗುಳುತ ಕೇಸುರಿಯಿಂದ
ತಗಳುತ ತಲ್ಲಣಗೊಳಿಸಿದುದಂದಾ
ನಗರದೊಳಗ್ನಿ ಭಟರನು ೪೮

ಭುಗಿಲು ಭುಗಿಲು ಛಟಛಟ ಸಿಮಿಸಿಮಿ [3]ಧಗಿ
ಲ್ಧಗಿಲೆಂಬ ಬಲುಧ್ವನಿ ಮೀಱಿ[3]
ಪೊಗೆ[4]ಯಿ[4]ಲ್ಲದೆ ಪೊಱಪೊಣ್ಮಿ[5]ದವ[5]ಂದಾ
ನಗರದೊಳಗ್ನಿಶಿಖಿಗಳು ೪೯

ಆಳುವೇರಿಯೊಳಂಗಡಿ ಬೀದಿಯೊಳು ಕ
ಟ್ಟಾಳು ಕವಿದು ಪಟುಭಟರ
ಕೀಳು ಮೇಲಿಗೆ ಪೊಯ್ದು [6]ಕೆಡಪಿ ತಲೆಗಳ ನಿ[6]
ವಾಳಿಸಿದರು ರಾಮನಿಗೆ ೫೦

ಹೋರಿದ ಭಂಟರ ಹೊಯ್ದು ಕೆಡಹಿದರು
ಹೋರಲಮ್ಮದೆ ತೊಲಗಿದ[7]ರ[7]
ದೂರದೊಳಗೆ ಬಿಟ್ಟು ವೀರರಾಮನ ಪರಿ
ವಾರ ಪೊಕ್ಕಱಿದುದಾ ಪೊಳಲ ೫೧

ಮುಟ್ಟಿ ಪಿಡಿದು ಮನೆಮನೆಗಳೊಳಗೆ [8]ಮಿಗೆ
ಕಟ್ಟಾಳು ಬಿಡದೆ ಪೊಕ್ಕರಸಿ[8]
ಕೆಟ್ಟು ನುಡಿದ ಪೊಳಲಧಿಕಾರಿಯ ಪೆ[9]ಡ[9]
ಗಟ್ಟಿನಿಂ [10]ತ[10]ಂದೊಪ್ಪಿಸಿದರು ೫೨

---

[1] ದರು (ಇ) [2] ಱಪೊಣ್ಮಿದರ ಪೊರ್ದುತ (ಐ) [3] ದನಿಯುಱ ಮೊಱೆಯೆ ಪುಗಲಲ್ಲಿ (ಎ ಗ) [4] ಯು (ಎ ಗ) [5] ದುದಂ (ಉ) [6] ತಲೆಗಳ ತಂದು ನಿ (ಇ) ಕೆಡಪುತ ತಲೆಗಳ ನಿ (ಎ ಗ) [7] ರು (ಇ) [8] ಪೊಕ್ಕು ಕಟ್ಟಾಳ್ಗಳ ಪೊಕ್ಕರಱಿಸಿ ಉ) [9] ಡೆ (ಐ) [10] ದಂ (ಐ). * (ಉ) ಪ್ರತಿಯಲ್ಲಿಲ್ಲ.

ಸೋಮಸೂರಿಯವೀಧಿಗಳೆಡೆ[1]ಗಳೊ[1]ಳು ನಿ
ಸ್ಸೀಮಭಟರು ಪೊಕ್ಕು ಪೊಯ್ದು
ತಾಮಸವಿಲ್ಲದೊಪ್ಪಿಸಿದರು ತಲೆಗಳ
ರಾಮಗೆ ರಾಯರಾವುತರು ೫೩

ಕುಕ್ಕುರ [2]ದೀವದೆ[2]ರಲೆ ಪಕ್ಕಿ ಪುಣುಗಿನ
ಬೆಕ್ಕು ಪೆಣ್ಮಕ್ಕಳ ಕೊಂಡು
ತೆಕ್ಕ[3]ನೆ[3] ಕಾದಿದರಂದಧಿಕಾರಿಯ
ಮಕ್ಕಳು ರಾ[4]ಯಬೀದಿಯೊಳು[4] ೫೪

†ಇಱಿದರನಿಱಿದು ಪೊಯ್ದರ ಪೊಯ್ದು ಬಯ್ದರ
ಜಱಿದು ಜಗ[5]ಳದಿ ಸು[5]ಭಟರ
ಕುಱಿದಱಿ[6]ದರು[6] ರಾಮನ ಕಾಣುತವರಂದು
ತಱುಬಿ ಕಾದಿದ[7]ರು ಬೀದಿಯಲಿ[7] ೫೫

*ಕೊಂದರು [8]ರಾವುತರನು ಕಾಲವರನು[8]
ನಿಂದು ಮೂದಲಿಸಿ ಕರೆದರು
ಹಿಂದು ಮುಂದೆಡಬಲ[9]ದೊಳು[9] ಬಂದೆಸುವ ಬಿಲ್ಲ
ಮಂದಿಯ ಬಱಿ[10]ಕೆಯ್ದ[10]ರವರು ೫೬

[11]ತಱುಬಿ ಸಬಳದಿಂದಿಱಿವ[11] ಸಬಳಿಗರ
[12]ಬಱುಮಂಡೆಗೆ ಕಯ್ಯನಿಕ್ಕಿ[12]
ಬಱಿಸೆಳೆದೊತ್ತಿಗೆಳೆದುಕೊಂಡು ಕೊರಳನು
ಕೊಱೆದಿಟ್ಟರರಿಗಳ ಮೇಲೆ ೫೭

ಕಾಲವರನು ಕಾಲನೆಡೆಗೆ ಕಳುಪಿದರು
ಮೇಲವರನು ಬೇಗದೊಳು
ಮೇಲುಲೋಕಕೆ ಕಳುಪಿದರವರಿರ್ವರ
ಮೇ[13]ಲುಗಾಳ[13]ಗವನೇನೆಂಬೆ ೫೮

---

1 ಯೊ (ಐ) 2 ದೀವದೇ (ಇ ಐ) ವೀಹದೆ (ಉ) ದಿವದವೆ (ಎ ಗ) 3 ದೆ (ಇ ಐ) 4 ಜಬೀದಿಯೊಳು (ಉ) ಯಬೀದಿಯಲಿ (ಐ) 5 ದೊಳುಳ್ಳ (ಐ) 6 ದಱಿದು (ಇ) 7 ರವರಂದು (ಇ) 8 ಕಾಲವರನು ರಾವುತರನು (ಇ) 9 ದಲ (ಐ) 10 ಕೈದ (ಇ ಐ) 11 ತಱುಬಿ ಸಬಳದಿಂದ ಯಿಱಿವ (ಉ) ತಱಿದು ಸಬಳದಿಂದಿಱಿದು (ಎ ಗ) ತಱುಬಿ ಸಬಳದಿ ಬಂದಿಱಿವ (ಐ) 12 ಬಱುಮಂಡೆಗಿರದ ಕೈಯಿಕ್ಕಿ (ಇ ಉ) ಬಱುವಮಂಡೆಗಿರದೆ ಕೈಯಿಕ್ಕಿ (ಎ ಗ) 13 ಲೆಕಾಳೆ (ಇ ಎ ಗ)
† (ಉ ಎ ಗ) ಗಳಲ್ಲಿಲ್ಲ. * (ಉ) ಪ್ರತಿಯಲ್ಲಿಲ್ಲ.

ನಗರ[1]ವಿಱಿದು[1] ತಂದೆ ಸಿಕ್ಕಿದನೆಂದವ
[2]ರಗಿದರೆ[2] ರಾಯಬೀದಿಯಲಿ
ಜಗಳವನೆಸಗಿ ಸಗ್ಗದ ಸೂಳೆಗೇರಿಯ
ಜಗ[3]ಲಿಯನೊಸೆ[3]ದೇಱಿದರು ೫೯

ನರಲೋಕ ನಾಕಾಧಿಪತಿ ಕಂಪರಾಯನ
ವರಸುತನವರ ವಿಕ್ರಮದ
ಸಿರಿಯಸಿಂ[4]ಗ[4]ರಕೆ ಬೆರ[5]ಲ[5]ಮೂಗಿನೊ[6]ಳಿಟ್ಟು[6]
ಶಿರವನೊಲೆ[7]ದನು ಮೆ[7]ಚ್ಚಿದನು ೬೦

*ಕಲಿತನವನು ಕಲಿ ಮಿಗೆ ಮೆಚ್ಚುವಂ[8]ದದಿ[8]
ಸಲೆ ಮೆಚ್ಚುವರೆ ಹಂದೆಗಳು
ಒಲಿದು [9]ಪೊಗಳಿ[9]ದನವರ ಬಂಟತನದೊಂದು
ಬಲುಮೆಯನಾ ವೀರರಾಮು ೬೧

ತನ್ನ ಕಾಲಾಳು ಮೇಲಾಳಿಗವರ ಶೌ[10]ರ್ಯ
ದು[10]ನ್ನತಿಕೆಯನೊರೆದೊರೆದು
ಇನ್ನು ಮುನ್ನಿ[11]ಲ್ಲವರನ್ನರಿಳೆಯೊಳೆಂದು[11]
ಚನ್ನಿಗ ರಾಮು ಮೆಚ್ಚಿದನು ೬೨

ಪಿಡಿಯಿಸಿದನು ಧರ್ಮ[12]ಗಹ[12]ಳೆಯ ಭೇರಿಯ
ಪೊ[13]ಡೆ[13]ಯಿಸಿದನು ಗೂಳೆಯುವ
ನಡೆಯಿಸಿದನು ಪಿಂತೆ ತೆರಳಿದನೊಯ್ಯನೆ
ಸಡಗರದಿಂ[14]ದಾ ಕುವರ[14] ೬೩

ಸಿಕ್ಕಿದ ಸೆಱೆಗಳ ಬಿಡಿಸಿ ಕುವರ ಬಂಟ
ರೊಕ್ಕಲಕೊಂಡು ದುರ್ಗವನು
ಹೊಕ್ಕನದಱ ಸಿರಿ ಫಣಿಪ[15]ತಿಗಲ್ಲದೆ[15]
ಮಿಕ್ಕವರಳವೆ ಬಣ್ಣಿಸಲು ೬೪

---

1 ಹೋದುದು (ಐ) 2 ರಿರದೆ (ಇ ಎ ಗ) 3 ತಿಯ ನೋಲಿ (ಇ ಎ ಗ) 4 ಗಾ (ಐ) 5 ಳ (ಐ) 6 ಳಗಿಟ್ಟು (ಇ ಎ ಗ) 7 ದು ಮೆ (ಇ ಎ ಗ) ದನು ಮ (ಉ) 8 ತಿರೆ (ಇ ಎ ಗ) 9 ಕೊಂಡಾಡಿ (ಇ) 10 ಯೋ (ಐ) 11 ಲ್ಲವಿನ್ನಿಳೆಯೊಳಗೆಂದು (ಇ ಎ ಗ) 12 ಗಾ (ಇ ಐ) 13 ಡ (ಎ ಐ ಗ) 14 ದಾರಾಮ (ಇ ಉ ಎ ಗ) ರಾಮುನಾಥ (ಕ) 15 ಗಲ್ಲದೆಯಿನ್ನು (ಎ ಗ).
* (ಉ) ಪ್ರತಿಯಲ್ಲಿಲ್ಲ.

ತಳಿರ್ದೋರಣ ಗುಡಿ[1]ಕುಸುಮಕುಸುಕ[1] ಸಂ
ಕುಳ ರಂಗವಲಿ ಪ[2]ನಿನೀ[2]ರ
ಚಳೆಯ ಸಾದಿನ ಸಾರಣೆ [3]ಸಾರವಸ್ತು ಕ
ಣ್ಗೆಳಸಲೆಸೆದುದಾ ದುರ್ಗ[3] ೬೫

ಮನೆಮನೆದಪ್ಪದೆ ಮುತ್ತುರನ್ನಗಳಿಂ
ದನುವಡೆದಿ[4]ದ್ದಾ[4]ರತಿಗಳ
ಮನವೊಸೆದೆತ್ತಿದರಾ ಪುರನಾರಿಯ
ರನು[5]ಪಮಶುಚಿಗೆ ಕುವರಗೆ[5] ೬೬

ಹರಿಹರದೇವಿಯರರಮನೆಯಿಂ ಬಂದ
ಪರಿಪರಿಯಾರತಿಗಳನು
ಒರೆ[6]ವರೆ[6]ನ್ನಳವೆ ತಾರಾಲೋಕ[7]ವಿ[7]ಳೆಗವ
ತರಿಸಿದಂತವು ಕಣ್ಗೆಸೆದವು ೬೭

[8]ಬಾಲಿಕೆಯರು[8] ಚೀನಾಂಬರ ದಿವ್ಯದು
ಕೂಲಗಳನು ಪಿಡಿ[9]ದೆಯ್ದಿ[9]
ಲೀಲೆಯಿಂ ಹರಿಹರದೇವಿಯಾಣತಿಯಿಂ ನಿ
ವಾಳಿಸಿದರು ರಾಜಸುತಗೆ ೬೮

ಪೋಗಿ ತಂದೆಯ ಪದ ಪದ್ಮಗಳಿಗೆ ತಲೆ
ವಾಗಿ ತಂದಧಿಕಾರಿಯನು
ಆಗಳೊಪ್ಪಿಸಿ ಕಳುಹಿಸಿಕೊಂಡು [10]ಪೊ[10]ಕ್ಕನು
ರಾಗದಿಂ ಹಿರಿಯರಮನೆ[11]ಯು[11] ೬೯

ಹರಿಹರದೇವಿ [12]ಬುಕ್ಕಾಂಬಿಕೆ[12]ಯರ ಪದ
ಸರಸಿಜಗಳಿಗೆ [13]ಮೆಯ್ಯಿ[13]ಕ್ಕಿ
ಪರಕೆಯನಾಂತು ಪಲವು [14]ಸೂಳೊ[14]ಳು ರಾಮ
ನಿರ[15]ದೆಯ್ದಿದನು ತನ್ನ ಮನೆಯ[15] ೭೦

---

[1] ಕುಸುಕಕುಸುಮ (ಐ) ಕಳಸಕುಸುಮ (ಕ) [2] ನ್ನೀ (ಕ) [3] ಕತ್ತುರಿ ಕಣ್ಗೆಳಸಲೆಸೆದುದಾ ದುರ್ಗ (ಐ) ಸಾರವಸ್ತು ಕಣ್ಗೆಳಸಿದುದಾ ದುರ್ಗದೊಳಗೆ (ಇ ಎ ಗ) [4] ದಾ (ಇ ಎ ಗ) [5] ವರಶುಚಿಗೆ ಕುವರಗೆ (ಐ) ಪಮ ಶುಚಿ ರಾಮನಿಗೆ (ಇ) ಪಮಶುಚಿ ಕುವರಗೆ (ಎ ಗ) [6] ಯಲೆ (ಉ) [7] ನಿ (ಇ) [8] ಬಾಲಕಿಯರ (ಉ ಐ), ಬಾಲಕಿಯರು (ಇ) [9] ದೈದಿ (ಇ ಉ ಐ) [10] ಹೊ (ಐ) [11] ಗೆ (ಕ) [12] ಭೂಕುಂಬಿಕೆ (ಇ ಕ) [13] ಮೈಯಿ (ಇ ಉ ಐ) [14] ಸುಖ ದೊ (ಇ) [15] ದೈದಿದನು ತನ್ನ ಮನೆಯ (ಐ) ದೆಯ್ದಿದ ತನ್ನ ಗೃಹವ (ಇ) ದೆಯ್ದಿದನು ತನ್ನರಮನೆಯ (ಎ ಗ).

ಮಾನಿನಿಯರು ಮನದುಮ್ಮಳವನು ಬಿ
ಟ್ಟಾನಂದರಸ[1]ಕರವುಣ್ಮೆ[1]
ಸ್ನಾನ ಭೋಜನಶಯನಾದಿಗಳಿಂದ ಸ
ನ್ಮಾನಿಸಿದರು ನಿಜಪತಿಯ ೭೧

* ಇದು ಪರದಾರಸೋದರರಾಮನಾಥನ
ಪದಕೃತಿಯೊಳ[2]ಗೆ ಮೂಱ[2]ನೆಯ
ವಿದಿತಾಶ್ವಾಸದೊ[3]ಳೊಂದ[3]ನೆಯದು ಸಂಧಿ
ಮೃದುಪದಚಯಸಂಬಂಧಿ ೭೨

---

[1] ಕೆರೆಗಣ್ಮೆ (ಇ) ಕರೆಗುಣ್ಮೆ (ಉ ಎ ಗ) [2] ಗೊಂದ (ಇ) [3] ಳ್ದತ್ತ (ಇ)
* (ಎ ಐ ಕ ಗ ಚ ಟ) ಗಳಲ್ಲಿಲ್ಲ.

# ಹನ್ನೊಂದನೆಯ ಸಂಧಿ

---

## ಯುದ್ಧ ಸಿದ್ಧತೆ

[1]ಧೀ[1]ರ ಕಂಪಿಲನಕುಮಾರ[2]ನೆಯ್ತಂದ[2]ಗ್ರ
ಹಾರ[3]ವಿಱಿದ[3] ವಾರ್ತೆಯನು
ವೀರಬಲ್ಲಾಳನಾಲಿಸಿ ಕಾಲರುದ್ರಾವ
ತಾರನಾದನು ಪೇಳ್ವೆನೇನ ೧

ಕಡೆಗಣ್ಣು ಕಿಡಿಸೂಸೆ ಕುಡಿಮೀಸೆ ಕುಣಿದಾಡೆ
ಬಿಡದೆ ಗಂಟಿಕ್ಕೆ ಪುರ್ಬುಗಳು
ಒಡನೆ ಸುಯ್ಯಲರುಚ್ಚಳಿಸೆ ವೀರಬಲ್ಲಾಳ
ಕಡುರೋಷವ ತಾಳಿದನು ೨

ಕರೆಯಿಸಿದನು ದಂಡನಾಥನನಾಪ್ತಭೂ
ವರರಿಗಟ್ಟಿದನೋಲೆಯನು
ನೆರಪಿದನಾನೆಕುದುರೆ[4]ಯಾಳಂ[4]ದಿನ
ಕುರುಬಲಕಿಮ್ಮಡಿಯೆನಲು ೩

ಕೊಂಗು ಕೊಡಗು ಮಲೆಯಾಳ ತಿ[5]ಗು[5]ಳದೇ
ಶಂಗಳ ಕೂರಾಳುಗಳ
ಪಿಂಗದೆ ಕೂಡಿದ ಬಲ್ಲಾಳನೃಪ ರಣ
ರಂಗಕೇ[6]ಳೀ[6]ಲೋಲುಪನು ೪

ನೆಲನೀದುದೊ ದೆಸೆ ಬೆ[7]ಸಲಾ[7]ದುದೊ ಬಾ
ನಿಳೆಗಾನೆ ಕುದುರೆ ಕಾಲಾಳ
ಮಳೆಗಱೆದುದೊ [8]ಮೇಣೆನೆ[8] ಬಲ್ಲಾಳನ
ಬಲಮಯವಾದು[9]ದೀ[9] ಭೂಮಿ ೫

---

[1] ವೀ (ಕ) [2] ನೈತಂದ (ಇ ಉ ಐ) ರಾಮುಗನ (ಕ) [3] ವನಿಱಿದ (ಇ ಉ ಎ ಕ ಗ) [4] ಗಳನಂ (ಇ ಎ ಗ) [5] ವು (ಇ ಉ ಎ ಗ) [6] ಳಿಯ(ಉ ಐ) [7] ಸಲೆಯಾ (ಉ ಎ ಗ) [8] ಯೆಂದೆನೆ (ಐ) ಪೇಳೆನೆ (ಉ) [9] ದಾ (ಎ ಗ).

ಬಳಿಕ ಬಲ್ಲಾಳ ಭೂಮೀಶ್ವರ ಕೂಡಿದ
ಬಲವ ನಿಟ್ಟಿಸಿ ಮನದೊಳಗೆ
ತಳೆದನಾನಂದವ ಪಗೆ ರಾಯರನಿನ್ನು
ಗೆಲಬಹುದೆಂ[1]ದೆಣಿಸಿ[1]ದನು ೬

ಆಟವಿಕರ ಮನ್ನೆ[2]ಯು[2]ಸಾವಂತರ
ಕೂಟವ ನೋಡಿ ಭೂವರನು
ತೋಟಿಯು ಗೆಲಬಹು[3]ದಿನ್ನೆಂ[3]ದು ಸಂದೇಹ
ದಾಟವ ಪರಿಹರಿಸಿದನು ೭

ಎತ್ತನೋಡಿದಡತ್ತ ಕಾಲಾಳು ಕುದುರೆಯ
ಮತ್ತಗಜದ ಮೋಹರದ
ಒತ್ತೊತ್ತೆಯಲ್ಲದಿಲ್ಲೆನಲಾ ನೃಪನ ಸಂ
ಪತ್ತನದೇನ ಬಣ್ಣಿಪೆನು ೮

ಬಿರಿಯೆ ಭೂತಳ ಬೆ[4]ಟ್ಟ[4] ಜಱಿಯೆ ತಾ[5]ರಗೆವಳೆ[5]
ಸುರಿಯೆ ಭೇ[6]ರೀ[6]ರವದಿಂದ
[7]ತೆರಳಿದನಂದು ಬಲ್ಲಾಳ ಕಂಪಿಲಭೂ
ವರನ ಮೇಲತಿವೇಗದಿಂದ[7] ೯

ತೂಳುವೆಱೆಯ [8]ನಿಸ್ಸಾಳದ[8]ಗಿಡಿಬಿಡಿ
ಕಾಳೆಯ ರುಂಚೆಯ ದನಿಯ
ಕೋಳಾಹಳ ದಿಕ್ಪತಿಗಳಂಜಿಸೆ ಬ
ಲ್ಲಾಳ ನಡೆದ [9]ಕಾಳಗಕೆ[9] ೧೦

ಗಡಿಯ ಕಾವಲ ಮನ್ನೆಯರಾ ಸುದ್ದಿಯ
ಒಡನೆ ಪೇಳಲು ಕಂಪಿಲನು
ಕಿಡಿಕಿಡಿಯೋಗುತ ರಾಮನ ಮೊಗವನು
ಕಡೆಗಣ್ಣಿನಿಂದ ನೋಡಿದನು ೧೧

---

[1] ದುಬಗೆ (ಇ ಉ ಎ ಗ) [2] ಯರ (ಇ ಉ ಎ ಗ) [3] ದೆಂ (ಎ ಗ) [4] ಟ್ಟು (ಕ) [5] ರೆಗಳುಱೆ (ಇ) ರೆಗೆಮಳೆ (ಐ) [6] ರಿಯು (ಐ) [7] ಧುರಧರಣಿಗೆನಡೆತಂದನು ಬಲ್ಲಾಳ ನರಪತಿಗಳಮೋಹರದೊಳು (ಕ) [8] ನಿಸ್ಸಳರಾಯ (ಐ) ನಿಸ್ಸಾಳ ರಾಯ (ಎ ಗ) [9] ನು ಕಾಳಗಕೆ (ಉ) ನು ಕಾಳೆಗಕೆ (ಇ ಎ ಗ).

ನೋಡಲೊಡನೆ ರಾಮನಾಥ ದಂಡಾಧಿಪ
ಗೂಡಿ ದಿವಾಣಕೆ ಬಂದು
ಕೂಡೆ ಪೊ[1]ಯಿಸೆ[1] ಸಮರಾನಂದಭೇರಿಯ
ಕೂಡಿತು ಬಲ[2]ವೈತಂ[2]ದು ೧೨

ಸೂಳಯಿಸಿದ [3]ನಿಸ್ಸಾಳದ ನಿನ[3]ದಕೆ
ಸೀಳಿದ[4]ವಖಿಳದೆಸೆಗಳು[4]
ಮೂಲೆಯ ಸಂದಿಗಳಾ[5]ಶಾ[5]ಗಜಗಳು
[6]ಘೀ[6]ಳಿಟ್ಟವೇನ ಬಣ್ಣಿಪೆನು ೧೩

ಗಿರಿಗಳನೊಡೆದು ಸಮುದ್ರವ ದಾಂಟಿ ದಿ
ಕ್ಕರಿಗಳ ಕರ್ನ[7]ಕುಹ[7]ರವ
ಇರದೆ ಪೊಕ್ಕಾಕಶಾಧಿಪರನಂಜಿಸಿ[8]ತಂ[8]
ದುರುಭೇರಿಯುಗ್ರನಿನಾದ ೧೪

*ಅಂಬುದ[9]ನಾ[9]ದವಾ[10]ಲಿ[10]ಸಿದ ಕಾದಂಬಕ
ದಂಬದಂತರಿಗಳವನಿಯ
ತುಂಬಿದ ಜಯದುಂದುಭಿರವಗೇಳಿ ಪ
ಲುಂಬಿದರಗಿದೆದೆಯೊಳಗೆ ೧೫

ತೆಗೆದು ತೇಜಿಗಳ ಹಲ್ಲಣಿಸಿ ಹಕ್ಕರಿಕೆಯ
[11]ಪುಗಿಸಿ ಸವಗ ಜೋಡುಗಳನು[11]
ಬಿಗಿದು ಬಿರಿದನಿಕ್ಕಿ ಪೊಱ[12]ಮಟ್ಟು[12]ರೊಸೆದು ಕಾ
ಳೆಗ[13]ಕಾ ರಾಯರಾವುತರು[13] ೧೬

[14]ತೋಡುವಿ[14]ಲ್ಲಂಬು ತರ[15]ಕ[15]ಸ ಬಲ್ಲೆ[16]ಯ[16] ಜೋಡ
ಖೇಡೆಯ ಸವಗ ಸೀಸಕದ
ಗಾಡಿ ಕೈಮಿಗೆ ಪೊಱ[17]ವಂಟ[17]ರು ರಾವುತ
ರಾಡುತ [18]ಪಂಥಪಾಡು[18]ಗಳ ೧೭

---

[1] ಯ್ಯಲು (ಇ ಉ ಎ ಗ ಕ) [2] ವೆಯ್ತಂ (ಇ ಗ) [3] ದುಂದುಭಿಯ ನಿನಾ (ಇ ಎ ಗ) ದುಂದುಭಿಗಳ ನಿನ (ಉ) [4] ವಿರದೆ ದೆಸೆಗಳ (ಇ ಉ ಎ ಗ) [5] ಸುರ (ಇ) [6] ಘೋ (ಇ ಎ ಗ) [7] ಕೋಟ (ಐ) [8] ದುದಂ (ಇ ಎ ಐ ಗ) ದುದು (ಕ) [9] ನಿನ (ಐ) [10] ರಿ (ಐ) [11] ಬಿಗಿಸಿ ಸೀಸಕದ ಜೋಡುಗಳ (ಕ) [12] ವಂಟ (ಕ) [13] ಕೆ ರಾವುತಪಾಯಕರು (ಇ ಉ ಎ ಕ ಗ) [14] ತೊಡುಬಿ (ಇ) ತೊಡುವಿ (ಎ ಗ) [15] ಗ (ಐ) [16] ಹ (ಇ ಎ ಗ) [17] ಮಟ್ಟು (ಇ ಎ ಗ) [18] ಪಂಥವಾತು (ಇ ಎ ಗ) * (ಉ) ಪ್ರತಿಯಲ್ಲಿಲ್ಲ.

ಇಕ್ಕಿದ ಬಿರುದೊಂದಾಗೆ ಜಗಳಕೆ [1]ಮೆ
ಯ್ಯಿಕ್ಕುವ[1] ಪಾಡುಪಂಥಗಳ
ಲೆಕ್ಕಿಸದಂತಾಡುತ ಪೊಱ[2]ವಂಟ[2]ರು
ಕಕ್ಕಸ ಮಿಗೆ ರಾವುತರು ೧೮

ಎಳೆದು ಬಿಳಿದು ಚಂದ್ರಗಾವಿ ಸಂಪಗೆವಣ್ಣ
ಹಳದಿ ತನ್ನದು ನನ್ನ[3]ದೆನುತ[3]
ಕಲಹವಾಡುತ ಬಿ[4]ರು[4]ದಿಗೆ ಪೊಱಮಟ್ಟರು
ಕಲಿಗಳು ರಣಕನುವಾಗಿ ೧೯

ಅಂಡದ ಝುಲ್ಲಿ ಹೊಕ್ಕುಳ ಘಂಟೆ [5]ಯಾ[5]ನೆಯ
[6]ಸು[6]ಂಡಿಲು ಬೆನ್ನ ಕನ್ನಡಿಯ
ಕಂಡು ಜಗಳವಾಡುತ ಪೊಱಮಟ್ಟರು
ದ್ದಂಡ ಬಿ[7]ರಿ[7]ದಿನ ರಾವುತರು ೨೦

ಚಿನ್ನದ ಬೆಳ್ಳಿಯ ಪಕ್ಕರೆಗಟ್ಟಿದ
ರನ್ನದ[8]ಬಾಕು ಕಯ್ಯಂಬು[8]
ಹೊನ್ನ ಚೂಡಾಯುತ ಮೆಱೆಯೆ ಬಂದರು ಕೂಡೆ
ಕನ್ನಡ ರಾಯರಾವುತರು ೨೧

*[9]ಜ[9]ಡೆಯ [10]ಗೊಂಡೆಯ ಕಂಗಲ ಜೋಡು[10] ಕಟ್ಟಿದ
ಕಡಿ[11]ದಬ್ಬೆ[11] ಕಯ್ಯ ಸಿಂಗಾಡಿ
[12]ತೊಡೆಯ ಬಲ್ಲೆಹ[12] ಮಿಗೆ ಮೆಱೆಯ[13]ಲೆಯ್ತ[13]ಂದರಂ
ದೊಡ[14]ನೆ ತುರುಕ[14]ರಾವುತರು ೨೨

†ತೊಡಪಿನ ಸವಗ ಬಟ್ಟಲ ಠಾಳಿ[15]ಮ್ಯೆ[15] ಜೋಡು
ಪಿಡಿದ ಖಂಡೆಯ ಕಟ್ಟಿ ನೇಲ್ವ
ಇಡಿಗಟ್ಟಿಗೆಯ ಬತ್ತಳಿಕೆ ರಾಜಿಸೆ ಬಂದ
ರೊಡನೊಡ್ಡಿಯ ರಾವುತರು ೨೩

---

[1] ಮ್ಯೆಯಿಕ್ಕುತ (ಇ ಉ) ಮೇಲಿಕ್ಕುವ (ಐ) [2] ಮಟ್ಟ (ಇ ಎ ಗ) [3] ದೆಂದು (ಉ) [4] ರು(ಉ) [5] ಆ (ಐ) [6] ಸೊ (ಇ) [7] ರು (ಉ) [8] ಬಂಕು ಕಯ್ಯಂಬು (ಅ ಕ) ಕಯ್ಯಂಬುಗಳನು (ಇ ಎ ಗ) [9] ಜೆ (ಎ ಐ ಗ) [10] ಕಂಗಲ ಜೋಡು ಸೀಸಕ (ಇ) [11] ದಾಬು (ಕ) ದಾಬೆ (ಇ ಎ ಗ) [12] ತೊಡೆಯ ಬಲ್ಲೆಯ (ಇ) [13] ಲ್ಯೆತ (ಇ ಉ ಐ) [14] ನೊಡ್ಡಿಯ (ಐ) [15] ಮೆಯ್ (ಎ ಗ) † (ಉ ಐ) ಗಳಲ್ಲಿಲ್ಲ * ೯ನೆಯ ಸಂಧಿಯ ೧೧೨ನೆಯ ಪದದಿಂದ ಇಲ್ಲಿಯವರೆಗೆ (ಅ) ಪ್ರತಿಯಲ್ಲಿ ಗ್ರಂಥ ಲೋಪ.

ಲಾಳ ರಾವುತರ್ಗಾರಿಯರಾವುತರು ಕೈ
ಮೇಳದ ಕನ್ನೋಜಿಗಳು
ಗೌಳರಾವುತರು ಗುರ್ಜರರಾವುತರು ಬಂದ
ರಾಳುತನದ ಮ[1]ಚ್ಚ[1]ರದೊಳು ೨೪

*[2]ತಳೆದು[2]ಕಾಲ್ಪರಜೆಯ ಪೊಕ್ಕುಳಘಂಟೆಯ
ನೆಳಲಿಕ್ಕಿ ಬಿಗಿದು[3]ಗುಳ[3]ವನು
ತಳಸಂಕಲೆಯನಳವಡಿಸಿ ಕರಿಯನೇಱಿ
ಕಲಿಜೋದ[4]ರೆಳ್ತಂ[4]ದರಂದು ೨೫

*[5]ಆ[5]ರೆಗಟ್ಟಿಗೆ ಮೊಳೆವಣಿ[6]ಕೂ[6]ರಂಕುಶ
ಸೇರಿ ಬಾಜಿಸುವ ಡಾವಡೆಗಳ
ಕೂರಾನೆಗಳನೇಱಿ ಮಾವಟಿಗರು ಬಂದ
ರಾರಭಟೆಯ ವೃತ್ತಿಯಿಂದ ೨೬

ಮದಧಾರೆ ಮಳೆ ಕೊಂಬಿನ ಪೊಂಬಳೆ ಮಿಂಚು
ಉದಿತ ಬೃಂಹಿತ ಮೊಳಗಾಗೆ
ಮದಗಜಗಳು ಕಾರ ಕಾದಂಬಿನಿಯೆನ
ಲೊದ[7]ವಿ[7] ಬಂದವು ಕಾ[8]ಳೆ[8]ಗಕೆ ೨೭

ರನ್ನದ ಮೊಗರಂಬ ಬೆಳ್ಳಿಯ ಪಕ್ಕರೆ
ಚಿನ್ನದ ಪೊರಜಿ ಮೆಱೆಯಲು
ಮನ್ನೆಯಗಜಸಿಂಹ ಕಂಪಿಲರಾಯನ
ಮನ್ನಣೆಯಾನೆಯೆಯ್ದಿ[9]ದವು[9] ೨೮

ಮದವಿಳಿಯದ ಕೂರಾನೆಗಳೆತ್ತಿ[10]ದೊ[10]
ಡೊದಗುವ ಸನ್ನೆಯಾನೆಗಳು
ಇದಿರಾದರ ಕೊಲುಶಂಕದಾನೆಗಳಂದು
ಕದನಕೆ ಪಣ್ಣಿ ನಡೆದವು ೨೯

---

[1] ತ್ಸ (ಉ ಐ) [2] ಕಳಿದು (ಎ) ತಳೆ (ಐ) ತಳೆದು (ಇ) [3] ಗೂಳ (ಇ ಎ ಗ)
[4] ರೈತಂ (ಕ) [5] ಹಾ (ಐ ಕ) [6] ಮಾ (ಎ ಗ) [7] ಗಿ (ಐ) [8] ಳೆ (ಇ ಎ ಗ)
[9] ದುದು (ಉ) [10] ದ (ಅ ಉ) * (ಉ) ಪ್ರತಿಯಲ್ಲಿಲ್ಲ.

ಗಳಿತಕಪೋಳದ ಮದಧಾರೆಗೆಱಗುವ
ವಿಲಸಿತಮಧುಕರನಿಕರ
ಎಳಸಿದುದೆಳೆ[1]ನೀ[1]ಲಿಯ ನಿಡುದೊಂಗಲ
ನೆಳಲಿಕ್ಕಿದಂತಾನೆಗ[2]ಳ[2] ೩೦

ತೆರೆಯ ಹರಿಗೆ ತಳಪದ ಕತ್ತಿ ಮೆ[3]ಯ್ಯೊ[3]ಡು
ಹೊರ[4]ಳಿ[4]ಯ ಝುಲ್ಲಿ [5]ಹರಿಗೆಯ[5]
[6]ಬಿರಿ[6]ದು ಚೂಡಾ[7]ಯ[7]ತ ಬಿಗಿದುಟ್ಟ ದಟ್ಟಿಯ
ಹರಿಗೆಯವರು ತಱಬಿದರು ೩೧

ಚಿನ್ನದ ಬೆಳ್ಳಿಯ [8]ಹಾಸದ[8] ಹರಿಗೆಯ
ಹೊನ್ನಖಡೆಯದ ಪೆಂಡೆಯದ
ಮನ್ನಣೆಯುಕ್ಕಟಿಗರು ಪೊಱಮಟ್ಟರಂ
ದುನ್ನತ ಶೌರ್ಯಮ[9]ದದೊಳು[9] ೩೨

*ಬಲೆ ಪ[10]ಟ[10] ಹನುಮನ ಬಾಲ ಚಬುಕು ಕೊಳ್ಳಿ
ತೊಲಗದ ಕಂಭ ಮು[11]ಂದುಲಿವ[11]
ತಲೆ ಕಳಸದ ಬಿರಿದಿನ ಹರಿಗೆಯ ಮಂದಿ
ಕಲಹಕ್ಕೆ ಪೊಱಮಟ್ಟ[12]ರೊಸೆದು[12] ೩೩

ಚಿನ್ನದ ಬೆಳ್ಳಿಯ ಕಟ್ಟಿನ ಬಿಲ್ಲಿನ
ಬೆನ್ನ ಬತ್ತಳಿಕೆಯ ಕಯ್ಯ
ಪೊನ್ನ [13]ಪೊಡೆ[13]ಯ ಕಟ್ಟಿದ ಸುರಗಿಯ ಬಿಲ್ಲ
ಬಿನ್ನಣಿಗರು ಬಂದರಂದು ೩೪

†ಪಡಿವೆ[14]ದೆ[14] ಪಿಡಿ[15]ದಂಬುಡಿ[15]ಯ ಝುಲ್ಲಿ ಕಯ್ಪೊಡೆ
ತೊಡೆ ಚಲ್ಲಣ ತೊಟ್ಟ ಜೋಡು
ಬಿಡದೆ ಮೆಱೆಯೆ ಬಿಲ್ಲವರು ನಡೆತಂದರು
ಸಡಗರದಿಂ[16]ದ ಸಂಗರಕೆ[16] ೩೫

---

[1] ವೀ (ಅ ಇ ಉ ಎ ಗ) [2] ಳು (ಇ ಉ ಐ) ಳಿಗೆ (ಎ ಗ) [3] ಮ್ಯೆಜೋಡು (ಅ ಇ ಉ ಎ ಕ) [4] ಳೆ (ಇ) ಜೆ (ಎ ಗ) [5] ಮೆಱೆಯಲು (ಉ) [6] ಬಲಿ (ಅ) [7] ಯಿ (ಅ) [8] ಹಾಸಿನ (ಇ) ಕಾಸೆಯ (ಎ) [9] ದದಲಿ (ಉ) ನದಲ್ಲಿ (ಎ) ನದಲಿ (ಗ) [10] ಟ್ಟ (ಇ) [11] ದುಲಿವ (ಇ) [12] ರೊಲಿದು (ಕ) ರಂದು (ಇ) [13] ಕೊಡೆ (ಇ) ಪೊದಕೆ (ಐ) [14] ಡೆ (ಎ ಗ) [15] ಯಂಬುಡಿ (ಐ ಕ) [16] ದಿಂ ಸಂಗರಕ್ಕೆ (ಎ ಗ) * (ಉ) ಪ್ರತಿಯಲ್ಲಿಲ್ಲ

†ಪಡಿವೆದೆ ಪಿಡಿದಂಬುಡಿ ಝುಲ್ಲಿಯುಟ್ಟಿಹ । ನಿಡುಗಾಸೆಯ ಬಿಲ್ಲವರು
ಕಡುಕಾತುರದಿಂದ ಕಲಹಲಂಪಟರಾಗಿ । ನಡೆತಂದರು ರಾಯನೆಡೆಗೆ (ಇ)

ಪಿಡಿದ ಸಬಳ ಕೈ[1]ಕ[1]ತ್ತಿ ಪೂಸಿದ ಗಂಧ
ನಡುವಿನ ಬಂಕು [2]ಪೆರ್ದು[2]ಬುಬು
ಉಡಿಜಲ್ಲಿಯುಟ್ಟ ಕಾಶೆಯು ಸಬಳಿಗರಂದು
ನಡೆದು ಬಂದರು ನಲವಿಂದ ೩೬

ಮಲಯಜದಣ್ಪು ಪೊಂದೊಡಿಗೆ ಪಟ್ಟೆಯ ದಟ್ಟಿ
ಪಳಿಯ ಚಲ್ಲಣ ಕಾಲಕಡೆಯ .
ಹೊಳೆವ ಖಂಡೆಯ ಹೊಸಹರಿಗೆ ಮೆಱೆಯೆ ಬಂದ
ರಳವುಳ್ಳ[3]ಮೈಗಾವ[3]ಲವರು ೩೭

*ಹೊಳೆವ ಹರಿಗೆ ಹೊಸಕಡಿತಲೆ ಬಿಗಿದುಟ್ಟ
ಪಳಿಯ ಪಟ್ಟೆಯ ದಟ್ಟಿ ಮೆಱೆಯೆ
ತಳುವದೆ ಬಂದರು ನೃಪನ ಮೈಗಾ[4]ವ[4]ಲ
ತುಳುವರೊಗ್ಗಾಗಿ ಬೇಗದೊಳು ೩೮

†ಕಟ್ಟಿದ ಮುಟ್ಟದ ಪಾಂ[5]ಡ್ಯ[5]ವಾಳದ ಬಿಗಿ
ದುಟ್ಟಕಾಶೆಯ ಪೊಂದೊಡಿಗೆಯ
ದಿಟ್ಟ ಪಾ[6]ರು[6]ಕರು ಬಂದರು ಕಾಳಗಕೆ ಪೊಱ
ಮಟ್ಟೊಯ್ಯನೊಯ್ಯನೊಗ್ಗಿನೊಳು ೩೯

ಕಾಲಖಡೆಯದ ಪೆಂಡೆಯದುತ್ತರಿ[7]ಗೆ[7]ಯ
ತೋಳ ಬಂದಿಯ ಬಿ[8]ಲ್ಲೆ[8]ಸರದ
ಕಾಲವರಂದು ಕ[9]ಯ್ಗ[9]ಯ್ದು ಕಾಳಗಕೆ ಕ
ಟ್ಟಾಳಾಗಿ ಪೊಱಮಟ್ಟರೊಸೆದು ೪೦

ರಣಕನುರಾಗದಿಂ ನಡೆ ನಿನ್ನನು ಸುರ
ಗಣಿಕೆಯರನು [10]ನೋ[10]ಡಲೀಯೆ
ಎಣಿಕೆ ನಿನಗೆ ಬೇಡಿದಕೆಂದೊರ್ವಳು
ರಣ[11]ರಣಕ[11]ವನೆಯ್ದಿದಳು ೪೧

[1] ಗ (ಇ ಐ ಕ) [2] ಪೂದು (ಇ ಕ) [3] ಮೆಯ್ಯಾ (ಇ) ಮೈಗಾವಿ (ಅಇಎ ಗ) [4] ವಿ (ಅ ಎ ಗ) [5] ಡ (ಅ) [6] ರ (ಐ ಕ) [7] ಕೆ (ಇ ಎ ಗ) [8] ಲ್ಲ (ಅ) ಲ್ಲಿ (ಉ) [9] ಯ್ಯಾ (ಉ) [10] ಕಾಣ (ಉ ಐ) [11] ಕಣಕವ (ಇ) ಕೆರಣವ (ಐ) * (ಇ ಉ) ಗಳಲ್ಲಿಲ್ಲ † (ಉ) ಪ್ರತಿಯಲ್ಲಿಲ್ಲ.

ಎನ್ನನೊಲ್ಲದೆ ಕಾಳೆಗದ ನೆವದೊಳು ಸುರ
[1]ಕನ್ಯೆ[1]ಯರೆಡೆಗೆ ಪೋದಪೆಯ
ನಿನ್ನಿಂದ ಮೊದಲೆಯ್ದುವೆ[2]ನೆಂದೊರ್ವ[2]ಳು
ತನ್ನಾತ್ಮಪತಿಗೆ ನುಡಿದಳು　　　　೪೨

ಸ[3]ತ್ತೊಡೆ[3] ಸಂಗ್ರಾಮರಂಗದೊಳಗೆ ನಿ
ನ್ನೊತ್ತಿನೊಳಳಿಯಬೇಕಾನು
ಇತ್ತಲಿಹುದು ಧರ್ಮವಲ್ಲೆಂದೊರ್ವಳು ತನ್ನ
ಚಿತ್ತವಲ್ಲಭಗೆ ನುಡಿದಳು　　　　೪೩

[4]ಉಳಿದೊಡೊ[4]ಂದಾಗಿ ಬಂದಪೆನಳಿದೊಡೆ[5]ಕೂ[5]
ಡಳಿಯಬೇಕಾನು ನಿನ್ನೊಡನೆ
ಬಳಿಸಂದು [6]ಬಹೆ[6]ನೆಂದು ಬಾಲೆಯೊರ್ವಳು ಬಾ
ಯಳಿದು ಪತಿಗೆ ಪೇಳಿದಳು　　　　೪೪

ಸಾ[7]ವ[7] ಘಾಯ[8]ವಾದೊ[8]ಡೆ ನಿನ್ನಮುಂದಾನು
ಜೀವವ ಬಿಡುವೆನು ಮೊದಲೆ
ಜೀವೇಶ್ವರ ನನ್ನ ಬಿ[9]ಟ್ಟೆಯ್ದ[9] ಬೇಡೆಂದು
ಕೋವಿದೆಯೊ[10]ರ್ವೆಯಾ[10]ಡಿದಳು　　　　೪೫

*ತಱಿ[11]ಸಂದೀ[11] ತೆಱದಿಂದ[12]ವರ್ತಮ್ಮತಮ್ಮ[12]
ಸಱಿಮಿಂಡಿಯರ ಕಯ್ಯಿಂದ
ಕಱೆಯೆ ಕಣ್ಬನಿ ಕಳುಹಿಸಿಕೊಂಡು ಕಲಿಗಳು
ಪೊಱಮಟ್ಟರೊಸೆದು ಕಾ[13]ಳ[13]ಗಕೆ　　　　೪೬

ಸುರನಾರಿಯರು ವಿದ್ಯಾಧರಾಂಗನೆಯರು
ತರಳಾಕ್ಷಿ ನಿನಗೆ ಪಾಸಟಿಯೆ
ಧುರದೊಳೆಂತಳಿವೆನೆನುತ ಮೋಹಿಯೊರ್ವನು
ವಿರಹಕೊಡಲನೊಪ್ಪಿಸಿದನು　　　　೪೭

---

[1] ಚೆನ್ನೆ (ಐ) [2] ನು ಯೆನುತೊ (ಇ ಗ) ನೆನುತೋ (ಉ ಐ) [3] ತ್ತರೆ (ಐ) [4] ಉಳಿದರೊಂ (ಅ) [5] ಕಂ (ಐ) [6] ಏ (ಇ ಎ ಗ) [7] ವಂಥ (ಉ) [8] ಗಳಾದೊ (ಇ) ಗಳಾದ (ಐ) [9] ಬಿಟ್ಟಿರ (ಇ ಎ ಗ) [10] ರ್ವಳಾ (ಇ ಉ ಎ ಐ ಗ) [11] ಸಂದಿತ್ತೆ (ಇ) [12] ನುಡಿವರ ತಮ್ಮ (ಇ) ನುಡಿದ ತಮ್ಮ (ಉ) ನುಡಿವ ತಮ್ಮ (ಐ) [13] ಳೆ (ಇ) *(ಎ ಗ) ಪ್ರತಿಗಳಲ್ಲಿಲ್ಲ.

ಬಾಲೆಯೊರ್ವಳ ಮುದ್ದುಮೊ[1]ಗ ತುಂಬಿದ[1] ಕಣ್ಣ
ನಾಲೋಕಿ[2]ಸುತೊ[2]ರ್ವ ಮೋಹಿ
ಕಾ[3]ಳ[3]ಗಕೆಂ[4]ತೆ[4]ಯ್ದುವೆನೆನು[5]ತೆದೆಯೊಳು[5]
ತಾಳಿದನುರುವಿರಹವನು ೪೮

ತರುಣಿಯೊರ್ವಳ ಮುದ್ದುಮೊಗವನಿಟ್ಟಿಸುತಾ
ದರವಿಗೆ ತೆಗೆದಪ್ಪಿಕೊಂಡು
ಪರಸೇವೆ ಕಷ್ಟವೆನುತ ಮೋಹಿಯೊರ್ವನು
ಧುರಕೆ ನಡೆದನನುವಾಗಿ ೪೯

ಕಡುಮೋಹವ ಮಾಡಿ[6]ದನೊರ್ವ[6] ತನ್ನಯ
ಮಡದಿಯ[7]ನಮರ್ದಪ್ಪಿಕೊಂಡು[7]
ಬಿಡದೆ ಮುಂಡಾಡಿ ಬಿಂಬಾಧರವನು ಪೀರ್ದು
ನಡೆದನು ರಣಕೆ ಬೇಗದೊಳು ೫೦

ಹೊ[8]ಳ[8]ಕೆಯ ಭಂಟ ಸತ್ತರೆ ಸಾಯಬೇಕಾನು
ನಳಿನಾಕ್ಷಿ ನಿನ್ನ[9]ನೆಂತ[9]ಗಲಿ
ಕಲಹಕ್ಕೆ ಪೋಗುವೆನೆನುತೊರ್ವನಿನಿಯಳ
ನೊಲಿದಪ್ಪಿಕೊಂಡು ನುಡಿದನು ೫೧

ಅಲರ್ಗಣ್[10]ಗಳ[10] ಘಾಯವಲ್ಲದೆ ಮೋಹಿಗ
[11]ಳ್ಗ[11]ಲಗಿನ ಘಾಯು[12]ವ[12]ಲ್ಲೆನುತ
ಲಲನೆಯ ಮೊಗದೊಳು ಮೊಗವಿಟ್ಟು ಮುಂಡಾಡಿ
ಕಲಹಕಂ[13]ದೊರ್ವನೆಯ್ದಿ[13]ದನು ೫೨

ಇಕ್ಕಿದ ಹನುಮನ ಬಾಲ ಹಾಯ್ಕಿದ ಪೊಂ
ಬಕ್ಕರೆ ಝಲ್ಲಿಗಳೆಸೆ[14]ವ[14]
ಮಿಕ್ಕಮಾನದ ಕುದುರೆಯನೇಱಿ ಬಂದನಂ
ದಕ್ಕಸಾಲೆಯ ಚಿಕ್ಕ ಬೇಗ ೫೩

---

[1] ಗ ತುಂಬಿನ (ಅ) ವ ತುಂಬಿದ (ಐ) [2] ಸಿಯೋ (ಐ) [3] ಳೆ (ಇ) [4] ತ್ತೈ (ಉ ಐ) [5] ತೋರ್ವನು (ಅ) [6] ದೋರ್ವನು (ಎ ಗ) [7] ಬಿಗಿಯಪ್ಪಿಕೊಂಡು (ಅ) [8] ಣ (ಇ) [9] ನಾನ (ಅ) [10] ಯನ (ಉ) [11] ಳ (ಇ ಐ) [12] ವಿ(ಎ ಐ ಗ) [13] ದಿರದೈದಿ (ಐ) [14] ಯೆ (ಅ).

ಕಾ[1]ಳ[1]ಗದೊಳು ಚೆನ್ನ ಕಾಣಿಪ ರಾವುತ
ರೋಳಿಯು ಗಂಡನೆಂದೆಂಬ
ಕಾಳೆಯ [2]ಧ್ವ[2]ನಿಯ ಕೋಳಾಹಳದಿಂ ಬಂದ
ಕಾಳಾಂಜಿಯ ಕಂಪನಂದು ೫೪

ಡಿಳ್ಳಿಯ ಖಾನರೆಂದೆಂಬ ಮೆದೆಗೆ ಬಲು
[3]ಗೊ[3]ಳ್ಳಿಯೆಂದೆಂಬ ಬಿ[4]ರಿದನು[4]
[5]ಹೊಳ್ಳಿಸುವರ ಗಂಡನೆನಿಸಿಕೊಳುತ ಬೇಗ[5]
ಕೊಳ್ಳಿಯ ನಾಗ[6]ನೆಯ್ದಿ[6]ದನು ೫೫

ಮೆಟ್ಟಿ ನಡೆದು ಬಹ ಪಗೆವಡೆಗಂಡು ಕ
ಣ್ಗೆಟ್ಟೆಡಬಲಕೆ ತೊಲಗುವ
ಹೊಟ್ಟೆಹೊರಕರಾವುತರ ಗಂಡನಾ ದೇವಿ
ಸೆಟ್ಟಿಯ ಲಿಂಗ[7]ನೆಯ್ದಿ[7]ದನು ೫೬

ಅಲ್ಲಲ್ಲ ಚಿನ್ನದ ಹಕ್ಕರಿಕೆಯ ಮೇಲೆ
ನಿಲ್ಲದೆಸೆವ ನಿಡುಬಿಳಿಯ
ಝುಲ್ಲಿ ಮೆಱೆಯೆ ಬಂದನು ಕೂಡೆ ಹಡಪದ
ಬಲ್ಲುಗನತಿ ವಿಭವದೊಳು ೫೭

ತಂಡತಂಡದೊಳು ನಡೆದು ಬಹ ಪೌಜನು
ಕಂಡು ಪಾ[8]ವು[8]ಡಗಳ ಮೆಟ್ಟಿ
ಮುಂಡೆಯು ನೆ[9]ಸಹಿ[9] ನೋಡುವ ರಾವುತರ ಗಂಡ
ಗಿಂಡಿಯ ಲಕ್ಕನೆಯ್ದಿದನು ೫೮

ಜಗದೊಬ್ಬ [10]ಗಂಡನೆಂದೆಂಬ ಬಿರುದನುಱೆ[10]
ಪೊಗಳಿಸಿಕೊಳುತ ಬೇಗದೊಳು
ಮಿಗೆ ಪೊಱವಟ್ಟನೊಕ್ಕಲಿಗ ನಾಗಣ ತನ್ನ
ಬಗೆಯ ರಾವುತರೊಗ್ಗಿನೊಳು ೫೯

---

[1] ಳೆ (ಇ) [2] ಧ (ಉ ಐ) [3] ಕೊ (ಅ) [4] ರುದಿನಾ (ಉ) [5] ನಿಲ್ಲದೆ ಹೊಗಳಿಸುವರ ಗಂಡನೆನಿಸುವ (ಇ ಎ ಗ) [6] ನಡ (ಕ) [7] ನಡ (ಐ) [8] ವ (ಇ ಎ ಐ ಗ) [9] ಸಗಿ (ಇ ಕ) ಗಹಿ (ಐ) [10] ರ ಗಂಡನೆಂದೆಂಬ ಬಿರುದನು (ಇ ಎ ಗ).

ಲಕ್ಕ ಕುದುರೆಯನೆನ್ನೊಂದೆ ಲೌಡಿಗೆ [1]ಸೆಲ[1]
ವಿಕ್ಕೆಂದು ನೃಪತಿ[2]ಯೊಳ್ನುಡಿವ[2]
ಎಕ್ಕಲ ರಾವುತ ಪೊಱಮುಟ್ಟನೊ[3]ಸೆದಂ
ದೆಕ್ಕಲಗಾಯ ದೇವಣನು[3] ೬೦

ಕಂಡು ಮಹಾಪೌಜುಗಳನೊಡೆಯಗೆ ಮುಂ
ಕೊಂಡು ಪೇಳುವ ರಾವುತರ
ಗಂಡನೆನಿಪ ರಾವುತ ಪೊಱಮುಟ್ಟನು
ಭಂಡಾರಿ [4]ಸೋವಣ್ಣನೊಲಿದು[4] ೬೧

ಭೂವಳೆಯಾಧೀಶ್ವರ ಕಂಪನೃಪನ [5]ಮೈ[5]
ಗಾ[6]ವ[6]ಲ ಬಲುರಾವುತನು
[7]ಬಾವನ್ನ ವೀರ ಬವರ ದಲ್ಲಣ ಮಾ[7]ಯಿ
ದೇವರಾವುತನೆಯ್ದಿದನು ೬೨

ಭೂವರನಾಜಿರಂಗದೊಳು ಮೊಗವ ನೋಡೆ
ಗಾವಳಿಯನು ಬಂದು ಪೊಗುವ
ರಾವುತರೆದೆಗತ್ತಿ ಬಂದನೊಯ್ಯನೆ ಸಾಯಿ
ದೇವ ರಾವುತ ಪೊಱಮುಟ್ಟು ೬೩

ಕಲಹ ಕೈಮೀಱಿ ಬರಲು ಕಂಡು ರಾಯನ
[8]ಸೆಲವ ಬೇಡದೆ[8] ಕೆಲಬಲಕೆ
ತೊಲ[9]ಗುವ[9] ರಾವುತರೋಳಿಯ ಗಂಡನು
ತೆಲುಗ ಬಾ[10]ಚ[10]ಣ್ಣನೆಯ್ದಿದನು ೬೪

ಸ್ಥಲದುರ್ಗ ಗಿರಿದುರ್ಗದಿಂ ಬಂದು ಕೂಡಿದ
ಬಲವ ಲೆಕ್ಕಿಸಿ ಪೇಳುವಡೆ
ಪಲವು ನಾಲಗೆಯುಳ್ಳ ಫಣಿ[11]ಪಗಲ್ಲದೆ ಮಿಕ್ಕ
ರ[11]ಳವೆ ಕಂಪಿಲಭೂವರನ ೬೫

---

[1] ಶಲ (ಇ ಉ) [2] ಯುಮುಂದೆ (ಅ)ಯೊಳ್ನುಡಿದ (ಐ) [3] ನೊಲಿದಂ ದುಕ್ಕೆಯ ದೇವರಾಯಣನು (ಐ) ಸೆದಂದು ಕಣ್ಣಿಕ್ಕಲುದೇವರಾಣಿಯರು (ಎ ಗ) ಸೆದಂದೆಕ್ಕದೆ ದೇವರಾಣಿಯರು (ಇ ಉ) ಸೆದನಂದೆಕ್ಕದೇವರಾಣಿಯರು (ಕ) [4] ಸೋಮಣ್ಣನೊಲಿದು (ಐ) ಸೋವಣ್ಣನೊಸೆದು (ಇ ಉ) ಸಾವಣ್ಣನೊಸೆದು (ಎ ಗ) [5] ಮೆಯ್[6] (ಇ ಎ ಗ) [6] ವಿ (ಅ) [7] ಭುವನಾದಿವೀರ ಬವರದಲ್ಲಣಮಾ (ಇ ಎ ಗ) ಬಾವನ್ನವೀರನು ಬವರದಲ್ಲಣಮಾ (ಐ) ಬಾವನ್ನ ಬವರಬವರದಲ್ಲಣ ಸಾ (ಉ) [8] ಛಲವ ಬಿಡದೆ (ಉ) ಶೆಲವ ಬೇಡದೆ (ಇ ಉ ಎ ಗ) [9] ಗದ (ಅ) [10] ವ (ಇ ಎ ಗ) [11] ಪತಿಗಲ್ಲದೆಯ (ಉ).

ಕಳುಹಿದ ರಾಯಸ[1]ಗಳ[1] ತಲೆಯೊಳಗಾಂತು
ಘಳಿಲನೆ ಗಡಿಯ ಮನ್ನೆಯರು
ಇಳೆ ಬೆಸಲಾದಂತೆ ಕೂಡಿತು ತಮ್ಮತಮ್ಮ
ಬಲವೆರಸಂದು ಬೇಗದೊಳು ೬೬

ಠಾ[2]ಣೆ[2]ಯದವರು ದುರ್ಗಾಧಿಪತಿಗಳು ಬಂ
ದಾಣತಿಯೋಲೆ[3]ಯ[3]ನಾಂತು
ಮಾಣದೆ ಬಂದು ಕಂಡರು ದಂಡನಾಥನ
ಕಾಣಿಕೆಯಿಕ್ಕಿ ಕೈಮುಗಿದು ೬೭

ಆನೆಯಗುಂದಿಯಿಂದಾನೆ ಕುದುರೆ[4]ಯಾ[4]ಳು
ತಾನತಿ[5]ವೇ[5]ಗದಿಂ ಬಂದು
ಆನದೆ ಬಿಸಿಲಹಳ್ಳಿಯ ಕಣು[6]ವೆ[6]ಯ ದಾಂಟಿ
ತೇನೆಂಬೆನದಱ ಸಂಪದವ ೬೮

*ಕಣುವೆಯಿಂ ದಂಡನಾಥನ ಕೆಱೆವರೆಗೆ ಸಂ
ದಣಿಸಿದ ಚತುರಂಗಬಲವ
ಎಣಿಸುವಡಹಿಪತಿಗಲ್ಲದೆ ಮಿಕ್ಕನ
ಗಣಕರಳವೆ ಪೇಳ್ವೆನೇನ ೬೯

ನಳಿನಮುಖಿಯರು ಚವರಗಳನೆಡಬಲ
ದೊಳಗೆ [7]ಢಾ[7]ಳಿಸುತೆಯ್ತರಲು
ತಳರ್ದನೋಲಗಶಾಲೆಗೆ ಮಂತ್ರಿವೆರಸಂದು
ಕಲಹಲಂಪಟ ಕಂ[8]ಪಿಲನು[8] ೭೦

ನೆ[9]ನೆ[9]ಯಿಸುತಿಂದ್ರಚಾಪವ ತೊಟ್ಟ ತೊಡಿಗೆಯ
ತನಿವೆಳಗಿಂದ ಭೂವರನು
ಮನ[10]ವೊ[10]ಲಿದೆಯ್ತಂದು ಮಂಡಿಸಿದನು ರತ್ನ
ವಿನುತಸಿಂಹಾಸನದೊಳಗೆ ೭೧

ಸಮುದಿತ ನಕ್ಷತ್ರಮಧ್ಯದ ತಾರಾ
ರಮಣನಂತಾ ರಾಜಚಂದ್ರ
ಸಮರಸನ್ನರ್ದನೃಪರನಡುವೆಸೆದನು
ಸುಮುಹೂರ್ತವನಾಲಿಸುತ ೭೨

---

[1] ವನು (ಇ ಉ ಎ ಐ ಕ ಗ) [2] ಣ (ಉ ಐ) [3] ಯವ (ಎ ಗ) [4] ಯೊ (ಇ ಎ ಗ) ಗ (ಐ) [5] ಬೇ (ಅ) [6] ವೆ (ಇ ಗ) [7] ಧಾ (ಐ) [8] ಪನೃಪತಿ (ಉ ಗ ಎ) [9] ನ (ಅ) [10] ವ (ಇ) * (ಉ) ಪ್ರತಿಯಲ್ಲಿಲ್ಲ.

ಆ ಸಮಯದೊಳು ಪುರೋಹಿತ ಪೇಳಲು
ಲೇಸಿನ ಲಗ್ನದುದಯುವ
ಓಸರಿಸದೆ ತೆರಳಿದನಂದು ಸಮರಕೆ
ಮಾಸಾಳಾಗಿ ಕಂಪಿಲನು ೭೩

ಮುಂದೆ ಬಹಳ ಭೇರಿಗಳು ಮೊಳಗಿದವು ಖೋ
ಯೆಂದೊ[1]ದಱಿ[1]ದವು ಕಹಳೆಗಳು
ಅಂದುಲಿದವು ತಂಬಟೆಗಳು ನೃಪತಿ ತನ್ನ
[2]ನ[2]ಂದನ ಸಹ ಪೊಱಮಡಲು ೭೪

ದೆಸೆಯಾನೆಗಳುಱೆ ಬೆರ್ಚಿ ಕಡಲು ತೆರೆ
ಮಸಗಿ ಮೇರೆಯ ಮೀಱಿ [3]ಪೆರ್ಚೆ[3]
ಎಸೆದುದು ಜಯದುಂದುಭಿನಾದ ಭೂಮಿಯ
ಮುಸು[4]ಕಿ[4] ಕಂಪಿಲಭೂವರನ ೭೫

ಬಳಸಿ ಬರಲು ದಂಡನಾಥ ಮಂಡಳಿಕರು
ಘಳಿಲನೆ ಕಂಪಿಲನೃಪತಿ
ಇಳಿದ[5]ನು[5] ದುರ್ಗದಿಂದಿಳೆ[6]ಗೀ[6] ನೆಲಕಿಂದ್ರ
ನಿಳಿವಂತೆ ಸುರಲೋಕದಿಂದ ೭೬

ಗುರುಜನ ಪುರಜನ ಬಂಧುಜನಂಗಳ
ಪರಕೆ ತೀವಲು ಕಿವಿಗಳನು
ಗಿರಿದುರ್ಗದಿಂದಿ[7]ಳಿದವನಿಪ ತನ್ನಯ[7]
ನೆರೆದ ಬಲವ ನೋಡಿದನು ೭೭

ನೋಡಿದ ಬಲವ ಸಂತಸಗಡಲೊಳಗೋ
ಲಾಡುತ ಮಗರಾಮ[8]ಗೂಡಿ[8]
ಕೂಡೆ ತೆರಳಿದನು ನೃಪತಿ ಬಹಳದಳ
ವಾಡ ನಡೆದುದೇ[9]ನೆಂ[9]ಬೆ ೭೮

---

[1] ರಲಿ (ಉ) [2] ಕ (ಅ) [3] ಬಿರ್ಚೆ (ಎ ಐ ಗ) [4] ಕೆ (ಇ ಉ ಎ ಗ)
[5] ನವನು (ಗ) [6] ಗೆ (ಇ ಎ ಗ) [7] ದನು ಅವನಿಪತನ್ನ (ಅ) [8] ವೆರಸು (ಉ)
[9] ನನೆಂ (ಅ ಉ).

*[1]ಪೆಡೆಯ ಪಲ್ಲಟಿ[1]ಸೆ ಫಣಿಪ ದೆಸೆಯಾನೆಗ
ಳ್ಕೊಡಹೆ ತಲೆಯ ಭಾ[2]ರ[2]ದಿಂದ
ಪಡೆ ನಡೆದುದು ಪಟಹದಧ್ವನಿ ಲೋಕವ
ನಿಡಿಯೆ ಕಂಪಿಲಭೂವರನ ೭೯

ಮೊಳಗುವ ಜ[3]ಯಧ[3]ಡಿಂಡಿಮ ಶಂಖಂಗಳ
ಕಳಕಳನಾದವೆಸೆಯಲು
ತಳರ್ದನು ಕಂಪಿಲನೃಪತಿ ಬೆಳ್ಗೊಡೆಯ ತ
[4]ಣ್ಣೆ[4]ಳಲೊಳು ಮಗರಾಮ[5]ವೆರಸು[5] ೮೦

ಅಂಕದಾನೆಗಳೆಡಬಲದೊಳು ಬರೆ ನಿ
ಶ್ಶಂಕರಾವುತರು ಮುಂದೆಯ್ದೆ
ತೆಂಕ ಮುಂತಾಗಿ ನಡೆದನವನಿಪ ಸಮ
ರಾಂಕಣಕಂದು ಲೀಲೆಯೊಳು ೮೧

ನೆಗ[6]ಳ ನೇಜೆಯ ಬಗೆ[6]ಬಗೆಯ ಪತಾಕೆಗ
ಳ್ಮುಗಿಲನಲೆವುತ ಮುಂದೆಯ್ದೆ
ಪೊಗಳುತ ವಂದಿಗಳೆಯ್ತರೆ ರಾಮನ
ಮೊಗವ ನಿಟ್ಟಿಸುತೆಯ್ದಿದನು ೮೨

ಎಡ[7]ವಂಕ ಬಲವಂಕ[7] ಬೇಡ ಪವುಜು ರಾಯ
ಪಡೆ ನಡೆ[8]ಯಲು ಕಂಪಿಲನು[8]
ನಡೆದನು ನಲವಿಂದ ನಾನಾದೇಶದ
ಕಡುಗಲಿಗಳ ಮೋಹರದೊಳು ೮೩

ಬಾಗೂರ ಕಣಿವೆಯ ದಾಂಟಿತು ಸೇನಾ
ಸಾಗರ ಬಲ್ಲಾಳನೃಪನ
ಭೋಗಧಿನಾಯಕ ತಳುವೇತಕಿನ್ನೆಂದು
ಆಗ [9]ಪೇಳಿ[9]ದನೊರ್ವ ಚರನು ೮೪

---

1 ಪಡೆಯಪಲ್ಲಡಿ (ಇ ಎ) ಪೆಡೆಯಪಲ್ಲಡಿ (ಅ) 2 ಗ (ಅ) 3 ಯ: (ಐ) 4 ಣ್ಣೆ (ಇ ಉ ಎ ಗ) 5 ಸಹಿತ (ಇ ಎ) ವೆರಸಿ (ಎ ಗ) 6 ಳುನೆದೆಯಬಗೆ (ಕ) ಳನೆದೆಯಬರೆ (ಎ ಗ) ಳನೆದೆಯಬಗೆ (ಅ) 7 ವಕ್ಕ ಬಲವಕ್ಕ (ಇ) 8 ದುದು ಕಂಪಿಲನು (ಅ) ಯಲುಕಂಪನೃಪತಿ (ಎ ಗ) 9 ಳೊರೆ (ಉ) * (ಉ)ನಲ್ಲಿಲ್ಲ.

ಕೇಳುತ ನುಡಿಯನವನಿಪತಿ ತನ್ನ ಕಾ
ಲಾಳಾನೆ ಕುದುರೆಯೊಗ್ಗಿನೊಳು
ಧಾಳಾಧಾಳಿಯಿಂ ಬಂದು ಬಿಟ್ಟನು ಬ
ಲ್ಲಾಳನೃಪತಿಗಿದಿರಾಗಿ ೮೫

ಒಂದುಯೋಜನದಳತೆಯೊಳು ಬಲ್ಲಾಳನ
ಸಂದ ಸೇನಾಚಕ್ರವಿರಲು
ಬಂದುಬಿಟ್ಟನು ಬೀಡ ಕಂಪಿಲ ಸಮರಾ
ನಂದ[1]ಕೈಮಿಗೆ ಬೇಗದೊಳು[1] ೮೬

ಇರಲಾನುಭಯರಾಯರ ಸೇನೆಯಿಱದಾಡಿ
ಮರಣವೆಯ್ದದೆ [2]ಮೂಣ[2]ದೆಂದು
ಕರುಣದಿಂ ಪೋಪಂತೆ ಪೋಗಿ ತರಣಿ ಮೆ
ಯ್ಗರೆದನು ಪಡುಗಡಲೊಳಗೆ ೮೭

*ಇದುಪರದಾರಸೋದರರಾಮನಾಥನ
ಪದಕೃತಿಯೊಳಗೆ ಮೂಱನೆಯ
ವಿದಿತಾಶ್ವಾಸದೊ[3]ಳೆರಡನೆ[3]ಯದು ಸಂಧಿ
ಮೃದುಪದಚಯಸಂಬಂಧಿ ೮೮

---

[1] ಸಾಹಸ ಭೂಮಿಯೊಳು (ಎ ಗ) [2] ಬಿಡ (ಎ ಗ) [3] ಳ್ಟನ್ನೊಂದನೆ (ಇ)
(ಅ ಎ ಐ ಗ ಚ ಟ) ಪ್ರತಿಗಳಲ್ಲಿಲ್ಲ.

# ಹನ್ನೆರಡನೆಯ ಸಂಧಿ

---

**ಪಂಥಪಾಡು**

ಆಡುವ ಪಂಥದಿಂ ಪೂರ್ವಪುರುಷರಂದು
ಮಾಡಿದ ಶೌರ್ಯದುನ್ನತಿಯು
ಪಾಡುಗಳಿಂದಾ ರಾತ್ರಿಯನೆರಡುಂ
ಬೀಡಿನ ಭಟರು ಕಳಿದರು ೧

ಕದನಕ[1]ರ್ಕ[1]ಸ ವೀರರಾಮನ ವಿಕ್ರಮ
ದೊದವ ನಿರೀಕ್ಷಿಸಲೆಂದು
ಮುದ[2]ಮಿಗ[2]ಲೆಯ್ತಂದನೆಂಬಂತಿನನಂ
ದುದಯಾದ್ರಿಯನೆಯ್ದಿದನು ೨

ಉಭಯ ರಾಯರ ಬೀಡಿನೊಳಗೆ ಬಹಳ ದುಂ
ದುಭಿಗಳುಲಿಯೆ ಬೇಗದಿಂದ
ವಿಭುಗಳಿರ್ವರು [3]ಪೊಱಮಟ್ಟ[3]ರು ಬಲದಾ
[4]ರ[4]ಭಟೆಯಂಜಿಸೆ ದಿಕ್ಪತಿಗಳ ೩

ಸುರಭಿ ಕುಸುಮದಾಮ ಗಂಧಾನುಲೇಪನ
ವರರತ್ನಭೂಷಣವೆಸೆಯೆ
ತುರಗವನೇಱಿ ಮ್ಯೆಯ್ಗಾವಲವರ ಮೋ
ಹರದೊಳೆಸೆದನು ಕಂಪಿಲನು ೪

ರಾಜಾಧಿರಾಜ ಕಂಪಿಲನ ನೇಮದೊಳಂ
ದೋಜೆದಪ್ಪದೆ ಮನ್ನೆಯರು
ಪೌಜುಮಾಡಿದರು ಕುಱುಹಿನ ಠೆಕ್ಕೆ[5]ಯಗಳ[5]
ರಾಜಿ ಮೆಱೆಯೆ ಗಗನದೊಳು ೫

---

[1] ಕ್ಕ (ಅ) [2] ಮಿಗಿ (ಎ ಗ) ದಿಂದ (ಕ ಐ) [3] ಪೊಱವಂಟ (ಐ ಕ)
[4] ರು (ಐ) [5] ಗಳ (ಐ).

ಲಕ್ಕಕಾಲಾಳೈದು ಸಾವಿರಕುದುರೆ ಮೇ
ಲಿಕ್ಕುವ ಕೂರಾನೆ ನೂಱು
ಲೆಕ್ಕಕ್ಕೆ ಬಂದಿರೆ ರಾಯಮೋಹರ ಕಣ್ಗೆ
ತೆಕ್ಕನೆ ತೀವಿ ಮೆಱೆದುದು ೬

*ಸಾವಿರ ಕುದುರೆ ಮೂವತ್ತಾನೆ ಹದಿನೈದು
ಸಾವಿರ ಕಾಲಾಳುವೆರ[1]ಸು[1]
ಭಾವಸಂಗಮದೇವನೆಸೆದನು ರಾಯರ
ದೇವನ ಬಲ[2]ವಕ್ಕದೊಳಗೆ[2] ೭

ತುರಗ ಸಾವಿರ ಹದಿನೈದು ಸಾವಿರ ಮಂದಿ
ಕರಿಗಳು ಮೂವತ್ತುವೆರ[3]ಸು[3]
ಕರಮೆಸೆದನು ಕಂಪ ನೃಪನೆ[4]ಡವಂಕ[4]ದೊ
ಳಿರದಣ್ಣ ಭೈರವ ದೇವ ೮

ಕರಿಗಳೈವ[5]ತ್ತಾಳೆ[5]ಪ್ಪತ್ತುಸಾವಿರ
ತುರಗವೆರಡು ಸಾವಿರದೊಳು
ಕರಮೆಸೆದನು ಕಾಟಣ್ಣ ಕಂಪಿಲ ಭೂ
ವರನ ಮುಮ್ಮೊನೆಯ ಪೌಜಿನೊಳು ೯

ತಟ್ಟುವ ಸಾವಿರ ಹತ್ತುಸಾವಿರ ಬಿಲ್ಲ
ಕಟ್ಟಾಳು ಬೇಡರ ಪೌಜು
ನೆಟ್ಟನೆಸೆದುದು ಚೂಣಿಯೊಳರಿ ಬಲವನು
ಮುಟ್ಟಿ [6]ತಿವಿ[6]ವ ತವಕ[7]ದೊಳು[7] ೧೦

ನೂಱಾನೆ ಮೂವತ್ತುಸಾವಿರ ಕಾಲಾಳು
ಮೂಱುಸಾವಿರ ಕುದುರೆಗಳ
ಕೀಱು ತೆಗೆದುಕೊಂಡು ಪೌಜು ಮಾಡಿದನಂದು
ಬೇಱೆ ವಿಕ್ರಮ ಭೀಮ ರಾಮ ೧೧

---

[1] ಸಿ (ಐ ಕ) [2] ವಂಕದಲಿ (ಐ) ವಂಕದೊಳು (ಎ ಗ) ವಂಕದೊಳಗೆ (ಉ ಕ) [3] ಸಿ (ಐ ಕ) [4] ಡವಕ್ಕ (ಇ ಎ ಗ) ಡೆವಂಕ (ಕ) [5] ತ್ತಾಳಿ (ಇ ಉ ಎ ಐ ಕ ಗ) [6] ಪಿಡಿ (ಎ ಗ) [7] ದಲಿ (ಇ).

ತನ್ನ ನೂಱಿಪ್ಪತ್ತು ವಾರುವಗಳನಂದು
ತನ್ನಮೈಯ್ಗಾವಲವರಿಗೆ
ಮನ್ನಣೆಯಿಂದಿತ್ತು ನಿಜ[1]ತುರಗವ ನೋಡಿ[1]
ಚೆನ್ನಿಗ ರಾಮು [2]ನಲಿದ[2]ನು   ೧೨

ರನ್ನದ [3]ಪಕ್ಕರೆ[3] ಪಚ್ಚೆಯ [4]ಪಲ್ಲಣ[4]
ಚಿನ್ನದ ಲಾಳ ಬಜ್ಜರದ
ಚೆ[5]ನ್ನಕ[5]ಡೆಯು ಚೆ[6]ಲ್ವುವಡೆ[6]ದಿರೆ ಜಾತ್ಯಶ್ವ
[7]ಮು[7]ನ್ನೋಡಿ ನಲವೇಱಿದನು   ೧೩

ಬಲವಂದು ಕುದುರೆಯ ಚರಣಗಳಿಗೆ ಪೊಂ
ಗಳನಿಕ್ಕಿ ಮಣಿದು ಮಸ್ತಕವ
ನಲವಿಂಗ ಬೆಂಗೆವಾಯ್ದನು ಭಟ್ಟ ಮಾಗಧ
ರ್ವುಲಿಯೆ ಖೋಯೆಂದು ಬಿ[8]ರು[8]ದನು   ೧೪

ಗಂಡರ ಗಂಡ ಗರ್ವಿತರಾಯ ಶರಭ ಭೇ
ರುಂಡ ಮನ್ನೆಯ ಗಜಸಿಂಹ
ಚಂಡಪರಾಕ್ರಮ ಜಯಜಯಜಯಯೆಂದು
ಕೊಂಡಾಡಿದರು [9]ವಂದಿಗಳು[9]   ೧೫

[10]ಚ[10]ಲದಂಕಮಲ್ಲ ಚೆಲ್ವರ ಗಂಡ ಭೂಮಿಯ
ಕಲಿಗಳೆಱೆಯ ವೀರರಾಮು
ಗೆಲುಗೆಲೆಂದುಲಿವ ಭಟ್ಟರ ಜಯರವ ಕಲ
ಕಲವೆಸೆದುದು ಪೇಳ್ವೆನೇನ   ೧೬

ಪರವನಿತೆಯ[11]ರಂಗ[11]ಲಾವಣ್ಯ[12]ಗ[12]ಂಡು ಕಾ
ತರಿಸುವ ಕಾಮುಕ ನೃಪರ
ನೆರವಿಯ[13]ಮಿಂ[13]ಡ ಚನ್ನಿಗರಾಮ ಜಯಿಸೆಂ
ದಿರದೆ ಭಟ್ಟರು ಪೊಗಳಿದರು   ೧೭

---

[1] ದಿವ್ಯತುರಗವ (ಕ)  [2] ನೋಡಿದ (ಕ)  [3] ಪಲ್ಲಕ್ಕಿ (ಎಗ)  [4] ಹಲ್ಲಣ (ಉ ಐ ಕ)  [5] ಲ್ವುಖಂ (ಅ)  [6] ಲ್ವನೆಸೆ (ಐ)  [7] ವ (ಇ ಉ ಎ ಐ ಕ ಗ) [8] ರಿ (ಎ ಐ ಗ)  [9] ಮಾಗಧರು (ಕ)  [10] ಥ (ಉ ಐ)  [11] ಠ (ಎ ಗ) [12] ವಕಂ (ಎ ಕ ಗ)  [13] ಗಂ (ಉ ಐ).

ಪರರಾಯರ ಜಯವನಿತೆಗಲ್ಲದೆ ಮಿಕ್ಕ
ತರುಣಿಯರಿಗೆ ಮನಸೋಲ್ವ
ದೊರೆಗಳ ಗಂಡ ಜಯಿಸು ರಿಪುಗಳನೆಂದು
ಪರಸಿದರಂದು ವಂದಿಗಳು ೧೮

ಸುರವೆಣ್ಣಗಲಿ ಪರವೆಣ್ಗೆ ಮನವಿಕ್ಕು
ವರಸು ಮಕ್ಕಳ ಗಂಡ ರಾಮ
ಧುರದೊಳು ಗೆ[1]ಲ್ಲವೆಣ್ಗೊ[1]ಡೆಯ ನೀನಾಗೆಂದು
ಪರಸಿದರವರು ರಾಮನನು ೧೯

ಮಱೆಗೆವಂದರ ಕಾಯದೆ ಮಾಱಾಂತರ
ನಿಱಿಯದೀಯದೆ ಬೇಡಿದರಿಗೆ
ಬಱಿದೆ ಬೆಱೆವ ಕುವರರ ಗಂಡ ಜಯಿಸೆಂ
[2]ದುಱೆ ಪರಸಿದರು ವಂದಿಗಳು[2] ೨೦

ವೀರತೆ ವಿತರಣ ಶುಚಿತೆ[3]ಯಿಂದಿ[3]ಂದ್ರ ಕು
ಮಾರ ರಾಧೇಯ [4]ಶುಕರನು[4]
ಸಾರೆಂಬ ಸಕಲಗುಣೋದಯ ಜಯಿಸೆಂ
ದೋರಂತವರು ಪೊಗಳಿದರು ೨೧

ಅಡಿಯಾಳುವ ಪಸರೆಯ ರಾಯರ ಗಂಡ
ಕೂಡಿ ಕುಹಕವನೆಣಿಸುವ
ನಾಡೆಱೆಯರ ಗಂಡ ಜಯಿಸೆಂದವರು ಬಾ
ಯ್ಗೂಡಿ ಬಣ್ಣಿ[5]ಸಿದ[5]ರವನನು ೨೨

ಇಂತು ಕೊಂಡಾಡಿದ ವಂದಿಜ[6]ನಗಳಿಗ[6]
ನಂತ ವಸ್ತ್ರಾಭರಣಗಳ
ಸಂತಸದಿಂದಿತ್ತು ಪಗೆ[7]ವ[7]ಡೆ ಗೆಲ್ವ ವಿ
ಕ್ರಾಂತದಿಂದಿರೆ ರಾಮನಾಥ ೨೩

---

[1] ಲ್ಲೆವೆಣ್ಗೊ (ಅ) ಲ್ಲವೆಣ್ಣೊ (ಐ) [2] ದೋರಂತವರು ಪೊಗಳಿದರು (ಉ)
[3] ಯೊಳಿಂ (ಐ) [4] ಶಕನನು (ಉ) ಶೂರರನು (ಎ ಗ) ಸುತನನು (ಐ)
[5] ಸುವ (ಐ) [6] ನಂಗಳ (ಐ) [7] ವೆ (ಐ) ಪ (ಉ).

ಸುತ್ತಣ ಗಂಡಶ್ಶೈಲಗಳು[1]ಬೆ[1]ರಸು ಕಾ
[2]ಲ್ಗಿ[2]ತ್ತು ಬೆಚ್ಚೆಯ್ದುವಂದದಲಿ
ಬಿತ್ತರದಿಂದೊಯ್ಯನೆ ರಾಯದಳ ನಡೆ
[3]ಯಿ[3]ತ್ತು ತೆಂಕಣದೆಸೆ[4]ವಿಡಿದು[4] ೨೪

ಕೊಂಬು ಬೊಂಬುಳಿ [5]ಕಾಳೆ ಡೋಳು ದಗಮು ಚಿನ್ನ[5]
ಚೆಂಬಕವಱೆ ತಿತ್ತಿರಿಗಳ
ಡೊಂಬಿ[6]ಯು[6] ಧ್ವನಿಯಿಂದ ಪೌಜುಗಳತ್ಯಾ
ಡಂಬರ[7]ದಿಂದೆಯ್ದಿದವು[7] ೨೫

ಸನ್ನಾಹಭೇರಿಗಳುನ್ನಾದದಿಂ ದೆಸೆ
ನನ್ನಾನನ್ನಿಯಾಗೊಡೆಯ
ತನ್ನ ಮೋಹರಗೂಡಿ ಚೆನ್ನರಾಮುಗ ಶೌರ್ಯ
ದುನ್ನತಿಕೆಯೊಳೆಯ್ದಿದನು ೨೬

*ನಡೆಗೊಂಡತ್ತು ಪತಾಕೆಗಳ್ಮುಗಿಲೊಳು
ತೊಡಕೆ ಭಾರಕೆ ಫಣಿರಾಜ
ಮಿಡುಕೆ ಧೂಳೀಜಾಲ ಗಗನಾಂಗಣವನು
ತುಡುಕೆ ಬಲ್ವಡೆ ಕಂಪಿಲನ ೨೭

ಕಡೆಗಾಲದೊಳಿಳೆಯೊಡೆದಣುರೂಪವ
ಪಡೆದುದೊ ತಾನಿ[8]ದೆಂ[8]ದೆನಲು
ಇಡಿದುದು ನಿರ್ಗತ ಸೇನಾಪದಧೂಳಿ
ತಡೆಯ[9]ದೆ[9] ಲೋಕವೆಲ್ಲವನು ೨೮

ಗುಪ್ತಗಾಮಿನಿಯಾದುದು ದೇವಗಂಗೆಯು
[10]ದ್ದೀ[10]ಪ್ತ ಕಿರಣ ರವಿ ರಥ[11]ದ[11]
[12]ಸ[12]ಪ್ತಿಗಳ್ಪೊಲಬುದಪ್ಪಿದವು ಸೇನಾಪದೋ
ದ್ದೃಪ್ತ ಧೂಳೀಜಾಲದಿಂದ ೨೯

---

[1] ವೆ (ಇ ಎ ಗ) [2] ಲಿ (ಅ ಐ) [3] ದ (ಇ ಎ ಕ ಗ) [4] ಗಾಗಿ (ಐ)
[5] ಡೋಳು ದಗಮು ರುಂಚೆಯು ಚಿನ್ನ (ಉ) ಕಾಳೆಡೋಳು ಡಮಾಮುಚಿನ (ಕ)
[6] ನ (ಐ) [7] ದಿಂದೆಯ್ದಿದರು (ಅ) ಮಿಗಲೆಯ್ದಿದವು (ಇ ಎ ಐ ಗ) [8] ನೆಂ
(ಇ ಎ ಐ ಗ) [9] ದೀ (ಇ ಉ ಎ ಐ ಗ) [10] ದೀ (ಇ ಉ ಐ ಕ) [11] ವ (ಐ)
[12] ಶ (ಐ) ಸು (ಇ ಎ ಗ) * (ಉ) ಪ್ರತಿಯಲ್ಲಿಲ್ಲ.

ಇಳೆಯನಾಗಸವನೆಣ್ದಿಸೆಯನಾವರಿಸಿ ಕ
ತ್ತಲಿಸಿದುದ್ಗತಧೂಳಿ[1]ಯೊಳು[1]
ತೊಳಗುವ ಖಡ್ಗದ ಪೊಳಪಿನಿಂ ತೊಡಿಗೆಯ
ಬೆಳಗಿನಿಂ ಪಡೆ ನಡೆ[2]ದತ್ತು[2] ೩೦

ಅತ್ತ ಬಲ್ಲಾಳನೃಪತಿ ಬೀಡಿನೊಳು ತ
ನ್ನೊತ್ತಿನ ಬಲು ಮನ್ನೆಯರ
ಮೊತ್ತಕೆ ನಿರವಿಸಲವರು ಬೇಗದೊಳಂದು
ಬಿತ್ತರಿಸಿದರು ಪೌಜುಗಳ ೩೧

ಬೆಟ್ಟವೆದ್ದಂತೆ ಬೆಳ್ಮುಗಿಲಿಳಿದವನಿಯೊ
ಳಿಟ್ಟಣಿಸಿದ ತೆಱದಿಂದ
ನೆಟ್ಟನೆಸೆದವು ಪೌಜುಗಳು ನೋಳ್ಪರ ಕಣ್ಗೆ
ಪುಟ್ಟಿಸುತತಿಕೌತುಕವ ೩೨

ರಾಯಮೋಹರವೆಸೆದುದು ಮಂಡಳಿಕ ನಿ
ಕಾಯ[3]ದಿಂದರ[3]ಮಕ್ಕಳಿಂದ
ನಾಯಕರಿಂ ದಳಪತಿಗಳಿಂ ರಾವುತ
ಪಾಯಕರಿಂದಾಳಿಂದ ೩೩

*ಬಲವಂಕದೊಳು ಶೂದ್ರಕುಲಸಂಭೂತರ
ಬಲದೊಡ್ಡು ಯೆಡ[4]ವಂಕ[4]ದೊಳು
ಸಲೆಮೆಱೆದುದು [5]ಕಡುಗಲಿ[5] ಕೋ[6]ಟೆ[6]ಗಾಱರ
ಬಲುಪೌಜು ಬಣ್ಣಿಪೆನೇನ ೩೪

ಗಣನೆಯಿಲ್ಲದಗಜತುರಗ[7]ಸುಭಟರ[7] ಸಂ
ದಣಿವೆರಸತಿಲೀಲೆ[8]ಯಿಂದ[8]
ಅಣಿಯೊಳೆಸೆದನಂದು ದಳಪತಿ ನರಸಿಂಗು
ರಣದಾಕೆವಾಳತನ[9]ದಲಿ[9] ೩೫

---

[1] ನಿಂದ (ಅ) [2] ಯಿತ್ತು (ಐ ಕ) [3] ವರಸು (ಉ) ದರಸು (ಕ) ದಿಂದೊರೆ (ಎ ಗ) ದಿಂದರಸು (ಅ ಐ) [4] ವಕ್ಕ (ಇ ಎ ಗ) [5] ಕಲಿಗಳು (ಅ) [6] ಟೆ (ಐ) [7] ಭಟರ (ಅ) ಸುಭಟ (ಐ) [8] ಯೊಳು (ಇ ಉ ಎ ಕ ಗ) [9] ದೊಳು (ಐ). * (ಉ) ಪ್ರತಿಯಲ್ಲಿಲ್ಲ.

ಕಾಣಿಸಿಕೊಂ[1]ಡು[1] ಮುಂದಣ ಮೋಹರವನು
ಕೇಣಿವಿಡಿದು ತಲೆಗಳನು
ಕಾಣಿಕೆಯೀವ ಬೇಡರ ಪೌಜು [2]ಮೆಱೆ[2]ದುದು
ಚೂಣಿಯೊಳಗೆ ತವಕಿಸುತ	೩೬

ಅಳವುಳ್ಳ ರಾವುತರಳಿಯಮಕ್ಕಳು ಕಾಲ
ಬಲುಪಾಯಕರು ಬಳಸಿ[3]ರಲು[3]
ಕೆಲದೊಳು ಮಗ [4]ಹೊಯ್ಸಳನ[4] ಪವುಜು ಕ
ಣ್ಗೊಳಿಸಿದುದೇನ ಬಣ್ಣಿಪೆನು	೩೭

ಒಡ್ಡಿಯ ತುರುಕ ಕನ್ನೋಜಿ ಘುರ್ಜರ ಲಾಳ
ದೊಡ್ಡಿ[5]ಹ[5] ರಾವುತರುಗಳ
ಒಡ್ಡಣವೆಸೆದುದು ಮಗ ಹೊಯ್ಸಳನೊಲಿ
ದೊಡ್ಡಿದ ಪೌಜಿನೆಡೆಯೊಳು	೩೮

ಹೊಳಕೆಯ ಹೊಂತಕಾಱಿಗಳು ಹೋರಾಟದ
ಕಲಿಗಳು ಬಿರುದಿನ ಭಟರು
ಅಳಿದಮರಾಂಗನೆಯರ ಬಯಸುವ ವೀರ
ರೆಳಸಿದರವನ ಪೌಜಿನೊಳು	೩೯

ಸೂಳೆಬಂಟಿಕೆಯ ಜಗಳದ ಬಂಟರು ಕೈ
ಕಾಲುಮೆಟ್ಟಿನ ತೋಟಿಯವರು
ಕಾಳಗದೊಳಗೆನ್ನ ತನ್ನನೋಡೆನುತ ಕ
ಟ್ಟಾಳಾದರವನ ಪೌಜಿನೊಳು	೪೦

ನಾನೂಱಾನೆ ಯಿಪ್ಪತ್ತುಸಾವಿರ ತುರ
ಗಾನೀಕ ಲೆಕ್ಕಸಲಾಳು
ತಾನದು[6]ಲಕ್ಕಮೂಱೆನೆ[6] ಬಲ್ಲಾಳನ
ಸೇನೆಯ ಸಿರಿಯನೇನೆಂಬೆ	೪೧

ತುರಗ ನೆಗಳು ಕರಿ ನೀರಾನೆಯಾಳಂಬು
[7]ಚ[7]ರ ಮೊಳಗುವ ವಾದ್ಯನಿನದ
ವರಘುಳುಘುಳುರವವಾಗೆ ಸೇನಾಚಕ್ರ
ಶರನಿಧಿಯಂತೆ ಮೆಱೆದುದು	೪೨

---

[1] ಡ (ಉ) [2] ನಡೆ (ಐ) [3] ದರು (ಅ) [4] ದ ಹೊಯ್ಸಳದದೇಶದ (ಇ)
[5] ಹ (ಇ) [6] ಲಕ್ಷಮೂಱೆನೆ (ಅ) ಲಕ್ಕಮೂಱಾಗೆ (ಇ) [7] ವ (ಅ).

ಬಲ್ಲಿದ ಸೋಮದಂಡಾಧಿಪನಾಜ್ಞೆಯಿಂ
ಮೆಲ್ಲಮೆಲ್ಲನೆ ಪೌಜುಗ[1]ಳು[1]
ನಿಲ್ಲದೆ ನಡೆದವು ದುಂದುಭಿಗಳ ರವ
ಘುಲ್ಲಿಸೆ ಮುಗಿಲ ಮೋಹರವ ೪೩

ತೂ[2]ಳ[2]ವೇಳಲು ತುಳಿಲಾಳ್ಗಳು ಮೊಳಗುವ
ತೂ[3]ಳು[3]ವಱೆಯ ಧ್ವನಿಯಿಂದ
ಪಾಳೆಯದಿಂ ನಡೆಗೊಂಡುದು ಬಲ ಬ
ಲ್ಲಾಳರಾಯನ [4]ನಿಯಮದೊಳು[4] ೪೪

ಇಳೆಯುದಿರಲು ತಾ[5]ರಗೆಯುದಿ[5]ರಲು ತಳ
ಮಳ[6]ಲೇ[6]ಳಲು ಮುನ್ನೀರು
ತಳುವದೆ ಮೊಳಗಿದವಂದು ಬಲ್ಲಾಳನ
ಬಲದೊಳು ಬಹಳ ಭೇರಿಗಳು ೪೫

ಕಿವುಡು[7]ವೀಳ[7]ಲು ದೆಸೆಗಳು ದೆಸೆಯಾನೆಗ
ಳ್ಕಿವಿಯ ಕೊಡಹಲು ಮೇಘಗಳು
ಧ್ರುವಲೋಕದತ್ತ ಪಾಱಲು ವಾದ್ಯರವದಿಂದ
ತವೆಕಾಣಿಸಿದವು ಪೌಜುಗಳು ೪೬

ಸೇನಾಪದ[8]ಗ[8]ತ ಧೂ[9]ಳೀಜಾಲದಿಂ[9]
ಭಾನುಮಂಡಲ ಬಯಲಾಗೆ
ಮಾನವಪತಿಗಳೀರ್ವರ ಬಲವೆರಡು ಭೂ
ಮಾನವಱಿ[10]ದು[10] ಸೇರಿದವು ೪೭

ಅತ್ತ ಕಾಟಣ್ಣನಿತ್ತಲು ನರಸಿಂಗು ಕೈ
ಯೆತ್ತಿ ಬೀಸಲು ಬಲವೆರಡು
ಹೊತ್ತವು ಬೆಟ್ಟಗಳನು ಬಂದು ಬೆಟ್ಟಗ
ಳೊತ್ತರಿಸುವ ತೆಱದಿಂದ ೪೮

---

[1] ಳನು (ಎ ಗ) [2] ಳು (ಉ) [3] ಳ (ಅ ಇ ಎ ಗ) [4] ನೇಮದೊಳು (ಅ) ನಿಯಮದೊಳಂದು (ಎ ಗ) [5] ರೆಯುದ (ಇ) ರಗೆಯುದಿ (ಐ) [6] ಗೊ (ಇ) [7] ಕೀ (ಎ) ವೇ (ಅ) [8] ಹ (ಐ) [9] ಳಿಯಜಾಲದಿಂ (ಕ) ಳೀಜಲದಿಂದ (ಇ) [10] ಯು (ಐ).

ಇಳೆ ಘೂರ್ಮಿಸಿತೊ ನೇಸ[1]ಱ ಬಟ್ಟು[1] ಕೆಡೆದುದೊ
ಜಲಧಿ ಮೇಱೆಯ ಮೀಱಿದುದೊ
ಎಳೆಯು ಮೇಘಾಂಡಂಬರ ಮೇಣೆನಲುಱೆ
ಮೊಳಗಿದವಂದು ವಾದ್ಯಗಳು	೪೯

ವಸುಧೆ ಕಂಪಿಸೆ ಸೇನಾಪದಧೂಳಿಯಿಂ
ಮಸುಳೆ ನಿರ್ಮಳರವಿಬಿಂಬ
ಒಸೆದು ತಾಗಿದವೆರಡುಂ ಬಲವಂದು ಮಾ
ಮಸಗಿ ರಣಾವೇಶದಿಂದ	೫೦

ಭೇರಿಯ [2]ಭೋ[2]ಂಕಾರ ಚಾಪದ ಠಂಕಾರ
ವೀರರ ಹುಂಕಾರ [3]ಬಾ[3]ಳ
ಘೋರ [4]ಕ್ಷ[4]ಣತ್ಕಾರವೆಸೆಯಲುಭಯ ಬಲ
ಮೋರೊಂದಱೊಳು ತಾಗಿ[5]ದವು[5]	೫೧

ಕರಿಕರಿಯೊಳು ಕಾಲಾಳು ಕಾಲಾಳೊಳು
ತುರಗ ತುರಗದೊಳು ಬಂದು
ಉರವಣೆ[6]ಯಿಂ[6]ತಾಗಿದವೆರಡುಂ ಬಲ
ಗಿರಿಗಿರಿಯೊಳು ತಾಗುವಂತೆ	೫೨

ಇರದೆ ಬಿ[7]ಲ್ವ[7]ಡೆ ಬಂದಂಬಿಕ್ಕಲಂಬಂಬ
ನೊರಸಿ ಕೆದಱಿದ ಕಿಡಿಗಳು
ಕರಮೆಸೆದವು ಕಡೆಗಾಲದ ಕೆಂಡದ
ಸರಿವಳೆಯೆನೆ ರಣದೊಳಗೆ	೫೩

*ನೇಸಱ ಬೆಳಗಸ್ತಮಿಸಿ ಕತ್ತಲೆ ಕೈ
ವೀಸಿದಂತಾಜಿರಂಗ[8]ದೊಳು[8]
ಓಸರಿಸದೆ ಪುಗಲೆಚ್ಚಾಡಿದರಂ
ದಾಸುರಮಿಗೆ ಬಿಲ್ಲವರು	೫೪

---

[1] ಱು ಬಟ್ಟು (ಐ) ಱ ಬಟ್ಟ (ಅ) [2] ಭಾಂ (ಇ ಉ ಎ ಗ) [3] ಬಹ (ಉ ಐ ಕ) [4] ಖ (ಇ ಐ ಗ) ಝ (ಉ ಕ) ಕ (ಎ) [5] ದುದು (ಐ ಕ) [6] ಯೊಳು (ಐ) ಯಿಂದ (ಉ) [7] ಳ್ವ (ಅ) [8] ವನು (ಕ) * (ಉ ಎ ಗ) ಪ್ರತಿಗಳಲ್ಲಿಲ್ಲ.

ಸುರಿಯೆ [1]ಕರುಳು[1] ಸೂಸೆ ನೆತ್ತರು ಕೈಕಾ
ಲರಿಯೆ ಕಣ್ಣಾಲಿ ಸಿಡಿಯಲು
ಬಿರಿಯೆ ಪೇರುರ ಸೀಳೆ [2]ಶಿರ[2] ಬಿಲುಗಾಱರು
ಧುರದೊಳೆಚ್ಚಾಡಿದರಂದು ೫೫

*ಉರವಣೆಯಿಂ ಬಂದೆ[3]ಸೆಯೆ[3]ಬಿಲ್ಲಪಡೆ ನ[4]ಟ್ಟು[4]
ಸರಳು [5]ಸುಭಟರಸು[5]ಗಳನು
ತೆರಳಿಸಿದವು ಯಮದೂತರಂ[6]ತವು[6] ಯಮ
ಪುರಿಗೆ ಸಮರಭೂಮಿಯೊಳು ೫೬

ನೊರೆನೆತ್ತರೊಱೆಯಲು ಬಿಸಿನೆತ್ತರುಣ್ಮಲು
ಧುರದೊಳೆಚ್ಚಾಡಿ ಬಿಲ್ಲವರು
ಬರೆಯಿಸಿಕೊಂಡರು [7]ಕ[7]ಲೆಗಳ ಕಾಲನ
ಕರಣಿಕರುಗಳ ಕೈಯಿಂದ ೫೭

ಎ[8]ಸೆ[8]ವಂಬು [9]ತೊ[9]ಡುವಂಬು ನಡುವಂಬು ಕಣ್ಗೆ ಕಾ
ಣಿಸದಂಬಂತಿರೆಚ್ಚಾಡಿ
ಅಸುವ ಬಿಟ್ಟರು ರಣದೊಳು ಬಿಲ್ಲವರು ಬಾನೊ
[10]ಳೊ[10]ಸೆದರಮರನಾರಿಯ[11]ರು[11] ೫೮

ಕಣೆಗಳು ತೀರೆ ಸೂ[12]ನಗಿಬಿಲ್ಲು[12]ಗಳಿಂ
ದಣಿಸದೆ ಪೊಕ್ಕಿಱಿದಾಡಿ
ಅಣ[13]ಯೊಳ[13]ಸುವ ಬಿ[14]ಟ್ಟು[14] ಬಿಲ್ಲವರಚ್ಚರ
ಗಣಿಕೆಯರೆಡೆಗೆಯ್ದಿದರು ೫೯

*ಪಿಡಿದಂಬುಗಳು ತೀರೆ ಸೂ[15]ನಗಿವಿಲ್ಲಂ[15]
ದುಡಿಯಲುಡಿಯ ಸುರಗಿಯೊಳು
ಬಿಡದಿಱಿದಾಡಿ ಬಿಲ್ಪಡೆ ಮಡಿದುದು ರಣ
ದೆಡೆಯೊಳು ಕಡುವೇಗದಿಂದ ೬೦

---

[1] ಸರಳು (ಅ) [2] ಸೆರೆ (ಎ ಗ) [3] ಸುವ (ಎ ಗ) [4] ಟ್ಟು (ಅ) [5] ಸುಭಟರಟ್ಟೆ (ಎ ಗ) [6] ತಿರೆ (ಇ ಎ ಕ ಗ) [7] ತ (ಇ) [8] ಸು (ಇ ಉ ಐ) [9] ತು (ಇ ಐ) [10] ಳೆ (ಇ ಎ ಐ ಗ) [11] ರೊಳು (ಐ) [12] ನಿಗೆ ಬಿಲ್ಲು (ಐ) ನಂಗಿನಿಲ್ಲು (ಎ ಗ) ರಗಿಯಿಟ್ಟಿ (ಉ) [13] ಯ್ಯಲ (ಅ) [14] ಟ್ಟ (ಅ) [15] ನಿಗೆ ವಿಲ್ಲಂ ಬಿಲ್ಲಂ (ಐ) ಸೂನಂಗಿವಿಲ್ಲೆಂ (ಎ ಗ) ನಗಿ ಬಿಲ್ಲಂ(ಅ) * (ಉ) ಪ್ರತಿಯಲ್ಲಿಲ್ಲ.

ಬಾಣ ಸ[1]ವೆ[1]ಯೆ ಬಾಣಾ[2]ಸನ[2] ಮುಱಿಯೆ ಬ
ಲ್ಗೇಣಿಂದ ಪೊಕ್ಕಿಱಿದಾಡಿ
ಪ್ರಾಣವನುಳಿದು ಬಿಲ್ವಡೆ [3]ಸಗ್ಗದೊಳು ಪೋಗಿ[3]
[4]ಕಾಣಿಸಿಕೊಂಡರಂದೊಸೆದು[4]　　೬೧

ಮೋಹರದೊಳಗೂಣೆಯವಿಲ್ಲದೆ ಮಡಿ
ದಾಹಾಯೆ ನಿ[5]ಸಿ ಸುಭಟರನು[5]
ಸಾಹಸಿಗಳು ನಾಕದ ಬೆಲೆವೆಣ್ಗಳ
[6]ನೋ[6]ಹಿಗೊಪ್ಪಿಸಿಕೊಂಡರೊಸೆದು　　೬೨

*ಕಣೆವಳೆ ಬಿಲ್ದನಿ ಮೊಳಗು ಕೆನ್ನೀರ್ಜಲ
ಪೆಣ ಬಿತ್ತು ನೆಣ ಮೊಳೆಯಾಗೆ
ರಣಭೂಮಿ ಕಾಲನ ಬೆಳೆಗೆಯ್ವೊಲದ ಸಂ
ದಣಿಯಂತೆ ಕಣ್ಗೆ ಮೆಱೆದುದು　　೬೩

*ಉಡೆಯೊಳು ಕಟ್ಟಿದ [7]ವಂಕುಡಿ ಕಯ್ವೊಳು[7]
ಪಿಡಿದ ಸಬಳ ಕಾಲತೊಡರು
ಬಿಡದೆ ಮೆಱೆಯೆ ಗ[8]ಡೆಯವ[8]ರು ಪೊಕ್ಕಿಱಿದಾಡಿ
ಮಡಿದರು ರಣಭೂಮಿ[9]ಯೊಳು[9]　　೬೪

*ಕುಱುಹಿನ ಪಟ್ಟ ಕಿಱುಘಂಟೆ ಪುಲಿಯ ಬಾಲ
ಮೆಱೆಯೆ ಗಡೆ[10]ಯರೆ[10]ಯ್ತಂದು
ಮಱೆಯಿಲ್ಲದೆ [11]ಮೆ[11]ಯ್ಯ ನೆಱೆಗಲಿ ಸಬಳಿಗ
ರಿಱಿದಾಡಿದರು [12]ರಣದೊಳಗೆ[12]　　೬೫

*ಕಿಡಿಯೇಳೆ ಖಡ್ಗದ ಹುಯಿಲಿನಿಂ ಖಡ್ಗ[13]ದೊ[13]
[14]ಳ್ಕಡಿಕೆಯ್ದು[14] ಕಾಲವರಾರ್ದು
ಕಡಿದಾಡಿದರಮರಾಂಗನೆಯರ [15]ಕೈ
ವಿ[15]ಡಿದರು ಸುರಲೋಕದೊ[16]ಳು[16]　　೬೬

---

[1] ಮೆ (ಐ) [2] ಸ (ಎ ಗ) [3] ಪೋಗಿ ಸಗ್ಗದ (ಎ ಗ) [4] ಸೂಳೆಯರನ ಕಂಡರಂದು (ಎ ಗ) [5] ಸಿ ಶೂರರನು (ಇ) ಸುವರವರನು (ಎ ಗ) [6] ವೋ (ಅ) [7] ತೊಡರುವಂಕುಡಿ ಕಯ್ವೊಳ್ (ಐ) [8] ಡಿ ಯವರು (ಎ ಗ) ಡೆಯ (ಅ) [9] ಯಲಿ (ಕ) [10] ಯೊಳೆ (ಇ ಎ ಐ ಕ ಗ) [11] ಮ್ಯೆ (ಅ ಐ) [12] ಸಮರದೊಳು (ಕ) ರಣದೊಳು (ಎ ಗ) [13] ದಿಂ (ಅ) [14] ಖಡಿಕೈಯ್ದು (ಅ) ಕಡಿಕೆದು (ಇ ಐ) [15] ಕಯ್ಯಪಿ (ಐ) [16] ಳಗೆ (ಇ ಎ ಐ ಗ) * (ಉ) ಪ್ರತಿಯಲ್ಲಿಲ್ಲ.

*ತೆಕ್ಕೆವರಿಗೆ ಲಗ್ಗೆವರಿಗೆಯಿಂ[1]ದೆಯ್ತಂ[1]
ದೆಕ್ಕೆಕ್ಕೆ[2]ಯಿಂ[2] ಪಟುಭಟರು
ಹೊಕ್ಕು ಹೊಯ್ದಾಡಿ ಸುರಾಂಗನೆಯರ ತೋಳ
ತಕ್ಕೆಗಟ್ಟಿನೊಳೊಱಗಿದರು ೬೭

ಕಯ್ದು ಮುಱಿಯೆ ಕಯ್ಯ ಹರಿಗೆಯು ತೆಗೆದಿಟ್ಟು
ಬಯ್ದು ಮೂದಲಿಸಿ ಬ್ಬಂಕಿನೊಳು
ಕಾಯ್ದು ಱದಳಿಯಲವರನಮರಸ್ತ್ರೀಯ
ರೊಯ್ದರು ಪುಷ್ಪಕದೊಳಗೆ ೬೮

ಕಡಿತಲೆದೂಗುತ ಕಯ್ಯ ಪೊಂಬರಿಗೆಯು
ನೆಡಬಲ[3]ಗಳಿಗೆ[3] ತೋಱಸುತ
ಕಡಿದಾಡಿ ಮಡಿ[4]ದರು[4] ತುಳುವಪಾ[5]ಯಕರಾ[5]
ಯೆಡೆಯೊಳುಭಯ ಬಲದೊ[6]ಳಗೆ[6] ೬೯

*ತಳವುಳಲೆ[7]ದ್ದ[7] ಮುನ್ನೀರಿಂದ ಕಮಠಸಂ
ಕುಳ[8]ದಿಂದ ಪೊಱಮಡುವಂತೆ[8]
[9]ಜಲ[9]ಜಲನಿಧಿಯಿಂದ ಪೊಱಮಟ್ಟುಹರಿಗೆಯ
ಬಲುಮಂದಿ ಕಾದಿ ಮಡಿ[10]ದರು[10] ೭೦

ಧುರದೊಳು ಭಯಭಂಗವಿಲ್ಲದಳಿದು ಬಂದ
ವರಸುಭಟರನಿಂದ್ರ ನೋಡಿ
ನೆರವಾದು[11]ದೆ[11]ಮುಗಸುರರ ಕಾ[12]ಳ[12]ಗಕೆಂದು
ಪರಮಹರುಷ[13]ವನೆಯ್ದಿ[13]ದನು ೭೧

ಕಲಗಳಱದು ಸುರಪತಿ ಸುರಲೋಕದ
ಬೆಲೆವೆಣ್ಗಳನಿತ್ತವರನು
ಕಲೆವ[14]ರೆ[14]ಯಿಸಿ ಸಂತವಿಟ್ಟನು ಸುಭಟಾ
ವಳಿಗೆ [15]ಪಾಣ್ಬೆಣ್ಗಳ[15]ಚ್ಚರಿಯೆ ೭೨

---

[1] ದಿದಿರಾಗ (ಎ ಗ) [2] ಯೊಳು (ಐ) [3] ದೊಳಗೆ (ಐ) [4] ದುದು (ಎ ಐ ಗ) [5] ರಕರಾನೆ (ಇ ಎ ಕ ಗ) ಯಕರಾ (ಉ ಐ) [6] ಳು (ಅ) [7] ದ್ದು (ಎ ಐ ಗ) [8] ಪೊಱಮಡುವ ತೆಱದೊಳು (ಇ ಎ ಐ ಗ) [9] ಬಲ (ಇ ಎ) [10] ದುದು (ಐ) [11] ದು ಎ (ಎ ಐ ಗ) [12] ಳೆ (ಎ ಐ ಗ) [13] ವತಾಳಿ (ಅ) ವೆಯ್ದಿ (ಐ) [14] ರ (ಇ ಉ ಎ ಐ ಗ) [15] ಪಾನ್ಬೆಂಗಳ (ಐ) ಒಳ್ವೆಂಡಿರ (ಉ) ಪೊನ್ಬೆಣ್ಗಳ (ಇ ಎ ಗ) *(ಉ) ಪ್ರತಿಯಲ್ಲಿಲ್ಲ.[

ಜನ್ನವ ಮಾಡಿ ಸಗ್ಗಕೆ [1]ಸ[1]ಂದ ಪಾರ್ವರ
ಚೆನ್ನೆಯರನು ಸುಭಟರಿಗೆ
ಮನ್ನಿಸಿದನು ದನುಜರ ಕಾ[2]ಳೆ[2]ಗಕೆನ
ಗಿನ್ನಿಲ್ಲ ಭಯವೆನುತಿಂದ್ರ ೨೩

ಕಲಿಗಳಿವರು ಸಾಕಿದೊಡೆಯನ ಸೇವೆಗೆ
ತಲೆಯ ಕೊಟ್ಟವರಿವರೆಂದು
ಒಲಿದಿತ್ತನವರಿಗೆ ಜನ್ನದಿಂ ಬಂದರ
[3]ಬೆಲೆವೆಣ್ಗಳನಿ[3]ಂದ್ರನೊಸೆದು ೨೪

ಪುಂಡುಗಾಱರು ನಮ[4]ಗ[4]ಲ್ಲೆಂದು ಸಗ್ಗದ
ಪುಂಡರೀಕಾಯತಾಕ್ಷಿಯರ
ಮಂಡೆಯೆಣಿಸಿ ಕೊಟ್ಟನು ರಣದೊಳು ಕಡಿ
ಖಂಡವಡೆ[5]ದು ಬಂದವ[5]ರಿಗೆ ೨೫

ವೀರರಸದ ಲಹರಿಯ ತೆಱದಿಂ ರಕ್ತ
[6]ಧಾರೆ[6] ಸುರಿಯೆ ಮೆಯ್ಯೊಳಗೆ
ಕೂರಾಳುಗಳಿಱಿದಾಡಿ [7]ಮಡಿದು[7] ಸುರ
ನಾರಿಯರೆಡೆಗೆಯ್ದಿದರು ೨೬

ಅಣಿಯೊಳು ಕಡಿಖಂಡವಾದ ಸುಭ[8]ಟರ[8] ಸಂ
ದಣಿಸಿದ ಮೆಯ್ಯ ಖಂಡಗಳು
ರಣದೇವತೆ ಮುಡಿದೀಡಾಡಿದ ದಾ
ಸಣಹೂ[9]ಗಳ[9]ಂತೆ ಮೆಱೆ[10]ದವು[10] ೨೭

ಕಳೆದ ಕಣ್ಗಳು ಮೆಱೆದವು ರಾಯರಿರ್ವರ
ಕಲಹವ ನಿಟ್ಟಿಸಲೆಂದು
ನಲವಿಂದ ರಣಭೂವನಿತೆ ತಳೆದ ಕಣ್ಣ
ಬಳಗದಂತೇನ ಬಣ್ಣಿಪೆನು ೨೮

---

[1] ವಂ (ಉ) ಬಂ (ಎ ಗ) [2] ಳ (ಉ ಐ) [3] ಲಲನೆಯರನು ಇಂ (ಐ)
[4] ಗಿ (ಐ) [5] ದ ಸುಭಟ (ಐ) [6] ಧಾರೆಯು (ಐ ಕ) [7] ಮೆಯ್ಯೊಳು (ಐ) [8] ಟ (ಐ)
[9] ವ (ಇ ಎ ಗ) [10] ದುದು (ಅ ಉ).

ಮೊಗವ[1]ಡಿ[1]ಯಾಗಿ ಮಡಿದ ವೀರಭಟರು ಮೆ
ಯ್ದುಗೆಯದ ವೀರಲಕ್ಷ್ಮಿಯನು
ಬಿಗಿ[2]ಯ[2]ಪ್ಪಿಕೊಂಡೊಱಗಿದ ತೆಱದಿಂ ಕಣ್ಗೆ
ಸೊಗಯಿಸಿದ[3]ರು ರಣದೊಳಗೆ[3] ೭೯

ಕೊಱೆದ ಕೊರಳುಗಳಿಂ ಪಱಿದ ಪಂದಲೆಗಳಿಂ
ಮುಱಿದ ಮೂಳೆಗಳಿಂ ಸುಭಟರ
ದುಱುದುಱಿಸುವ ಗಾಯಗಳಿಂದಾ ರಣ
ಮೆಱೆದುದು ಭೀಕರವಡೆದು ೮೦

ಉಡಿದ ತೊಡೆಗಳಿಂದ ಸಿಡಿದ [4]ಕಣ್ಣು[4]ಗಳಿಂದ
ಕೆಡೆದ ಮುಂಡಗಳಿಂ [5]ಕೆದಱಿದ[5]
ತೊಡಿಗೆಗ[6]ಳಿಂದ[6] ತುಂಡಿಸಿದ ತೋಳುಗಳಿಂದ
ಪಡೆದು[7]ದಾ[7]ರಣಭೀಕರ[8]ವ[8] ೮೧

ಕರು[9]ಳ[9] ಕೋಳ್ಗೆ ಸಱಿಂದ ನರದ ಬಣಬೆಯಿಂದ
ಪರಿವ ನೆತ್ತರ ಪೊನಲಿಂದ
ಮೊರೆವ ಪೆಣಗಳಿಂದ ನೆರೆವ ಭೂತಗಳಿಂ[10]ಭೀ[10]
ಕರ[11]ವಾದುದಾ[11] ರಣಭೂಮಿ ೮೨

ತೆರಳ್ವ ಹೇಡಿಗಳಿಂದ ಕೆರಳ್ವ ಸುಭಟರಿಂದ
ಪೊರಳ್ವ ಪೆಣಗಳಿಂದ ಬಿಡದೆ
ನರಳ್ವ [12]ಸುಭಟರಿಂ[12]ದುರುಳ್ವ ತಲೆಗಳಿಂದ
ಕರಮೆಸೆದುದು ರಣಭೂಮಿ ೮೩

ಕಣ್ಪೋದ ಕಾಲಿನ ಕಯ್ಪೋದ ತೋಳಿನ
ಪಣ್ಪೋದ [13]ಮೊಗ[13]ದ ಸುಭಟರ
ಪೆಣದ ಪೇರಾ[14]ಳದಿಂ[14] ಭೀಕರಮಾದುದಾ
ರಣಭೂಮಿ ನೋಳ್ಪರ ಕಣ್ಗೆ ೮೪

---

[1] ಡೆ (ಇ ಎ ಗ) [2] ದ (ಎ ಗ) [3] ರೇನಬಣ್ಣಿಪೆನು (ಐ) [4] ತೊಡೆ (ಇ ಉ ಎ ಐ ಗ) [5] ದಮುಱಿಧ (ಐ) [6] ಳಿಂ (ಎ ಗ) [7] ದು (ಇ ಉ ಎ ಗ) [8] ವನು (ಇ ಉ ಎ ಗ) [9] ಳು (ಎ) [10] ದ ಭೀ (ಎ) ದ (ಐ) [11] ಮೆಸೆದುದು (ಐ) [12] ಕಲಿಗಳಿಂ (ಉ) ಹೇಡಿಗಳಿಂ (ಐ) [13] ಮುಖ (ಐ) [14] ಳಿಂದ (ಎ ಗ).

ಕತ್ತರಿಸಿದ ತಲೆ ಬೊಬ್ಬಿಡುತಿ[1]ರೆ[1] ಕೈಯ್ಯೊ
ಳೊತ್ತಿ ಪಿಡಿ[2]ದ[2] ಖಡ್ಗದಿಂದ
ಹೊತ್ತು ಹೊಯ್ದಾಡಿ ಕೆಡೆದವಟ್ಟೆಗಳು ರಣ
ದೊತ್ತಂಬರವ[3]ನೇ[3]ನೆಂಬೆ ೮೫

ತಲೆಗರೆಯದೆ[4]ಪೊ[4]ಕ್ಕು ಹೊಯ್ದಾಡಿ ರಣದೊಳು
ತಲೆಗೊಟ್ಟ ವೀರಭಟರನು
ತಲೆದ[5]ಡ[5]ವುತ ಕೊಂಡೊಯ್ದರು ಸಗ್ಗದ
[6]ತಲೆವೆಣ್ಗ[6]ಳು ತವಕ[7]ದಲಿ[7] ೮೬

ತೊಟ್ಟ ವಜ್ರಾಂಗಿಯು ಜೋಡು ಸವಗ ಪೊಂ
ಬಟ್ಟ[8]ಲ[8] ಚೀನಿಯ ಠೌಳಿ
ಕಟ್ಟಿದ ಬಿರಿದು ಮುಱಿಯೆ ರಾವುತರು ಕೈ
ಬಿಟ್ಟೇಱಿದರು ಕುದುರೆಗಳ ೮೭

*ಲೋಹವಕ್ಕರೆ ಝಲ್ಲಿ ಮೊಗರಂಭ ಮೊದಲಾ
ದ್ದಾಹವ ಸ[9]ನ್ನಾಹವೆಸೆಯೆ[9]
ಗಾಹುಗ[10]ದುಕನುಳಿದೇಱಿದರಶ್ವಾ[10]
ರೋಹಕರಾ ಸಮ[11]ಯದಲಿ[11] ೮೮

*ಜೋಳದ ಪಾಳಿಯ ಬಗೆ[12]ದು[12] ಖಂಡೆಯ ಕರ
ವಾ[13]ಳು[13] ಬಲ್ಲೆಹ ಲಾಡಿಗಳ
ಘೋಳಾಯಿಲರು ಝೋಯೆಂ[14]ದೇಱಿದರಂ
ದಾಳೆ ತುರಗ[14] ಮೋಹರದೊಳು ೮೯

ಮುಸುಕೆ ದೆಸೆಯ ಖುರಪುಟಧೂಳಿ ಬಿಡದೆ ಮಾ
ಮಸ[15]ಕಿ[15] ವಾಹಕರೇಱಲಂದು
ಬಿಸಿಲಕುದುರೆ[16]ಯಂತು[16]ಭಯ [17]ಬಲ[17]ದೊಳು ಕ
ಣ್ಗೆಸೆದವು ಬಲುಗುದುರೆಗಳು ೯೦

---

1 ಹ (ಐ) 2 ದು (ಇ) 3 ನೇನ (ಅ ಐ) 4 ಹೊ (ಇ ಎ ಗ) 5 ಡೆ (ಇ) 6 ಬೆಲೆವೆಂಗ (ಐ) 7 ದೊಳು (ಇ ಉ ಎ ಐ ಗ) 8 ಲು (ಉ) 9 ನ್ನದ್ಧರಾಗಿ (ಐ) 10 ದಕನಟುದೇಱಿದರಶ್ವಾ (ಇ ಎ) ದುಕುಗಳ ಬಿಟ್ಟಿಱಿದರು ಅಶ್ವಾ (ಐ) 11 ರದೊಳು (ಎ ಗ) 12 ದ (ಅ ಇ) 13 ಳ (ಐ ಕ) 14 ದಿಱಿದುದುಬಲು ದಾಳಿಗುದುರೆ (ಎ ಗ) ದೇಱಿದರಂದಾಳು ಕುದುರೆ (ಇ ಕ) 15 ಗಿ (ಇ ಎ ಗ) 16 ಗಳಂತು (ಇ ಎ ಗ) 17 ವೋಹರ (ಐ) * (ಉ) ಪ್ರತಿಯಲ್ಲಿಲ್ಲ.

ಅಳವುಳ್ಳ ರಾವುತರೇಱಲು ಮನವುಳ್ಳ
ಬಲುಗುದುರೆ[1]ಗಳ[1] ಬೇಗದೊಳು
ನೆ[2]ಳಲಂ[2]ಚೆಯ ಕುದುರೆಗಳಂತವು ಕ
ಣ್ಗೊಳಿಸಿದವಾ [3]ಮೋಹರದೊಳು[3] ೬೧

*ಇಕ್ಕಿದ ನೆಳಲಂಚೆಯ ತೆರೆಯೊಳಗೆ ಕಾ
ಲಿಕ್ಕುವ ಚಿತ್ರಾಶ್ವಗಳ
ಮಿಕ್ಕು [4]ಹೊಳೆ[4]ದವು ಪಕ್ಕಱಿಕೆಯ ಮಱೆಯೊಳು
ಮಿಕ್ಕ ಮನದ ಕುದುರೆಗಳು ೬೨

ಉಡಿಯೆ ಖಂಡೆಯ ಕಡಿವಡೆಯೆ ಬಲ್ಲೆ[5]ಯ[5] ಕತ್ತಿ
ಸಿಡಿಯೆ [6]ಲೌಡಿಯ[6] ಕಂಕಣಗಳು
ಸಡಿಲೆ ಹೊಯ್ದಾಡಿ[7]ದರು[7]ಭಯಮೋಹರದೊಳು
ಕಡುಗಲಿ ಬಲುರಾವುತರು ೬೩

* ಕಕ್ಕಸ[8]ಕೈಮಿಗಲೇಱಿ ಕುದುರೆಗಳ[8]
ತೆಕ್ಕೆತೆಕ್ಕೆಯ ಮೋಹರದೊ[9]ಳು[9]
ಹೊಕ್ಕುತಿವಿದು ಹೊಳಕೆಯ ರಾವುತರು ಕ
ಯ್ಯಿಕ್ಕಿದರಂದು ಕುದುರೆ[10]ಗೆ[10] ೬೪

*ಹೊಗ[11]ಲೇಱಿ[11]ರಾವುತರೊರ್ವರೊರ್ವರು ಹೊಗ
ರೊಗುವ ಖಂಡೆಯ ಕತ್ತಿಯಿಂದ
ಮಿಗೆ ಕಡಿದಾಡಿ ಮಡಿದು ಸುರಲೋಕವ
ಹೊ[12]ಗು[12]ವರಿಯನು ಮಾಡಿದರು ೬೫

*ಕಯ್ದು ಮುಱಿಯೆ ಬಿಡದೊರ್ವರೊರ್ವರ ಮೇ
ಲ್ವಾಯ್ದು ರಾವುತರು ಬಂಕಿನೊಳು
ಬಯ್ದುಱಿದಾಡಿ ಮುಂದಲೆಯ ಕಯ್ಯೊಳು [13]ಮ[13]ಡಿ
ದೆಯ್ದಿದರಮರಲೋಕವನು ೬೬

---

[1] ಯ (ಐಕ) [2] ಲನಂ (ಅ) [3] ಸಮಯುದಲಿ (ಐ) [4] ಮೆಱೆ (ಎ) [5] ಹ (ಎ ಐ ಗ) [6] ಲವುಡಿ (ಐ) ಲವುಡಿಯ (ಎ) [7] ತು (ಇ ಐ) [8] ಕೈಮಿಗಿಲೇಱಿದ ಕುದುರೆಯ (ಅ) ಕೈಮಿಗಿಲೇಱಿದರು ಕುದುರೆಯ (ಇ) ಮಿಗಿಲೇಱಿದರು. ಕುದುರೆಯ (ಎ ಗ) [9] ಳಗೆ (ಎ ಗ) [10] ಯ (ಐ) [11] ಲೇಱೆ (ಎ ಗ) ರೇಱಿ (ಇ) [12] ಗ (ಐ) [13] ಪಿ (ಎ ಗ) * (ಉ) ಪ್ರತಿಯಲ್ಲಿಲ್ಲ.

*ಒರ್ವರೊರ್ವ[1]ರ[1] ಕುದುರೆಯ ವಾಘೆ[2]ಯಗಳಿ
ಗೊ[2]ರ್ವರೊರ್ವರು ಕಯ್ಯನಿಕ್ಕಿ
ಇರ್ವಲದೊಳಗಿಱಿದಾಡಿ ಮಡಿದರಂದು
[3]ಕೊ[3]ರ್ವಿದ ಕೊಯಿಲೆ ರಾವುತರು ೯೭

ಮುಂದಲೆ ಮುಂದಲೆಗಳಿಗೆ ಕೈಗಳನಿಕ್ಕಿ
ಸಂದಿಱಿದಾಡಿ ಮೇಲವರು
ಅಂದು ಮಡಿದು [4]ಮೇಲು[4]ಲೋಕದ ಪೆಣ್ಗಳ
ಮುಂದಲೆಗಳನು ಪಿಡಿದರು ೯೮

†ಜವನರೆವಾವುಕೊಂಡಂತಿರೆ ಕಕ್ಕ[5]ಡೆ[5]
ಯವ[6]ಯ[6]ವದೊಳು ಮುಳುಗಿದವು
ಜವನ ದಂಡದ ಗಾಯದಂತೆ ಲೌಡಿಯ ಗಾಯ
ತವೆ ಮೆಱೆದವು ರಾವುತರೊಳು ೯೯

ಸವಗ ಸೀಳಲು ಸೀಸಕ ಸಿಡಿಯಲು ವಜ್ರ
ಕವಚ ನೆಗ್ಗಲು ವಾಹಕರು
ಬವರದೊಳಿಱಿದಾಡಿ ಮಡಿದರು [7]ಸಗ್ಗ[7]ದ
ಯುವತಿಯರುಗಳುಘೆಯೆನಲು ೧೦೦

ಕೂರಂಕುಶಗಳ ಕುಣಿಯಿಸುತೊಯ್ಯನೆ
ತೋರಕುಂಭಸ್ಥ[8]ಲದೊಳಗೆ[8]
ಓರಂತೆ ನೂಕಿದರಿರದೆ ಮಾವಟಿಗರು
ವಾರಣಗಳನು ರಣದೊಳು ೧೦೧

ಕರದ ಪಟ್ಟೆಯ ಕೊಂಬಿನ ಸೂನಗ ಪೊಂ
ಬೊರ[9]ಜೆ[9] ಮೆಱೆಯೆ ರಣದೊಳಗೆ
ಗಿರಿಗಿರಿಗಳು ಬಂದು ತಾಗುವ ತೆಱದಿಂದ
ಕರಿಕರಿ[10]ಗಳು[10] ತಾಗಿದವು ೧೦೨

---

[1] ರು (ಐ) [2] ಗಳಿಂದೋ (ಅ) ಯಗಳಿಗಂದೋ (ಇ ಎ ಗ) [3] ಕೋ (ಇ ಐ) [4] ಮೇಲೆ (ಅ) ಸುರ (ಐ) [5] ಡ (ಎ ಗ) [6] ಯೆ (ಅ) [7] ಸ್ವರ್ಗ (ಐ) [8] ಳಗಳೊಳು (ಐ) [9] ಜಿ (ಅ) [10] ಯೊಳು (ಐ) * (ಉ) ಪ್ರತಿಯಲ್ಲಿಲ್ಲ. † (ಉ ಐ) ಪ್ರತಿಗಳಲ್ಲಿಲ್ಲ.

ಪ[1]ಕ್ಕಗಡಿಯ[1]ದ ಪರ್ವತಗಳ ತೆಱದಿಂದ
ಪಕ್ಕರಿಕೆಯ ಕೂರಾನೆ
ಒಕ್ಕಲಿಕ್ಕುತ ಪಟುಭಟರ ತಲೆಗಳನು
ಹೊಕ್ಕವೆರಡು ಮೋಹರ[2]ವನು[2] ೧೦೩

ನಡುಗೆ ಧರಾತಳ ನಡೆ[3]ಗೆಡೆ[3]ವಾಯ್ತು ಕೈ
ದುಡುಕುತ [4]ಕವಿವ[4]ಭಟರಿಗೆ
ಒಡನೆ ತಾ[5]ಗಿ[5]ದವಾನೆಯೊಂದೊಂದಱೊಳು ಕೊಂ
ಬುಡಿದು ಕೆಂಗಿಡಿ ಕೆದಱುತಿರೆ ೧೦೪

*ಉಗ[6]ಲೊಳು[6] ಮದಮಳೆಯಂತಿರೆ ದಂತಾಂಶು
ಮಿಗೆ ಬಳ್ಳಿ ಮಿಂ[7]ಚನಾನೆ[7]ಗಳು
ಮೊಗವಿ[8]ಟ್ಟವಾ[8]ನೆಗಳೊಳಗೆ ಕಾರ್ಮುಗಿಲೊಡ್ಡು
ಮುಗಿಲೊಡ್ಡನಲೆವ ತೆಱದೊಳು ೧೦೫

*ಕರಿಕರಿಯೊಳು ಮೊಗವಿಡೆ ನಾಳಿವಿಲ್ಲಿನ
ಸರಳಮಳೆಯ ಜೋದರಾರ್ದು
ಸುರಿದರು ಜೋದರ ಮೇಲೆ ಕಾರ್ಗಾಲದ
ಸರಿವಳೆಯೆನೆ ರಣದೊಳಗೆ ೧೦೬

ಸುರಗಿ ಕಂಪಣ ಕೊಂತ ಕಣೆಯ ಮುದ್ಗರ ತೋ
ಮರ ಪಿಂಡಿವಾಳ ಮು[9]ಸುಂ[9]ಡಿ
ಪರಶು ಪಾಶಾಂಕುಶ ಮೊದಲಾದ ಕಯ್ದುನಿಂ
[10]ದಿರದೆ ಜೋದರು ಕಾದಿದರು[10] ೧೦೭

*[11]ಕೋಡೇಱಿಂಗೆ[11] ಕೊಕ್ಕರಿಸುತ [12]ಜೋದರ[12]
ನೀಡಾಡಿ ಕರಿಕಳಭಗಳು
ಓಡಿದ[13]ವಂದೊಡಲಿಂ[13]ದ ಕರುಳು ನೆ
ಲ್ದಾಡಲಾ ರಣಭೂಮಿಯೊಳು ೧೦೮

---

[1] ಷ್ಕಗಡಿಯ (ಅ) ಕ್ಕಗಡಿದ (ಉ ಎ) ಕ್ಕಗರಿಯ (ಎ ಗ) [2] ದೊಳು (ಐ) [3] ಗಿಳಿ (ಎಗ) ಗಿಡ (ಐ) [4] ವೀರ (ಅ) [5] ಳಿ (ಐ) [6] ಲೇಳು (ಎ ಐ ಗ); ಲೆಳೆ (ಇ) [7] ಚಿನಾಸೆ (ಐ) ಚಿನಾನೆ (ಎ ಗ) [8] ಟ್ಟುದಾ (ಐ) [9] ಶುಂ (ಅ) [10] ದಿರಿದಾಡಿದರು ಜೋದರರ: (ಎ ಗ) [11] ತೊಡೆರಿಂಗೆ (ಎ ಇ) ಕೊಡರಿಂಗೆ (ಇ) ಕೋಡೀಱುತಕೆ (ಐ) [12] ಲಿಜೋದರರನು (ಇ) ಜೋಧರರ (ಎ ಗ) [13] ವೊಂದೊಡಲಿಂ (ಅ ಇ) ವಂದೊಂಡ (ಎ ಗ) * (ಉ) ಪ್ರತಿಯಲ್ಲಿಲ್ಲ.

*ಕರು[1]ಳುಗೆ[1] ಕೋಳ್ಮಿದುಳುಣ್ಮೆ ನೆತ್ತರು ಮಿಗೆ
ಸುರಿಯಲಾನೆಗಳಾನೆಗಳೊಳು
ತೆರಳದೆ ನಿಂದಿಱಿದಾಡಿ [2]ಗಿ[2]ರಿಗಳಂ
[3]ತು[3]ರುಳಿದವಾ ರಣದೊಳಗೆ ೧೦೯

*ಬಿಡದೆ [4]ಸೆಣಸು[4]ತಿರಲೆರಡಾನೆ ಕೊಂಬೆರ
ಡುಡಿಯಲೊಂದಾನೆಗಂಡದನು
ಪಿಡಿಯೆಂದು ತಿಳಿದು ಮತ್ತೊಂದಾನೆ ಕೋಪವ
ನುಡುಗಿ ಮೋಹಿಸಿದುದಂದದ[5]ನು[5] ೧೧೦

ಕರಿಯಿಂದ ಕರಿಗೆ ಲಂಘಿಸಿ ಕಲಿಜೋದರು
ಕರವಾ[6]ಳಿಂ[6] ಕಡಿದಾಡಿ
ಉರುಳಿದರಾನೆಗಳಿಂದ ನೆಲಕೆ [7]ಧುರ
ಧರಣಿಯೊಳೇ[7]ನ ಬಣ್ಣಿಪೆನು ೧೧೧

ಕರಿಗಳು ತಮ್ಮೊ[8]ಳು ಯಿಱಿದಾಡಿ ಮಡಿದರ[8]
ಕರದಿಂದ ಬಾಂಗೆತ್ತಿ ಕೊಂಡು
ಪರಿದವು ರಣ[9]ದೊಳು[9] ಸುರವೆಣ್ಗಳಿಗೆ ವೀರ
ಪುರುಷರನೀವ ತೆಱದೊಳು ೧೧೨

ಇಂತಾಳಾಳೊಳು ಕುದುರೆ ಕುದುರೆಯೊಳು
ದಂತಿ ದಂತಿಯೊಳು ಮೆಯ್ವೆರ್ಚಿ
ಪಿಂ[10]ತ[10]ಕಡಿಯ ತೆಗೆಯದೆ ರಣದೊಳು [11]ಮು[11]
ಯ್ಯಾಂತು ತಳ್ತಱಿದಾ[12]ಡಿದರು[12] ೧೧೩

ಖಂಡ [13]ಕೆ[13]ದಱೆ ತುಂಡೇಳೆ [14]ಹೊ[14]ಯ್ದಾಡುವ
ಗಂಡುಗಲಿಗಳ [15]ಧೈರ್ಯವ[15]ನು
ಕಂಡರು ರಣಭೂಮಿಯೊಳು ರಾಯರಿರ್ವರ
ದಂಡನಾಯಕರು ಬೇಗದೊಳು ೧೧೪

---

[1] ಳೊಗೆ (ಅ ಇ) ಳೊಳಗೆ (ಎ ಗ) [2] ಕ (ಐ) [3] ದು (ಐ) [4] ಷೆಣಗು (ಅ ಇ ಎ ಗ) [5] ಕೆ (ಇ ಎ ಗ) [6] ಳದಿಂ (ಐ) ಳಿನಿಂ (ಇ ಉ) [7] ಸಂಗರದೊಳದೇ (ಉ) [8] ಳಗಿಱಿದಾಡಿಮಡಿದರ (ಇ) ಳಗಿಱಿದಾಡಿಮಡಿದರು (ಎ ಐ ಗ) [9] ದಿಂದ (ಅ) [10] ತೆ (ಕ) [11] ಕ (ಎ ಗ) [12] ಡುತಿರಲು (ಇ ಉ ಎ ಗ) [13] ಗೆ (ಐ) [14] ಪ್ಪೊ (ಐ) [15] ಗಾಡಿಯ (ಕ) * (ಉ) ಪ್ರತಿಯಲ್ಲಿಲ್ಲ.

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೆ ಮೂಱನೆಯ
ವಿದಿತಾಶ್ವಾಸದೊ[1]ಳ್ಮೂಱನೆಯದು[1] ಸಂಧಿ
ಮೃದುಪದಚಯಸಂಬಂಧಿ ೧೧೫

---

[1] ಳ್ಹನ್ನೆರಡನೆ (ಇ) ಳೈದನೆಯದು (ಎ ಗ) *(ಅ ಐ) ಪ್ರತಿಗಳಲ್ಲಿಲ್ಲ.

## ಹದಿಮೂರನೆಯ ಸಂಧಿ

### ಸಂಗ್ರಾಮ ಸಮಾಪ್ತಿ

ಇತ್ತ ಸೇನಾಪತಿ ನರಸಿಂಗುವ ಪೌ
ಜೊತ್ತಿ ನಡೆದು ಕಾಟಣನ
ತೆತ್ತಿಸಿದಲಗಿನ ಮೊನೆಯ ಮೋಹರಕೆ ಕ
[1]ಯ್ದುತ್ತಿ ಪ[1]ರಿದು ತಾಗಿದುದು ೧

ಆಳಾನೆ ಕುದುರೆ ಬೇಗದೊಳು ಮಾಮಸಗಿ ಬಂ
ದಾಳಾನೆ ಕುದುರೆಗಳೊ[2]ಡನೆ[2]
ಮೇಳಾಪಿಸಿದವು ಕೊಂಬು[3]ಕಹ[3]ಳೆಗಳ
ಕೋಳಾಹಳ ಮಸಗುತಿರೆ ೨

ಆನೆ ಕುದುರೆ ಕಾಲಾಳ ಮೋಹರ ಬಿಲ್ಲ
ಸೇನೆ ಸಂದಣಿಸಿ ರಣದೊಳು
ಆನದೆ ತಳ್ತುಬಿದಳಿದೆಯ್ದಿದರು ವಿ
ಮಾನದೊಳಮರಿಯರೆಡೆಗೆ ೩

ನರಸಿಂಗು ಹರಿಯಬಿಡಲು ಸಬಳದ ಬಿಲ್ಲ
ಹರಿಗೆಯ ಮಂದಿ ಬೇಗದೊಳು
ಬೆರಸಿ ಬೆರ[4]ಲ[4]ತುಟಿಗಳ ಧ್ವನಿಯಿಂ ಪೊಕ್ಕು
ಪರಬಲವನು ಕೆಣಕಿ[5]ದುದು[5] ೪

ಮೋಹರ[6]ಕೆತ್ತಿ[6] ಕೈವೀಸಲು ನರಸಿಂಗು
ಬೇಹಬೇಹ[7]ರು[7] ಬೇಗದೊಳು
ಗಾಹುಗ[8]ದುಕನುಳಿದೊ[8]ಳಪೊಕ್ಕು [9]ಪೊ[9]ಯ್ದರಿ
ಸಾಹಸಿಗಳ ಕೆಡ[10]ಹಿ[10]ದರು ೫

---

[1] ಯ್ಗತ್ತಿಪ (ಎ) ಯ್ದುತ್ತಿಹ (ಅ ಉ) [2] ಳಗೆ (ಇ ಉ ಎ ಐ ಗ) [3] ಕಾ (ಅ)
[4] ಳ (ಐ) [5] ದರು (ಇ ಉ ಎ ಐ ಗ) [6] ಕಯ್ಯೆತ್ತಿ (ಐ) [7] ವರು (ಉ ಎ ಗ)
[8] ದಕನುಳಿದೊ (ಇ ಕ) ದುಕಬಿಟ್ಟೊ (ಐ) [9] ಹೊ [10] ವಿ (ಇ)

ಕೊಯ್ದ ಕೊರಲಿನ ಕೊಱೆದ ತೋಳಿನ ಮಿಗೆ
ಹೊಯ್ದ ಕರುಳ ತೊಂಗಲಿನ
ಕಯ್ದ ಕಾಱಿರು ಕುದುರೆಯ ಹಿಂದಕೆ ಮಿಗೆ
ಹಾಯ್ದರು ಮುಱಿದು ಬೇಗದೊಳು ೬

ಕಾಣುತ ಕಾಟಣ್ಣ ಮುಱಿದೋಡಿ ಬಹ ಮಂದಿ
ಗೂಣಯವಿಕ್ಕುತ ನಡೆದು
ಮಾಣದೆ ಮಲೆತು ನಿಂದನು [1]ತೆಗೆ[1]ದೋಡುವ
[2]ರಾಣುವೆಯ[2]ನು ಹಿಂ[3]ದಕಿ[3]ಕ್ಕಿ ೭

ಲಕ್ಕ ಕಾಲಾಳೈದು ಸಾವಿರ ಕುದುರೆ ಕ
ಯ್ಯಿಕ್ಕುವ ನೂಱಾನೆವೆರ[4]ಸು[4]
ಹೊಕ್ಕು ದಂಡಾಧಿಪ ಕಾಟಣ್ಣನ ಮೇ
ಲಿಕ್ಕಿದನತಿ[5]ವೇಗದೊಳು[5] ೮

*ಲೆಕ್ಕವಿಲ್ಲ[6]ದ[6] ಮೇಲವರೆಯ್ತಂದು [7]ಮೇ
ಲ[7]ಕ್ಕಿ ತಿವಿಯಲು ಕಾಟಣ್ಣ
ತೆಕ್ಕದೆ ನಿಂದಿಱಿದಾಡುತಿರಲು ಬಲ
ವಕ್ಕದವರು ಮುಸುಕಿದರು ೯

ನಾಕು ಸಾವಿರ ತೇಜಿ ನಾಲ್ವತ್ತು ಸಾವಿರ
ಜೋಕೆಯ ಮಂದಿ ನೂಱಾನೆ
ನೂಕಿತು ಕಾಟಣ್ಣನ ಮೇಲೆ ಬಲ ನೂಕು
ತಾಕಾಯಿತು ಪೇಳ್ವೆನೇನ ೧೦

ನರಸಿಂಗು ಬಲ[8]ವಕ್ಕ[8]ದವರ ಮೋಹರದೊಳ
ಗೆರಡು ಸಾವಿರ ಕುದುರೆಯೊಳು
ತೆರಳದೆ ನಿಂದಿಱಿದಾಡುತಿರಲು ಮತ್ತೆ
ಸರಿದುದು ಗಾಯದ ಮಂದಿ ೧೧

---

[1] ಮುಱಿ (ಎ ಗ) [2] ರಾಣಯುವ (ಅ) [3] ದಿ (ಇ ಐ) [4] ಸಿ (ಐ ಕ) [5] ಬೇಗದೊಳು (ಇ) ವೇಗದಿಂದ (ಐ) [6] ದೆ (ಇ ಐ) [7] ಮೆಯ್ಯಿ (ಐ) [8] ವಂಕ (ಉ ಕ) * (ಉ) ನಲ್ಲಿಲ್ಲ.

ಬಲ ಸರಿವುದ ಕಂಡು ಬಲ[1]ವಕ್ಕ[1]ದವರಾ[2]ರ್ದು[2]
ಬಳಸಿಕೊಂಡರು ಕಾಟಣ[3]ನ[3]
ತಲೆಯೊಡ್ಡಿ ನಿಂದವರೊ ಡನೆ[4] ಕಾಟಣ್ಣನು
ಬಲುಃಗಲಹವನೆಸಗಿದನು   ೧೨

ಕುದುರೆಯ ಹಿಂಡ [5]ಹಿಳ್ಳೊ[5]ಡೆಯಿಸಿದನು ಬಂದು
ಕದುಬುವ ಕಾ[6]ಲು[6]ಪಾಯಕರ
ಮೆದೆಗೆಡಹಿದನು ಮೇಲಿಕ್ಕುವಾನೆಗಳನು
ಕದಲಿಸಿದನು ತಿವಿದಾರ್ದು   ೧೩

ಹೆಸರುಳ್ಳ ರಾವುತರೆಯ್ತಂದು ತಮ್ಮತಮ್ಮ
ಹೆಸರ ಹೇಳುತ ಬಂದು ತಡೆಯೆ
ಬಸಿಯೆ ನೆತ್ತರು ಮೊಗದೊಳು ತಿವಿದವರನು
ಹಸಗೆಡಿಸಿದನು ಬೇಗದೊಳು   ೧೪

ಕೆದಱಿಸಿದನು ಕೆಣಕುವ ಕಾಲವರನು
ಬೆದಱಿಸಿದನು ರಾವುತರ
[7]ಎ[7]ದೆಗೆಡಿಸಿದನಾನೆಗಳನು ಕಾಟಣ್ಣ
ನೊದವಿ ತಿವಿದು ಸಮರದೊಳು   ೧೫

ಮುಸುಕುವ ಮಂದಿಯ ಮುಂದುಗೆಡಿಸಿದನು
ಮಸಗಿ [8]ತಿ[8]ವಿವ ರಾವುತರ
ಬಿಸಿನೆತ್ತರ ಸುರಿಯಿಸಿದನು ರಣದೊಳ
ಗಸಹಾಯಶೂರ ಕಾಟಣ್ಣ   ೧೬

*ಮೇಲುವಾಯ್ದಾರೋಹಕರ ಕಳು[9]ಪಿ[9]ದನು
ಮೇಲುಲೋಕಕೆ ಹೊಕ್ಕು ಹೊ[10]ಯ್ವು[10]
ಕಾಲವರನು ಕಾಲನಗರಿಗೆಯ್ದಿಸಿದನಾ
ಕಾ[11]ಳ[11]ಗದೊಳು ಕಾಟ[12]ಣನು[12]   ೧೭

ತುಂಡಿಸಿದನು ತುಡುಕುವ ಕೂರಾನೆಯ
ಸುಂಡಿಲ ಕವಿವ ಕುದುರೆಯ
ಮಂಡೆ ಬಿರಿಯೆ ಹೊಯ್ದನು ಕಾಲವರ ಮುಂ
ಕೊಂಡು ತಿವಿದು ಕೆಡ[13]ಪಿ[13]ದನು   ೧೮

---

1 ವಂಕ (ಅ) 2 ಲ್ದು (ಅ) 3 ನನು (ಉ) 4 ಳಗೆ (ಸ) 5 ಹಿಂಡೊ (ಎ) 6 ಲ (ಅ) 7 ಮೊ (ಐ) 8 ಕ (ಉ) 9 ಹಿ (ಅ) 10 ಯ್ದು (ಐ) 11 ಳೆ (ಇ ಎ ಗ) 12 ಣ್ಣ (ಎ ಗ) 13 ಹಿ (ಇ ಎ ಐ ಗ) * (ಉ) ಪ್ರತಿಯಲ್ಲಿಲ್ಲ.

*ಕಾಟಣ್ಣನ ರಾವುತಪಾಯಿಕೆಯ ಸ
ಘಾಟಿಕೆಯನು ಕಂಡು[1]ಮೆ[1]ಚ್ಚಿ
ನೋಟಕರೊಲಿದು ಕೊಂಡಾಡಿದರಮರವ
ಧೂಟಿಯರವನ ನೋಡಿದರು ೧೯

ಬಿಲ್ಲವರನು ಬೀದಿವರಿದು ಕೊಂದನು ಬಂದು
ನಿಲ್ಲದೆ ಕವಿವ ಕಾಲಾಳ
[2]ಗಲ್ಲೆಯೊ[2]ಡೆಯೆ ತಿವಿದನು [3]ಗಡೆ[3]ಯುವರನು
ಚೆಲ್ಲಪಿಲ್ಲಿಯ ಮಾಡಿದನು ೨೦

ಅಳಿದುದು ಬಲವೆಂದು ಕಾಟಣ್ಣನೇನಳ
ವಳಿದನೆ ನೆರವ ಹಾರಿದನೆ
ಒಳ[4]ಹೊ[4]ಕ್ಕು ತಿವಿದು ಕದುಬುವ ರಾವುತರನು
ಕೆಲಬಲದೊಳು ನಿಲಿಸಿದನು ೨೧

ಲಗ್ಗೆ[5]ವ[5]ಡೆದ ಕಾಲಾಳು ಕುದುರೆಯಾನೆ
ಯೊಗ್ಗಾಗಿ ಮತ್ತೆ ಮೋಹರಿ[6]ಸಿ[6]
ಮುಗ್ಗುತ ಮೂದಲಿಸುತ ಮೊಳಗುವ ಬಲು
ಲಗ್ಗೆವಜೆಯ [7]ಧ್ವ[7]ನಿಯೊಳಗೆ ೨೨

ಕರೆದು ಮೂದಲಿಸುತ ಮತ್ತೆ ಕಾಟಣ್ಣನ
ಪರಬಲ [8]ವೇಢೈ[8]ಸಿಕೊಳಲು
ಧುರಕೆ ಕಂಪಿಲನೃಪ ಸಂಗಮದೇವನ
ಹರಿಯಬಿಟ್ಟನು ಬೇಗ[9]ದೊಳು[9] ೨೩

ದುಂದುಭಿ ಮೊಳಗೆ ಬೆರಲ ತುಟಿ[10]ಗಳ ದನಿ[10]
[11]ಯಿ[11]ಂದ ನಡೆ[12]ವ[12] ಕಾಲಾಳು
ಮುಂದುವರಿಯೆ ಮೇಲವರು ಸಂಗಮದೇವ
[13]ಬಂದನು ಪಡಿಬಲವಾಗಿ[13] ೨೪

---

[1] ಮ (ಅ) [2] ಗೆಲ್ಲೆವ (ಅ) ಗಲ್ಲಯೊ (ಉ; ಗಲ್ಲವ (ಎಗ) [3] ಗದೆ (ಕಐ)
[4] ಪೊ (ಎಗ) [5] ಯೊ (ಐ) [6] ಸೆ (ಐ) [7] ಧ (ಇಉಎಐಗ) [8] ವಡ್ಡೈ
(ಎಗ) [9] ದಲಿ (ಐ) [10] ದನಿರವ (ಐ) [11] ದಿ (ಐ) [12] ಯೊ (ಉ)
[13] ನಂದುಪೊಕ್ಕನು ಪಗೆವಡೆಯ (ಕ) * (ಉ) ಪ್ರತಿಯಲ್ಲಿಲ್ಲ.

ಸಂಗಮದೇವನ ಮೋಹರವಾ ರಣ
ರಂಗವ ಪೊಕ್ಕುದ ಕಂಡು
ಪಿಂಗದೆ ನೋಡಿದನೆಡ[1]ವಕ್ಕ[1]ದವರ ಮೊ
ಗಂಗಳನಾ ಬಲ್ಲಾಳ  ೨೫

ನೋಡದ ಮುನ್ನೆಡ[2]ವಕ್ಕ[2]ದ ಮನ್ನೆಯ
ರಾಡುತ ಪಾಡುಪಂಥಗಳ
ಕೂಡೆ [3]ಪೊ[3]ಕ್ಕರು ಭೇರೀರವ ದೆಸೆಗಳ
ನೀಡಿಱಿಯಲು ಪರಬಲವ  ೨೬

*ಪಟಹ ಡಿಂಡಿಮುಗಳ ನಾದದಿಂ ಬೆರಲಿನ
ತುಟಿಯ ಕೋ[4]ಲಾ[4]ಹಲದಿಂದ
[5]ಕೊ[5]ಟಗಾಱರ ಫೌಜು ಹೊಕ್ಕುತಿವಿದು ಪಟು
ಭಟರನಿರದೆ ಕೆಡ[6]ಪಿ[6]ದರು  ೨೭

*ಹೊಕ್ಕರು ಕೊಟಗಾಱರು ರಾವುತರ ಮ
ಯ್ಯಿಕ್ಕಿತಿವಿದು ಕುದುರೆಗಳ
ಲೆಕ್ಕವಿಲ್ಲದೆ [7]ಕೆಡ[7]ಹಿದರು ಕಂಡದ ಬಲ
[8]ವಕ್ಕದವರು[8] ಮುಸುಕಿದರು  ೨೮

ಯಡ[9]ವಕ್ಕ[9]ಬಲ[9]ವಕ್ಕ[9] ದಂಡನಾಥನ ಪೌ
ಜೊಡನೆ ಮೋಹರಿಸಿ ಕವಿ[10]ಯಲು[10]
ಅಡಿಯ ತೆಗೆಯದೆ ಹಿಂದಕೆ ಕಾದಿದನಂದು
ಕಡುಗಲಿ ಭಾವಸಂಗಮನು  ೨೯

ಹಡಪದ ಬಲ್ಲುಗ ದೇವಿಸೆಟ್ಟಿಯ ಲಿಂಗ
ಕಡುಗಲಿ ಕೊಳ್ಳಿಯ ನಾಗ
ಬಿಡದೆ ಮೂದಲಿಸುತ ಸಂಗಮದೇವ[11]ನು[11]
ಕಡಿದಾಡಿದರು ರಣದೊಳಗೆ  ೩೦

---

[1] ವಂಕ (ಉ ಎ ಕ ಗ)  [2] ವಂಕ (ಉ ಎ ಕ ಗ)  [3] ಹೊ (ಐ)  [4] ಳಾ (ಐ)  [5] ತೊ (ಎ)  [6] ಹಿ (ಐ)  [7] ಹಿಡಿ (ಇ ಎ ಕ ಗ)  [8] ದೆಕ್ಕ ತುಳದಲಿ (ಕ)  [9] ವಂಕ (ಉ ಕ)  [10] ದುದು (ಕ)  [11] ನೊಳ್ (ಅ)  * (ಉ) ಪ್ರತಿಯಲ್ಲಿಲ್ಲ.

ಮಿಕ್ಕ[1]ಮ[1]ನದ ರಾವುತ[2]ರ ಮೀಱಿದ ಮಾತಿ[2]
[3]ನಕ್ಕಸಾಲೆಯು ಚಿಕ್ಕನಂದು[3]
ಮು[4]ಕ್ಕಿಱಿದಿ[4]ಱಿವ [5]ರಾವುತರ[5] ಮೋಹರವನು
ಹೊಕ್ಕು ತಿವಿದು [6]ಕಲಕಿದನು[6] ೩೧

ಕಾ[7]ಳ[7]ಗದೊತ್ತಂಬರವ ಕಾಣುತ ತನ್ನ
ಮೇಳದ ರಾವುತರೊಡನೆ
ಕಾಳಾಂಜಿಯ ಕಂಪ [8]ಹೊಕ್ಕ[8]ರಿಬಲವನು
ಕೋಳಾಹಳವ ಮಾಡಿದನು ೩೨

ಅದ ಕಾಣುತವನ ಹೊಳಕೆಯು ಗಿಂಡಿಯು ಲಕ್ಕ
ಕುದುರೆ[9]ಯು ನೂಕಿ ಬೇಗದೊಳು[9]
ಮದಮುಖರನು ಹೊಕ್ಕು ತಿವಿದು ಕೆಡಹಿದನು
ಮುದವನೆಯ್ದಿದನು ಸಂಗಮನು ೩೩

ಆದರಿಸುತ ಕುದುರೆಯು ತನ್ನ ಮಂದಿಯು
ಮೂದಲಿಸುತ ಮುಂದುವರಿದು
ಮಾದಿಗ ಹಂ[10]ಪ ಹೊಕ್ಕೇಱಿ[10] ಮೋಹರವನು
ಬೀದಿಯ ಬಿಡಿಸಿ ತೋಱಿದನು ೩೪

ಅವನ ಹೊ[11]ಳ[11]ಕೆಯ ಬಂಟನು ಹೊಲೆಯರ ಹುಳ್ಳ
ತವಕದಿಂ ತನ್ನಾಳುವೆರ[12]ಸು[12]
ಬವರವ ಹೊಕ್ಕು ಹೊಯ್ದಾಡಲುಭಯ ಬಲ
ತವೆ ಕೊಂಡಾಡಿ[13]ದುದ[13]ವನ ೩೫

ಹೊಳಕೆಯ ರಾವುತರಳವುಳ್ಳ ಬಂಟರು
[14]ತಳರ[14]ದೆ ಹೊಯ್ದಾಡುತಿರಲು
[15]ತಳುವದ[15]ವರ ಮೇಲೆ ನಡೆದನು ನಾಗ ಹೊ
ಯ್ಸಳ [16]ತೂಳುವಱೆ ಮೊಳಗುತಿರೆ[16] ೩೬

---

[1] ಮಾ (ಅ) [2] ನಕ್ಕಸಾಲೆಯು (ಉ) ಗಿಂಡಿಯು ಲಕ್ಕ (ಐ) [3] ಚಿಕ್ಕನಂದತಿವೇಗದಿಂದ (ಉ) ಅಕ್ಕಸಾಲೆಯುಚಿಕ್ಕನವರು (ಐ) [4] ಕ್ಕಿಱಿದೇ (ಐ) [5] ವಾಹಕರ (ಇ ಉ ಎ ಐ ಗ) [6] ಕೆಡಹಿದರು (ಐ) [7] ಳೆ (ಎ ಗ) [8] ತಿವಿದ (ಐ) [9] ಯನೇಱಿಬೇಗದೊಳು (ಉ) ಗಳನು ಹರಿಹೊಯ್ದು (ಎ ಗ) [10] ಪ ಹೊಕ್ಕಿಱಿದು (ಉ ಎ ಗ) ಪನು ಹೊಕ್ಕ (ಐ) [11] ಣ (ಎ ಗ) [12] ಸಿ (ಇ ಎ ಐ ಗ) [13] ದರ (ಐ) [14] ತಳುವ (ಉ) ತೊಲಗ (ಐ) [15] ಘುಳಿಲನ (ಉ) [16] ತೂಳವಱೆ ಮೊಳಗುತಿರೆ (ಎ ಗ) ಮೊಳಗಲುವಾದ್ಯನಿವಹ (ಐ).

ಪುಗೆ ಮಗ ಹೊಯ್ಸಳ ವೈರಿಮೋಹರವನು
ಧಿಗಿಲನೆ ಬಲ್ಲಾಳ ನೃಪತಿ
ಮೊಗನೋಡಿ ಹರಿಯಬಿಟ್ಟನು ರಾಯದಳವನು
ದಗಮು[1]ಘೋಳಿ[1]ಡೆ ಬಲದೊಳಗೆ ೩೭

ಕೊಂಬಿನ ಕೂಗಾಟ [2]ಕಹ[2]ಳೆಯು ಕಳಕಳ
ಬೊಂಬುಳಿರವದ ಬೊಬ್ಬಾಟ
ತಂಬಟದಬ್ಬರ ಚಿನ್ನದ ಚೀಱಾಟ
ತುಂಬಿಬಲಂಬುಜಭವಾಂಡವನು ೩೮

ಗಣನೆಯಿಲ್ಲದ ಕರಿ ತುರಗ ಕಾಲಾಳ ಸಂ
ದಣಿಯೊಳು ಮಗಹೊಯ್ಸಳನು
ಎಣಿಸದೆ ಹೊಕ್ಕನು ನಿಸ್ಸಾಳ ಧಂಧಣ
ಧಣ [3]ಎ[3]ನುತಿರೆ ಮೋಹರವನು ೩೯

ತುರಗವಿಪ್ಪತ್ತುಸಾವಿರ ಮೂಱುಲಕ್ಕಾಳು
ಕರಿನಾನೂಱು ಸಂದಣಿ[4]ಸೆ[4]
ಇರದೆ ಪೊಕ್ಕರಿಬಲವನು ಕದಲಿಸಿದನು
ಧುರ[5]ಧೀರ[5] ಮಗ ಹೊಯ್ಸಳನು ೪೦

ಜಱೆದು ಮೂದಲಿಸುತ ರಾಯಮೋಹರ[6]ವಂ[6]
ದುಱುಬಿ[7]ತ್ತು[7] ಮತ್ತೆ ಮೋಹರಿಸಿ
ಮುಱಿದೊಯ್ಯನೆ ಬಲ ಕಂಪಿಲರಾಯನ
ಮಱೆಹೊಕ್ಕು ತರಹರಿಸಿ[8]ದುದು[8] ೪೧

ಮುಱಿದ ಬಲವ ಕಂಡಣ್ಣಭೈರವದೇವ
ಜಱೆದು ಬಲವ ಹಿಂದಕಿಕ್ಕಿ
ತಱುಬಿ ನಿಂದಿಱಿದಾಡಿದನು ತನ್ನ ಮೇಳದ
ನೆಱೆಗಲಿಗಳ [9]ಕೂಡಿಕೊಂಡು[9] ೪೨

ತಲೆವೊತ್ತು ಮತ್ತೆ ನೂಕಲು ಬಲ್ಲಾಳ[10]ನ[10]
ಬಲವಣ್ಣಭೈರವದೇವ
ಒಲೆದನೊಯ್ಯನೆ ರಾಯನ ಮೇಲೆ ಬಿದ್ದಿತು
ಕಲಹವದೇನ [11]ಪೇಳುವೆ[11]ನು ೪೩

---

[1] ಗಿಲಿ (ಉ) [2] ಕಾ (ಅ) [3] ಮೆ (ಇ) ರೆ (ಇ ಉ ಎ ಗ) [4] ಸಿ (ಉ ಎ ಗ) [5] ಗಲಿ (ಕ) [6] ಬಂ (ಎ ಗ) [7] ತು (ಇ ಎ ಐ ಗ) [8] ದರು (ಅ ಎ ಗ) [9] ಮೋಹರದೊಳು (ಅ) [10] ನು (ಐ) [11] ಬಣ್ಣಿಪೆ (ಉ)

ಸಂಗಮದೇವ ಕಾಟಣ್ಣ ಕೊಳ್ಳಿಯ ನಾಗ
ಲಿಂಗ ಬಲ್ಲುಗ ಚಿಕ್ಕ ಕಂಪ
[1]ಸ[1]ಂಗ ಸಾವಣ ಸಾಯಿದೇವ ರಾವುತರೆಂಬ
ಭಂಗರಾವುತರು ಮಲೆತರು ೪೪

[2]ಸೆ[2]ಲದ ರಾವುತರಿನ್ನೂಱು ರಾಯನ ಕೆಲ
ಬಲದೊಳು ನಿಂದು ಬೇಗದೊಳು
[3]ಸೆ[3]ಲವನಿಕ್ಕಿಸಿಕೊಂಡು ತಱುಬಿ ನಿಂ[4]ದರು[4] ಪರ
ಬಲಕಿದಿರಾಗಿ ಮೋಹರಿಸಿ ೪೫

ಕಾಯದ ಕಳ[5]ವ[5]ಳವನು ಬಿಟ್ಟು ರಾವುತ
ಪಾಯಕರೇಱಿ ಪಗೆವರ
ಘಾಯಘಾಯಕೆ ಕೊಂ[6]ಡ[6] ನೆಲನ ಬಿಡಿಸಿದರು
ರಾಯ ಮೆಚ್ಚಿದನು ಮನದೊಳು ೪೬

ಬಿರಿದಿನ ಬಂಟರು ಬಿರಿದಿನ ರಾವುತ
ರಿರದೆ ಕಂಪಿಲನೊತ್ತಿನಿಂದ
ಭರದಿಂದ ಪೊಱಮಟ್ಟು ಹೊಕ್ಕು ತಿವಿದು ಬಂದ
ಪರಬಲವನು ನಿಲಿಸಿದರು ೪೭

ಹರಿಗೆಯವರು ಹರಿದರು ಬಿಲ್ಲವರು ಕಯ್ಯ
ಸುರಗಿಯಿಂದಿಱಿದಾಡಿದರು
ಕರುಳು ಸುರಿಯೆ ತಿವಿದರು ಸಬಳಿಗರು [7]ಮೆ
ಯ್ಗ[7]ರೆಯದೇಱಿದರು ರಾವುತರು ೪೮

*ಮುಸಲ ಮುಸುಂಡಿ ಕಣೆಯು ಕಂಪಣ ಲೌಡಿ
ಅಸಿ ತೋಮರ ಮುದ್ಗರಗಳ
ವಿಸರದಿಂ ಹೊಯ್ದಿಱಿದಾಡಿದರಂದು ಮಾ
ಮಸಗಿ ಮಹಾರಾವುತರು ೪೯

ಕಂಡನದನು ರಿಪುಕುಲಕುವಲಯ ಮಾ
ರ್ತಂಡನಹಿತಗಿರಿವಜ್ರ
ದಂಡನುದ್ದಂಡವಿಕ್ರಮ[8]ನುರು[8]ಕೀರ್ತಿಕ
ರಂಡಕಂಪಿಲನ ಕುಮಾರ ೫೦

---

[1] ಗಂ (ಐ) [2] ಶೀ (ಇ) [3] ಸಿ (ಇ) [4] ದುದು (ಐ) [5] ಕ (ಉ)
[6] ದು (ಐ) [7] ಮ್ಯೆಗ (ಅ ಉ ಐ) [8] ನಂದು (ಇ) * (ಉ) ಪ್ರತಿಯಲ್ಲಿಲ್ಲ.

ರಾಯನ ಮೇಲೆ ಮೋಹರಿಸಿದ ಬಲ್ಲಾಳ
ರಾಯನ ಬಲದ ಮನ್ನೆಯರ
ಪಾ[1]ಯಿ[1]ದಳದ ಹೇರಾಳವನಂದಾ
ರಾಯಕುವರನೋಡಿದನು ೫೧

ತನ್ನ ಬಲವ ಕೂಡಿಕೊಂಡು [2]ಚೆ[2]ನ್ನಿಗರಾಮ
ಸನ್ನಾಹ ಭೂರಿ ಭೇರಿಗಳ
ಸನ್ನೆಯ ದನಿ[3]ಯಲೇ[3]ಱಿದನು ಮೇಲಮರರ
ಕನ್ನೆಯರಿಟ್ಟಿಸುತಿರಲು ೫೨

ಅಂಡಲೆವು[4]ತಿ[4]ರೆ ಸೇನಾಪದಧೂಳಿ ಭೂ
ಮಂಡಲವನು ಬೇಗದೊಳು
ಚಂಡ[5]ವಿಕ್ರಮ ರಾಮನಾಥ[5] ಹೊಕ್ಕನು ಮುಂ
ಕೊಂಡು ಮುಸು[6]ಕು[6]ವ ಮೋಹರ[7]ವ[7] ೫೩

*ತೆಕ್ಕೆ ತೆಕ್ಕೆಯೊಳು ಮೊಳಗುವ [8]ವಾದ್ಯ[8]ಧ್ವನಿ
ದಿಕ್ಕರಿ ಕ[9]ರ್ಣ[9]ಕುಹರವ
ಜಕ್ಕುಲಿಸುತ್ತಿರೆ ಜಗಳದ ಮೋಹರವನು
ಹೊಕ್ಕನು ಕಲಿಕಾಲಪಾರ್ಥ ೫೪

ಕುರುಪತಿಸೇನೆಯ ಸುರಪತಿನಂದನ
ನಿರದೆ ಪೊಗುವ ತೆಱದಿಂದ
ಭರದಿಂದ ಪೊಕ್ಕನು ಕಂಪರಾಜೇಂದ್ರನ
ವರಸುತನಾ ಮೋಹರ[10]ವ[10] ೫೫

ಕಾನನದಾನೆಯ [11]ಕದುಪನಿರದೆ[11] ಪಂ
ಚಾನನ ಪೊಗುವ ತೆಱದೊಳು
ಆನದೆ ಬಂದು ಪೊಕ್ಕನು ಬಲ್ಲಾಳನ
ಸೇನೆಯನಾ ರಾಮನಾಥ ೫೬

---

[1] ಯ (ಎ ಐ ಕ ಗ) [2] ಚ (ಅ ಐ ಉ) [3] ಯೊಳೇ (ಅ ಉ) [4] ತ್ರಿ (ಐ)
[5] ಚಂಡಪರಾಕ್ರಮರಾಮ (ಐ) [6] ಗು (ಐ) [7] ಕೆ (ಅ) [8] ವಾದ್ಯದ (ಅ ಇ)
[9] ರ್ನ (ಅ ಇ ಐ) [10] ವನು (ಅ ಉ ಎ ಗ). [11] ಕಂಡುಪುಸಿದ (ಇ ಎ) ಕಡುಪ ನಿರದೆ (ಐ) * (ಉ) ಪ್ರತಿಯಲ್ಲಿಲ್ಲ.

ಸಾ[1]ಳ[1]ವನೊಸೆದು ಸಕಲಪಕ್ಷಿಜಾತಿಯ
ಪಾ[2]ಳೆ[2]ಯುವನು ಪೊಗುವಂತೆ
ಬಾಳ [3]ಜಡಿದು[3] ಪೊಕ್ಕನು ರಾಮನಾಥ ಬ
ಲ್ಲಾಳನ [4]ಬಹಳ[4]ಮೋಹರವ ೫೭

ಕರಿಯ ಹಿಂಡನು ಹರಿ ಹರಿಯ ಜಂಗುಳಿಯನು
ಶರಭ ಶರಭವಂಗಡ[5]ವ[5]
[6]ವರ[6]ಭೇರುಂಡನೆಯ್ದುವವೊಲೆಯ್ದಿದನಾ
ಪರಬಲವನು ರಾಮನಾಥ ೫೮

ತೊಲಗಿ ತೊಲಗಿ ವೀರಭಟರು ಚನ್ನಿಗರಾಮ
ಕಲಹಭೂಮಿಗೆ ಬಂದನೆಂದು
ಉಲಿಯೆ ಕಹಳೆಗಳು ವೈರಿಮೋಹರಕಂ[7]ದು[7]
ತಲೆದೋಱದನು ರಾಮನಾಥ ೫೯

ವೈರಿಭಟರು ತೆಗದೋಡಿ ಚೆನ್ನಿಗರಾಮ
ಸಾರಿದ ಸಮರಭೂಮಿಯನು
ವೀರತೆ ಬೇಡಿನ್ನು ನಿಮಗೆಂದು ಕಹಳೆಗ
ಳೋರಣದಿಂದೊ[8]ದಱ[8]ದವು ೬೦

ನಿಲಬೇಡ ತೆಗದೋಡಿ ಭಟರೀಲೋಕದ
ಲಲನೆಯರನು ಬಯಸುವರು
ಕಲಿಯಾಗಿ ಸುರಸುದತಿಯರ ಬಯಸುವರೆಂ
ದುಲಿದವು ಕಹಳೆಗಳಂದು ೬೧

ಎಡವಕ್ಕ ಬಲವಕ್ಕ ಬೇಡ[9]ಪವುಜು[9] ತನ್ನ
ಪಡೆವೆರಸಂದು ಬೇಗದೊಳು
ಕಡುಗಲಿ ನರಸಿಂಗು ಬಂದಡ್ಡಲಾದನು
ತಡೆಯದೆ ರಾಮನಾಥನಿಗೆ ೬೨

---

[1] ಳು (ಇ ಉ ಎ ಗ) [2] ಳ (ಉ ಎ ಗ) [3] ಜಡಿವುತ (ಇ) ಏಡಿದು (ಉ) ಜಡಿಯುತ (ಎ ಗ) ಪಜಡಿವುತ (ಐ) [4] ಬಲು (ಐ) [5] ವನು (ಅ ಎ ಗ) [6] ನೆರೆ (ಉ) [7] ಡು (ಅ) [8] ರಲಿ (ಐ) [9] ಪೌಜು (ಅ ಇ).

ಪಕ್ಕರಿಕೆಯು ಕುದುರೆಗಳೆಂಟು ಸಾವಿರ
ಲಕ್ಕವರೆಯು ಕಾಲಾಳು
ಸೊಕ್ಕಿದಾನೆಗಳಿನ್ನೂಱುವೆರಸು [1]ಮೆ
ಯ್ಯಿ[1]ಕ್ಕಿ ನಿಂದನು ದಂಡನಾಥ　　೬೩

ಜೋಕೆ ತಪ್ಪದೆ ಜೋಡಿಸಿ ನಿಂದ ಪರಬಲಾ
ನೀಕವ ಕಂಡು ಬೇಗದೊಳು
ನೂಕಿ ಹೊಕ್ಕನು ರಾಮನಾಥನದನು ಬಲ
ದ್ವಾಕೆವಾಳರ ಮೊಗ[2]ಗೆಡಿಸಿ[2]　　೬೪

ಸುತ್ತ ಬಳಸಿಕೊಂಡರು ರಾಮನಾಥನ
ಮುತ್ತಿಗೆಯನು ಮಾಡಿದರು
[3]ಹೊತ್ತು[3] ತಿವಿದು ಹೋರುವ ರಾವುತರನಂ
ದಿತ್ತನು ಸುರನಾರಿಯರಿಗೆ　　೬೫

ಸರಳಮಳೆಯ [4]ಕಱೆದರು[4] ರಾಮನಾಥನ
ತುರಗದ ಮೇಲೆ ಬಿಲ್ಲವರು
ಹರಿಗೆಯವರು ಹೊಕ್ಕರಾ[5]ನೆ[5]ಕುದುರೆ ಮೋ
ಹರಿಸಿ ಮುಸುಕಿತು ರಾಮನನು　　೬೬

*ಸೂ[6]ನಗಿ[6]ಯಾನೆ ಸುತ್ತಿದವು ಪಕ್ಕರಿಕೆಯ
ವಾನಾಯುಜ ಬಳಸಿದವು
ಆನದೆ ಬಂದು ತಡೆದರು ಕಾಲವರಂ
ದಾ ನರನಾಥನಂದನನ　　೬೭

ಎಡಬಲದೊಳು [7]ನಿಂದು ಸಬಳಿಗರಿರದವ[7]
ಗಡಿಸಿದರಾರ್ದು ಬಿಲ್ಲವರು
ಬಿಡದೆ ಬಂದೆಚ್ಚ[8]ರು ಕೂಡೆ[8]ಕಯ್ಯೊಳು ಬೊ
ಬ್ಬಿಡುತ [9]ಕುಮಾರರಾಮನನು[9]　　೬೮

---

[1] ಮೇಲಿ (ಎಗ) [2] ನೋಡಿ (ಐ) [3] ಒತ್ತಿ (ಎ ಗ) [4] ಸುರಿದರು (ಉ) ಕವಿದನು (ಎ) ಕರೆದನು (ಗ) [5] ಯು (ಎ ಗ) ನೆಯ (ಐ) [6] ನಂಗಿ (ಎ ಗ) [7] ನಿಂದುಸಬಳಿಗರಿರಿದವ (ಇ) ನಿಂದುಬಳಸಿಬಳಸಿಯವ (ಎ ಗ) ಬಂದು ಸವಳಿಗರಿರದವ (ಐ) [8] ರವರು (ಇ ಎ ಗ) [9] ರಾಮನ ತಱಬಿದರು (ಉ) * (ಉ) ಪ್ರತಿಯಲ್ಲಿಲ್ಲ.

ತುರಗಮೋಹರದೊಳು [1]ಮುಳುಗಿಹೋದನು[1] ಮದ
ಕರಿಯು ಹಿಂಡಿನೊಳಾಳಿದನು
ಧರಣಿಯು ಋಣಹಱಿದುದು ರಾಮ[2]ಗಿನ್ನೆಂ[2]ದು
ಸುರರುಲಿದರು ಮೋಘದೊ[3]ಳಗೆ[3] ೧೯

†ಸರಳ ಪೆರ್ಮಳೆಯೊಳು ನನೆದನು ಕೈದಿನ
ಶರ[4]ಧಿ[4]ಸುಳಿಗೆ ಸಿಕ್ಕಿದನು
ಹರಿಹರದೇವಿಯು ಕಣ್ಗನ್ನ ರಾಮ ಗೋ
ಚರಿಸನೆಂದಮರರುಲಿದರು ೨೦

ಆಹವದೊಳು ಮೇಲೆ ಕವಿದರಿ[5]ಬಿರಿದಿನ[5]
ಮೋಹರದಾ[6]ರ[6]ಭಟೆಯನು
ಸಾಹಸಿಗಳ ತಲೆರನ್ನ ಚೆನ್ನಿಗರಾಮ
ಕಾಹುರ ಮಿಗೆ ನೋಡಿದನು ೨೧

ಮೂವಳಸಾಗಿ ಮುತ್ತಿದ [7]ರಿಪುಸೇನೆಯ[7]
ಗಾವಳಿಯನು ಕಾಣುತಾಗ
ಸಾವಿರಮುಖದೊಳಿರ್ದುದು ರಾಮನೇಱಿದ
ದೇವತುರಂಗ ರಣದೊಳು ೨೨

ಸುತ್ತಕವಿ[8]ದ[8] ಕತ್ತಲೆಯದಿನನಾಯಕ
ನೊತ್ತರಿಸುವ ತೆಱದಿಂದ
ಮುತ್ತಿದ ಮೋಹರವನು ನಿಜಬಲಗೂಡಿ
ತೊತ್ತಳದುಳಿದನಾ ರಾಮ ೨೩

ತುರಗಗಳನು ತುಂಡೆ[9]ಳೆ[9]ಹೊಯ್ದನು ಮದ
ಕರಿಗಳ [10]ಬ[10]ರಿಕೈಗಳನು
ಧ[11]ರೆ[11]ಯೊಳುರು[12]ಳೆ ಕ[12]ಡಿದನು ಕಾಲವರನು
ತೆರಳಿಸಿದನು ಯಮಪುರಿಗೆ ೨೪

---

[1] ಮುಳುಗಿಹೊಯ್ದನು (ಇ) ಮುಗ್ಗಿಹೊಯ್ದನು (ಎ ಗ) [2] ನಿಗೆಂ (ಉ) ನಿಗಿನ್ನೇನೆಂ (ಐ) ಗಿಂತೆಂ (ಎ ಗ) [3] ಳು (ಐ) [4] ಧಿಯ (ಇ) ನಿಧಿಯ (ಎ ಗ) [5] ಬಿರುದರ (ಇ ಉ ಎ ಐ ಗ) [6] ರು (ಇ ಉ ಐ) [7] ಅರಿಸೇನೆಯ [8] ವ (ಐ) [9] ಳೆ (ಉ ಐ) [10] ಭ (ಐ) [11] ರಣಿ (ಇ ಉ ಎ ಐ ಗ) [12] ಳೆಗ (ಐ) ಳಗ (ಉ) † (ಐ) ಪ್ರತಿಯಲ್ಲಿಲ್ಲ.

ತಱುಬಿ ನಿಂದಿಱಿದಾಡುವ ರಾವುತರನು
ಸುರಿಯಿಸಿದನು ನೆತ್ತರವನು
ಉಱುಬುವಾನೆಗಳ ತಿವಿದನು ಕಾಲವರ ಕೈ
ಮುಱಿಯದೆ [1]ಕಡಿ[1]ದೊಟ್ಟಿದನು ೭೫

ಕುದುರೆಗಳನು ಕುಱಿದಱಿ[2]ದನಾ[2]ನೆಗಳನು
ಮುದೆಗೆಡಹಿ[3]ದನು[3]ಕಾಲವರ
ಕೆದಱಿಸಿದನು ಕೆಣಕುವ ಬಲ್ಲವರನು
ಸದೆದನು ಸಬಳದವರನು ೭೬

ಇಱಿದು ನೂಕಿದನು ಬಲ್ಲೆಯದಿಂದ ಖಡ್ಗದಿಂ
ತಱಿದೊಟ್ಟಿದನು ಲೌಡಿಯಿಂದ
ಹೊಱಿಸಿ ಹೊಯ್ದನು ತಲೆಗಳ ನುಚ್ಚು[4]ನೂಱಾಗೆ[4]
ನೆಱೆರಾವುತರನಾ ರಾಮು ೭೭

ಪರಿಪರಿಯಾಯುಧಂಗಳ ಪಿಡಿದೆಯ್ತಪ್ಪ
ಪರಿಚಾರಕರ ಕುದುರೆಗ[5]ಳು[5]
ಬರಲೆಡಬಲದೊಳು ವೈರಿವೋಹರವ ಸಂ
ಹರಿಸಿದನಾ ವೀರರಾಮು ೭೮

*ಎಡ[6]ವಕ್ಕ[6]ದವರನೆಬ್ಬಟ್ಟಿ ಕೊಂದನು ಬಂದು
ತುಡುಕುವ ಬಲ[6]ವಕ್ಕ[6]ದವರ
ಬಡಿದನು ದಂಡನಾಥನ ದಳವನು ತಡೆ
ಗಡಿದನು ರಣದೊಳಾ [7]ಪಾರ್ಥ[7] ೭೯

ಸವಗ ಸೀಳಲು ಸೀಸಕ ಸಿಡಿಯಲು ತೊಟ್ಟ
ಕವಚ ತುಂಡಿಸಲು ರಾವುತರ
ಬವರದೊಳಗೆ ಹೊಕ್ಕು ಹೊಯ್ದನು ಜಂಗುಳಿ
ಕುವರರ ಗಂಡನಾ ರಾಮು ೮೦

ಹರಿದಾಡೆ ಹದ್ದು ಭೂತಂಗಳ ನೆರವಿ ಮೆ
ಯ್ಗರೆಯದೆ ಕುಣಿದಾಡುತಿರಲು
ಪರಬಲವನು ಕೊಂದನು ರಾಮುನರ್ಜುನ
ಕುರುಬಲವನು ಕೊಲುವಂತೆ ೮೧

---

1 ತಱಿ (ಐ) 2 ದಾ (ಐ) 3 ದ (ಅ ಐ) 4 ನುಱಿಯಾಗಿ (ಅ) ನೂಱಾಗಿ (ಇ ಐ ಕ) 5 ಳ (ಎ ಗ) 6 ವಂಕ (ಎ ಕ) 7 ರಾಮ (ಎ ಕ ಗ)
* (ಉ) ಪ್ರತಿಯಲ್ಲಿಲ್ಲ.

ವಿಲಸಿತಕದಳೀಕಾನನವನು ಕರಿ
ಕಳಭ ತುಳಿವ ತೆಱದಿಂದ
ಕಲಹದೊಳಗೆ ಪರಬಲವ ತುಳಿದುದಾ
ಕಲಿರಾಮನ ದಿವ್ಯತುರಗ ೮೨

ತುಳಿದು ಕೊಂದುದು ಕಾಲವರನು ಕುದುರೆಯ
ತಳುವದೆ ಕೆಡಹಿ ಮೆಟ್ಟಿದುದು
ಬಳಿಸಂದು ಬೆದಱಿಸಿದುದು ಭದ್ರಹಸ್ತಿಯ
ಕೊಳುಗುಳದೊಳಗಾ [1]ಕುದುರೆ[1] ೮೩

[2]ಲ[2]ಳಿಯೆದ್ದು ಲಂಘಿಸುವುದು ರಾಮನ ಚಿತ್ತ
[3]ವೆ[3]ಳಸಿದೆಡೆಗೆ ಪೋ[4]ದಪು[4]ದು
ಮುಳುಗುವುದೊಂದು ಮೋಹರದೊಳು ಮತ್ತೊಂದು
[5]ಬಲ[5]ದೊಳು ತಲೆದೋಱುವುದು ೮೪

ಹರಿಯಬಿ[6]ಟ್ಟೊಡೆ[6] ರಾಮನ ಚಿತ್ತದಿಂ ಮುಂದು
ವರಿವುದು ಕಯ್ಯನಿಕ್ಕಿದೊಡೆ
ಅರಸಿನಾಣೆಯನಿ[7]ಕ್ಕಿದಂ[7]ತೆ ನಿಲುವುದಾ
ತುರಗ ಸಂಗ್ರಾಮಭೂಮಿ[8]ಯೊಳು[8] ೮೫

ಕಚ್ಚಿಡುವುದು [9]ಪು[9]ಲಿಯಂತಾಳನಾನೆಯ
ಬೆಚ್ಚಿಸುವುದು ಸಿಂಹದಂತೆ
ಮಚ್ಚರಮಿಗೆ ಕುದುರೆಯ ಕೆಡಪುವುದು [10]ಮೆ
ಯ್ವೆಚ್ಚ[10]ರಾಮನ ದಿವ್ಯವಾಜಿ ೮೬

*ಸಿರ[11]ಹಾಯುದ ಕುದುರೆಯ ಕಂಡು[11] ಸಾಕ್ಷಾ
ತ್ಸಿಂಹವೆಂದರಿಕರಿನಿವಹ
ಬೃಂಹಿತವನು ಮಾಡಲಮ್ಮದೋಡಿದವಂದು
ಸಂಹನನದ ಶಕ್ತಿಗೆಟ್ಟು ೮೭

---

1 ತುರಗ (ಐ) 2 ಅ (ಎ ಗ) 3 ಕೆ (ಎ ಗ) 4 ಗಿಹು (ಇ ಉ ಎ ಐ ಕ ಗ) 5 ದಳ (ಐ) 6 ಟ್ಟರೆ (ಇ ಐ) 7 ಟ್ಟಂ (ಇ ಉ ಎ ಕ ಗ) 8 ಯಲಿ (ಕ) 9 ಹು (ಅ) 10 ವ್ಯೆವೆಚ್ಚ (ಅ ಉ) 11 ಹನಾದವ ಮಾಡಲು ಕುದುರೆಯ (ಇ ಎ ಗ) ಸಿಂಹಾಯುದ ಕುದುರೆಯನದ (ಐ) * (ಉ) ಪ್ರತಿಯಲ್ಲಿಲ್ಲ.

ಹನುಮಿಸಿದೊಡೆ ಸಿಂಹನಾದವೆಂದಾನೆಗ
[1]ಳ್ಮನಗುಂದುವವು[1] ಕುದುರೆಗಳು
ಕನಲಿ ಕಣ್ಗೆಡುವವೆಂದೆನಲಾ ವಾರುವ
ನನುವನದೇನ [2]ಬಣ್ಣಿಪೆನು[2]　　೮೮

ಘಾಯವಡೆದು ಘಾಸಿಯಾಗಿ ಕಣ್ಗೆಟ್ಟುಱೆ
ಬಾಯಬಿಡುತ ಭೀತಿಯೊಳು
ತಾಯಿಗೆ ಮಕ್ಕ[3]ಳಲ್ಲದೆ ಮಿಗೆ[3] ಹಱಿಹಂ
ಚಾಯಿತು ವೈರಿಪಾ[4]ಯದಳ[4]　　೮೯

*ಮಂಡೆಯೊಡೆದು [5]ಮ್ಮೈಹ[5]ಱಿದು ಕೈಕಾಲುಱೆ
ತುಂಡಿಸಿ ನೊಂದು ಬೆನ್ನಾದ
ದಂಡನಾಥನ ಬಲವನು ಮಗಹೊಯ್ಸಳ
ಕಂ[6]ಡನು[6] ಕಲಹಭೂಮಿಯೊಳು　　೯೦

ಎಲೆಲೆ [7]ಕೆಟ್ಟಿತು[7] ರಾಜಕಾರ್ಯ ಮುಱಿದುದೆಮ್ಮ
ಬಲ ರಾಮನಾಥನುಱಿಬೆಯ
ನಿಲಿಸುವ ವೀರರಿಲ್ಲೆನುತ ಬಂದನು ಬೇಗ
ಛಲವೆದ್ದು ಮಗಹೊಯ್ಸಳನು　　೯೧

ತೆಗೆದು ಹಿಮ್ಮೆ[8]ಟ್ಟುವ[8] ಬಲವ ನಿಲಿಸಿಕೊಂಡು
ಮೊಗ[9]ಮಾ[9]ಡಿ ಮತ್ತೆ ಮೋಹರವ
ಧಿಗಿಲನೆ ಬಂದಡ್ಡಲಾದನು ರಾಮಗೆ
ಮಗಹೊಯ್ಸಳನಾಜಿಯೊಳು　　೯೨

ಎರಡು ಲಕ್ಕಾಳೆಂಟು ಸಾವಿರ ಕುದುರೆ ಪ
ಕ್ಕರಿಕೆಯಿನ್ನೂಱಾನೆವೆರ[10]ಸು[10]
ಭರದಿಂದ ಬಂದಡ್ಡಲಾದನು ರಾಮಗೆ
ಧುರದೊಳು ಮಗಹೊಯ್ಸಳನು　　೯೩

---

[1] ಮನಗುಂದುವುದು (ಐ)　[2] ಪೇಳುವೆನು (ಐ)　[3] ಳಿಲ್ಲದೆ ಕೆಟ್ಟು (ಉ)
[4] ಯ್ದಳವು (ಇ ಎ ಗ)　ಯಿದಳ (ಅ)　[5] ಮೆಯಿ (ಇ ಎಗ)　[6] ಡು (ಇ)
[7] ಕೆಟ್ಟುದು (ಇ ಎ ಐ ಗ)　[8] ಟ್ಟಿದ (ಎ ಗ)　[9] ನೋ (ಎ ಐ ಗ)　[10] ಸಿ (ಐ)
* (ಉ) ಪ್ರತಿಯಲ್ಲಿಲ್ಲ.

*ಉಲಿಯೆ ಕಹಳೆ ಚಂಬಕವಱೆ ಬೊಂಬುಳಿ
ಯಲೆಯೆ ದುಂದುಭಿರವ ದೆಸೆಯ
ತಲೆ[1]ಯೊ[1]ತ್ತ ನೂಕಿತುಭಯಬಲ ಕಯ್ಯಿಕ್ಕಿ
ಕಲಸಿದಂತಾ[2]ಯ್ತು ರಣದೊ[2]ಳು ೯೪

ಚುಂಬಿಸೆ ಸೇನಾಪದಧೂಳಿ ನೇಸಱ
ಬಿಂಬವನಿಳೆಯನೆಲ್ಲವನು
ತುಂಬಲುಭಯಬಲ ಕಡಿದಾಡಿದು[3]ದೇನ[3]
ನೆಂಬೆ [4]ಸು[4]ರರು ಪೊಗಳಿದರು ೯೫

ಬರಲೆಡಬಲದೊಳು ಬಿರುದಿನ ರಾವುತ
ರರಿಬಲವನು ರಾಮನಾಥ
[5]ಇರದೆ ಪೊಕ್ಕನು ಗೋಗ್ರಹಣದೊಳರ್ಜುನ[5]
ಕುರುಬಲವನು [6]ಪೊಗುವಂತೆ[6] ೯೬

*ಜೋಡು ತಟ್ಟು[7]ರ್ಚಿ[7] ಬಲ್ಲೆಯ ಬೆನ್ನೊಳು ಮಿಗೆ
ಮೂಡಲದಟರಾವುತರ
ಕೂಡೆ ತಿವಿದು ಕೆಡಹಿದನು ಮೇಲಮರರು
ನೋಡಿ ನಲಿಯೆ ರಾಮನಾಥ ೯೭

ಖಂಡೆಯದಿಂದ ತುಡುಕುವ ರಾವುತರನು
ತುಂಡೆ[8]ಳೆ[8] ಹೊಯ್ಯೆ ರಣದೊಳು
ಕೊಂಡಾಡಿದರೆರಡುಂ ಬಲದೊಳ್[9]ಗಣು[9]
ದ್ದಂಡ[10]ಬಿರುದಿನ[10] ರಾವುತರು ೯೮

*ಇಡಲಿ[11]ಡು[11]ಗಟ್ಟಿಗೆಯಿಂದ ರಾವುತರದ
ಱೊಡನೆ ಬೀಳ್ವರು ಕುದುರೆಗಳ
ಹಿಡಿ[12]ವ[12]ರೊತ್ತಿನ ರಾವುತರೆನೆ ರಾಮನ
ನುಡಿಯಬಹುದೆ ರಾವುತರೊಳು ೯೯

---

[1] ಯೆ (ಇ) ಪೊ (ಎ ಗ) [2] ಯ್ತಾಜಿಯೊ (ಐ) [3] ದೇ (ಎ ಗ) ದೆನೆ (ಐ) [4] ನಮ (ಐ) [5] ಭರದಿಂದ ಬಂದು ಬಲವ ಕೊಂದನರ್ಜುನ (ಎ ಗ) ಇರದೆ ಪೊಕ್ಕನು ಗೋಗ್ರಹಣದಲರ್ಜುನ (ಐ) [6] ಕೊಲುವಂತೆ (ಎ ಗ) [7] ರ್ಚೆ (ಎ ಗ) [8] ಳ (ಇ) [9] ಗು (ಗ) [10] ಬಲದ (ಐ) [11] ಡಂ (ಇ) ಡಿ (ಐ) [12] ದ (ಇ)
* (ಉ) ಪ್ರತಿಯಲ್ಲಿಲ್ಲ.

*ಪೊಡೆದೊಡೆ ಲೌಡಿಯಿಂ ರೌಳಿಯೊಡನೆ ತಲೆ
ಯೊಡೆದು ಚಿಪ್ಪುಗಳೇಳ್ವವೆನಲು
ಪಡಿಯಿಡಬಹುದೆ ರಾಮಗೆ ನರಲೋಕದ
ಕಡುಗಲಿ ರಾವುತರುಗಳ ೧೦೦

ಓಡುವ ರಾವುತರನು ಕೂಡೆ ಕೈವಿ[1]ಡಿದೀ[1]
ಡಾಡಲುಭಯಮೋಹರದ
ರೂಢಿವಡೆದ ಹೆಸರಿನ ರಾವುತರು ಬಾ
ಯ್ಗೂಡಿ ರಾಮನ ಪೊಗಳಿದರು ೧೦೧

ಶಿವಶಿವ ಗುಣಕೆ ಮ[2]ಚ್ಚ[2]ರವುಂಟೆ ಜಂಗುಳಿ
ಕುವರರರ ಗಂಡ ರಾ[3]ಮನಿ[3]ಗೆ
ಅವನಿಯೊ[4]ಳೆಣೆಯು[4]ಹರಿಲ್ಲೆಂದುಭಯ ಬಲ
ತವೆ ಪೊಗಳಿ[5]ದುದು[5]ರಾಮನನು ೧೦೨

*ಆ ಮೋಹರವನೊಂದರೆಘಳಿಗೆಯೊಳು ಸಂ
ಗ್ರಾಮದೊಳೆ[6]ದೆಗೆಡಿಸಿದನು[6]
ರಾಮನಾಥನ ರಾವುತಪಾಯಿಕೆಯ ನಿ
ಸ್ಸೀಮತೆಯನು ಪೇಳ್ವೆನೇನ ೧೦೩

ಮುಱಿದುದು ಬಲ ಮತ್ತೆ ಮಗಹೊಯ್ಸಳ ತನ್ನ
ಕುಱುಹು ಕುಱುಹಿನ ಮನ್ನೆಯರ
ಜಱಿದು ಮೂದಲಿಸುತ ಬಂದಡ್ಡಲಾದನು
ನೆಱೆ [7]ರಾವುತರಾಮನಿಗೆ[7] ೧೦೪

ತಱುಬಿ ನಿಲಲು ಹೊಯ್ಸಳ ಕೆದಱಿದಬಲ
ಗಱಿಗಟ್ಟಿ ಮತ್ತೆ ಮೋಹರಿಸಿ
ಉಱುಬಿತು ರಾಮನ ಮೇಲೆ ಮುಗಿಲತಂಡ
ಬಿಱುಗಾಳಿಗಿದಿರೆತ್ತುವಂತೆ ೧೦೫

ಎಡವ[8]ಕ್ಕ[8]ದವರ ಜ[9]ಱೆ[9]ದು ಬಲವ[8]ಕ್ಕ[8]ದ
ಕಡುಗಲಿಗಳ [10]ಮೂದಲಿಸಿ[10]
ನುಡಿದು ಸೇನಾಪತಿಯನು ಮಗಹೊಯ್ಸಳ
ತಡೆದನು ರಾಮನಾಥನನು ೧೦೬

---

[1] ಡಿ (ಇ) [2] ತ್ಸ (ಇಉಐ) [3] ಮುಗ (ಇ ಉ ಎ) [4] ಳಿದಿರ (ಐ) [5] ದರು (ಇ ಉ ಐ) [6] ಡಗೆಡಹಿದನು (ಐ) [7] ಗಲಿರಾಮನಾಥನಿಗೆ (ಉ) [8] ೦ಕ (ಉ ಕ ಎ) [9] ಱ (ಅ) [10] ಮೋಹರಿಸಿ (ಐ) ★ (ಉ) ಪ್ರತಿಯಲ್ಲಿಲ್ಲ.

ಕೂಡಿತು ಕೆದಱಿದ ಬಲ ಮನ್ನೆಯರುಜೋಡು
ಮೂಡಿತೊಡೆಯನಿದಿರಿನಲಿ
ಹೇಡಿಗಳ್ಕಲಿಯಹರೆನಲವದಿರು ಪಂಥ
ಪಾಡನಱಿಯದ [1]ರಾವುತರೆ[1] ೧೦೭

*ಎಡವ[2]ಕ್ಕ[2] ಬಲವ[2]ಕ್ಕ[2] ಬೇಡ [3]ಪವು[3]ಜು ರಾಯ
ಪಡೆ ತನ್ನ ಮೋಹರವೆರಸು
ಕಡುಗಲಿ ಮಗಹೊಯ್ಸಳ ರಾಮನಾಥನ
ತಡೆದನು ಕಡುಹು ಕೈಮಿ[4]ಗಿ[4]ಲು ೧೦೮

ಗಂಟಿಕ್ಕಿತೆರಡು ಮೋಹರ ಬೇಗದೊಳು ಬಲು
ಬಂಟರು ಹೊಕ್ಕು ಹೊಯ್ದಾಡಿ
ಗಂಟಲ [5]ಬಳೆ[5]ಗಳೆದರು ಸಗ್ಗ[6]ದೊಳು[6]ಸೂಳೆ
ಬಂಟಿಕೆ ಮಿಗಿಲಾದುದಂದು ೧೦೯

ಭರ[7]ದಿಂದ[7] ತಮ್ತಮ್ಮ ಮೋಹರದೊಡಗೂಡಿ
ದೊರೆದೊರೆಗಳು ಮೋಹರಿಸಿ
ಉರುವಣೆಯಿಂ ಬಂದು ಹಳಚಿದರಂದಿನ
ಧುರವನದೇನ [8]ಬಣ್ಣಿಪೆನು[8] ೧೧೦

ನೂಕಿ ಹೊಕ್ಕನು ಮಗಹೊಯ್ಸಳ ಕಾ[9]ಳ[9]ಗ
ಧಾಕೆವಾಳರ ಕೂಡಿಕೊಂಡು
ನೂಕು[10]ತಾ[10]ಕಾಯಿತುಭಯಬಲ ಕೆಸ್ಸೀ
ರೋಕುಳಿಯಾಯ್ತು ರಣದೊಳು ೧೧೧

ದಂಡನಾಥನ ಹರಿಬದ ಕಾಳಗಕೆ ಮುಂ
[11]ಕೊಂಡಿಱಿದಾಡಿ[11] ಹೊಯ್ಸಳನು
ಗಂಡುತನವ ಮೆಱೆದನು ಬಲವೆರಡಂದು
ಕೊಂಡಾಡಿದುದು ಹೊಯ್ಸಳನ ೧೧೨

---

[1] ಸುಭಟರೆ (ಅ ಇ ಉ ಎ ಐ) [2] ೦ಕ (ಎ) [3] ಪಾ (ಇ ಐ ಗ) [4] ಗ (ಇ ಐ) [5] ಬಲ (ಎ ಗ) [6] ದ (ಉ ಐ) [7] ದೊಳು (ಇ ಉ ಎ ಗ) [8] ಹೇಳುವೆನು (ಐ) [9] ಳೆ (ಎ ಗ) [10] ನೂ (ಐ) [11] ಕೊಂಡುವಿಱಿದು (ಕ) ಕೊಂಡೇಱಿದು (ಐ) * (ಉ) ಪ್ರತಿಯಲ್ಲಿಲ್ಲ.

ಕಂಡನು ಹೊಯ್ಸಳನುಱುಬೆಯ ಕಲಿಕಾಲ
ಗಾಂಡೀವಿ ರಿಪುಮೋಹರದ
ಗಂಡರಗಂಡ ಕಲಹಸರ[1]ಸಿಜವೇ[1]
ತಂಡ ಕಂಪಿಲನಕುಮಾರ　　೧೧೩

ಹಿರಿಯುಬ್ಬಣವ ಸೆಳೆದನು ಮೆಯ್ಯಾ[2]ವ[2]ಲ
ಬಿ[3]ರು[3]ದ ರಾವುತರ ನೋಡಿದನು
ತುರಗವ ಬೋಳೈಸಿದನು ಮೋಹರಿಸಿದ
ಪರಬಲವನು ನಿಟ್ಟಿಸಿದನು　　೧೧೪

*ಬೊಬ್ಬೆಯ ದನಿ ಲಗ್ಗೆವಱೆಯ ಕೋಳಾಹಳ
ಗಬ್ಬರಿಸಲು ದೆಸೆಗಳನು
ಉಬ್ಬಿನಿಂ ಹೊ[4]ಕ್ಕಿಱಿದಾಡುವ[4] ಬಲವನು
ಬೆಬ್ಬಳಿಗೊಳಿಸಿದನಂದು　　೧೧೫

*ಖಂಡೆಯದಿಂ ಪೊಯ್ಯೆ ಕುದುರೆಯ ಮೇಲೊಂದು
ತುಂಡವನಿಯ ಮೇಲೊಂದು
ತುಂಡಿಹುದೆನೆ ರಾಮನಾಥನ ಹೊಯ್ಲಿನು
ದ್ದಂಡತೆಯನು ಪೇಳ್ವೆನೇನ　　೧೧೬

*ಇಟ್ಟಡೆ ಸೆಲ್ಲೆಹ [5]ಕಂ[5]ಗಲಜೋಡನು
ತಟ್ಟುರ್ಚಿ ಮೆಯ್ಯನುಚ್ಚಳಿಸಿ
[6]ನೆ[6]ಟ್ಟಿಹುದವನಿಯನೆನೆ ರಾಮನೀಡಿನ
ಘಟ್ಟಿವಾಳಿಕೆಯನೇನೆಂಬೆ　　೧೧೭

*ಹೊಯ್ದಡೆ ಲೌಡಿಯಿಂ ತಲೆಯು ವಿದುಳು ಮಿಗೆ
ಹಾಯ್ದು ರಾವುತರಚ್ಚರಿಯರ
ಮೆಯ್ದುಡುಕುವರೆನೆ ರಾಮ[7]ನೀ[7] ಲೋಕದ
ಕಯ್ದುವಿಡಿದ ಭಟ[8]ರೊಳಗೆ[8]　　೧೧೮

---

[1] ಸಿಜವೈ (ಅ) ಸೀವೇ (ಇ ಎ ಐ ಗ) ಸಿಯುವೇ (ಉ) [2] ವಿ (ಅ) [3] ರಿ (ಐ) [4] ಕ್ಕುಱುಬುವಪರ (ಇ ಎ ಐ ಗ) [5] ತೊಂ (ಅ) [6] ನ (ಐ) [7] ಗೀ (ಐ) [8] ರಳವೆ (ಐ) * (ಉ) ಪ್ರತಿಯಲ್ಲಿಲ್ಲ.

ಒಡ್ಡಿಯೂರಿಯ ಲಾಳ ತುರುಕ ಕನ್ನೋಜಿಗ
ಳೊಡ್ಡನಿರದೆ ಕಲಕಿದನು
ಅಡ್ಡಲಾದರಿಬಿ[1]ರು[1]ದರ ಹೊಯ್ದು ರಣದೊಳ
ಗಡ್ಡಗೆಡಹಿದನಾ ರಾಮ ೧೧೯

*ತುರಗದ ಖುರಪುಟ[2]ಹತದಿಂ[2] ರಾಮನ
ಕರದ ಖಡ್ಗದ ಹೊಯ್ಲಿನಿಂದ
ಇರದೆ ಕಣ್ಗೆಟ್ಟು ಕಾಲವರು ಮೇಲವರು ಮೆ
ಯ್ಗರೆದರು [3]ಗಿರಿತರುಗಳೊಳು[3] ೧೨೦

ಕನ್ನೋಜಿಗಳನೋಡಿಸಿದನು ತುರುಕರ
ಬೆನ್ನ ಕಂಡನು ಬಂದುಱುಬುವ
ಕನ್ನಡಿಗರ ಕದಲಿಸಿದನೊಡ್ಡಿಯರನು
ಬನ್ನಬಡಿಸಿದನಾ ರಾಮ ೧೨೧

ಸುಟ್ಟುಱೆಯಂತೆ ಸುಳಿದು ಬಿಱುಗಾಳಿಯಂ
ತಟ್ಟಿ ಪೆರ್ಬುಲಿಯಂತರಿಗಳ
ಮುಟ್ಟಿ ಪಿಡಿದು ಕೊಂದುದು ರಾಮನಾಥನ
ಪಟ್ಟದ ವಾಜಿ ರಣದೊಳು ೧೨೨

*ಆವ ಕಡೆಯೊಳು ನೋಡುವ[4]ರೆ[4] ಕವಿವ ಸುಭ
ಟಾವಳಿ ಕರಿತುರಗಗಳು
ಆವ ಕಡೆಯೊಳು ನೋಡುವ[4]ರೆ[4] ಮೊಳಗುವ ನಾ
ನಾವಾದ್ಯವೆಸೆದುದಂದಲ್ಲಿ ೧೨೩

ಜಲ[5]ಧಿ[5]ಮಧ್ಯದ ನಾವೆಯು ತೆಱದಿಂ[6]ದಾ[6]
ಕಲಿರಾಮ[7]ನ ವಾರುವನು[7]
ಒಳಪೊಕ್ಕು ರಿಪುಸೇನಾಶರನಿಧಿಯೊಳು
ಸುಳಿದಾಡಿದು[8]ದೇನನೆ[8]ಂಬೆ ೧೨೪

---

[1] ರಿ (ಇ ಐ) [2] ಘಾತದಿಂ (ಇ ಐ) [3] ಗಿರಿತುರಗದೊಳು (ಅ) ತರುಗಿರಿಗಳೊಳು (ಐ) [4] ಡೆ (ಐ) [5] ಧಿಯ (ಇ ಎ ಗ) ನಿಧಿ (ಉ) ದ (ಅ) [6] ಧಲಿ (ಅ) ದ (ಇ ಉ ಎ ಗ) [7] ನೇಱಿದತುರಗ (ಐ) [8] ದೇನೆಂ (ಇ ಎ ಗ) ದನೇನನೆಂ (ಉ ಐ) * (ಉ) ಪ್ರತಿಯಲ್ಲಿಲ್ಲ.

ಲಗ್ಗೆಯೊಡೆದುದಾನೆಯ ಮೋಹರ ಮೇಲೆ
ಮುಗ್ಗುವ ಕುದುರೆಯ [1]ಪೌ[1]ಜು
ಒಗ್ಗೊಡೆ[2]ಯಿತು[2] ಕದಲಿತು ಕಾಲಾಳವ
ನಗ್ಗಳಿಕೆಯನೇನನೆಂಬೆ ೧೨೫

ಕದಲಿದ ಬಲವ ಕಾಣುತ ಹತ್ತುಸಾವಿರ
ಕುದುರೆವೆರ[3]ಸು[3] ಹೊಯ್ಸಳನು
ಇದಿರಾದನು ರಾಮಗೆ ಸಿಂಹಕಾನೆಯ
ಕದುಪು ಮ[4]ಲ[4]ತು ನಿಲುವಂತೆ ೧೨೬

ಹೆಚ್ಚಿದ ಹೇರಡವಿಯ ಪೊಗುವಂತೆ ಕಾ
ಳ್ಗಿಚ್ಚು[5]ವೈರಿಯ[5]ಮೋಹರವ
ಮಚ್ಚರವಿಗಲೊಳಪೊಕ್ಕನಂಬರದೊಳು
ಮೆಚ್ಚಿ ನೋಡಲು ದೇವತೆಗಳು ೧೨೭

*ಹೊಕ್ಕನು ಹೊರಳೆಯೊಡಯಿಸಿದ ಪೌಜ ಮೇ
ಲಿಕ್ಕಿ ತಿವಿವ ರಾವುತರ
ಇಕ್ಕಿದನಾಜಿರಂಗದೊಳು ರಾಮನ ಶೌರ್ಯ
ದುಕ್ಕಂದವನೇ[6]ನನೆಂ[6]ಬೆ ೧೨೮

ಜೋದರ ಜೋಕೆಗೆಡಿಸಿದನು ಜೋಡಿಸಿ
ಕಾದುವ ಕಾಲುಪಾಯಕರ
ಭೇದಿಸಿದನು ರಾವುತರನಮುರಿಯ[7]ರಿಗೆ[7]
ಕಾದಲರನು ಮಾಡಿದನು ೧೨೯

ಹೂ[8]ಣಿ[8] ಹೊಕ್ಕಱಿದಾಡುವ ದೊರೆದೊರೆಗಳ
ಕಾಣಿಸಿ ತಿವಿದು ಬೇಗದೊಳು
ರಾಣಿಯರನು ಮಾಡಿದನವರಿಗೆ ನಾಕ
ದೇಣಾಕ್ಷಿಯರ ನಾ ರಾಮ ೧೩೦

---

[1] ಪವು (ಉ ಐ)   [2] ದುದು (ಇ ಉ ಎ ಗ)   [3] ಸಿ (ಐ)   [4] ಲೆ (ಇ ಎ ಗ)
[5] ಕದುಬುವ (ಅ) ಱುವೈರಿ (ಉ) ತಾವೈರಿ (ಎ ಗ)   [6] ನೆಂ (ಎ ಗ)   [7] ರ (ಐ)
[8] ಣಿ (ಐ)   * (ಉ) ಪ್ರತಿಯಲ್ಲಿಲ್ಲ.

ಕೆಡೆಯದ ಕುದುರೆ ಕೆದಱಿದಾನೆ ಸೆಡೆಯದ
ಕಡುಗಲಿಗಳು ಬೆನ್ನಿತ್ತು
ಸಿಡಿಯದ ದೊರೆಗಳಿಲ್ಲೆನೆ ರಿಪುಬಲವನು
ಬಿಡದೆ ಕೊಂದನು ವೀರರಾಮ ೧೩೧

*ಪಟಹ ಮೃದಂಗನಿನಾದವೆಸೆಯೆ ಪಟು
ಭಟರ ಕೋಳಾಹಳ ಮಸಗೆ-
ಚಟುಲತೆ ಮಿಗೆ ರಾಮನ ವಾಜಿ ರಣರಂಗ
ನಟನಾದು[1]ದು ಪೇಳ್ವೆನೇನ[1] ೧೩೨

ಇದು ಲೌಡಿಯಲ್ಲದಂದಿನ ಕೃಷ್ಣರಾಯನ
ಗದೆಯಿದು ಬಲ್ಲೆಹವಲ್ಲ
ಮದನಾರಿಯ ಕಯ್ಯ ಶೂಲವೆಂದರಿಬಲ
ಬೆದಱೆ ಕೊಂದನು ರಾಮನಾಥ ೧೩೩

*ಕಡುಸೊಕ್ಕಿದಾನೆ ಬಾಳೆಯ ಬನವನು ಮಿಗೆ
ಕೆಡಹುವಂತರಿಮೋಹರವ
ಕ[2]ಡುಗೆ[2]ಯ್ದು ಕಡಿದೊಟ್ಟಿದನಮರಸ್ತ್ರೀಯ
ರೊಡನೆ ರಾಮನ[3]ಪೊಗಳಿ[3]ದರು ೧೩೪

*ಎ[4]ಸೆ[4]ವ ಬಿಲ್ಲಿಡುವ ಸೆಲ್ಲೆಹ ಮಿಗೆ ಪೊಯ್ವ ಕೂ
ರಸಿ ಮೋದುವ ಗದೆ ತಿವಿವ
ಮುಸಲ ಕಡಿವ ಖಂಡೆಯಗಳನಾ ರಾಮ
ಕುಸುರಿದಱಿದನು ರಣದೊಳು ೧೩೫

ಸುತ್ತಿ ಬಳಸಿಕೊಂಡ [5]ವೈರಿಮೋಹರವನು[5]
ತೊತ್ತಳದುಳಿ[6]ಯುಲಾ ರಾಮ[6]
ಸತ್ತರು[7]ಕೆಲ[7]ರು ಬೇಸತ್ತರು[7]ಕೆಲ[7]ರು ಬೆ
ನ್ನಿತ್ತರು [7]ಕೆಲ[7]ರು ರಣದೊಳು ೧೩೬

---

[1] ದೇನಪೇಳುವೆನು (ಎ) [2] ಡುಕೆ (ಇ) ಡಿಕೆ (ಐ) [3] ಪರಸಿ (ಇ ಎ ಗ) [4] ಸು (ಇ ಐ) [5] ಮೋಹರವನುರಾಮ (ಅ) [6] ದನಾಜಿಯೊಳು (ಅ) [7] ಕೆಲಬ (ಎ ಕ ಗ) * (ಉ) ಪ್ರತಿಯಲ್ಲಿಲ್ಲ.

*ಕರಿಘಟೆಯನು ಕಲಕಿದ ಹಯದೊಡ್ಡನು
ಹರಹಿದನಹಿತಮೋಹರವ
ಹುರಿಯೊಡೆಯಿಸಿದನು ಹೊ[1]ಕ್ಕು[1] ತಿವಿದು ಮೊಗ
ದಿರುಹಿತು ವೈರಿಪಾಯಿದಳ ೧೩೭

†ಸಿಡಿದ ಸೀಸಕದ ಜರಿದ ಜೋಡಿನ ಕಡಿ
ವಡೆದ ಸವಗ[2]ದ ಮೊಗದೊಳು[2]
ಬಿಡದೆ ಬಸಿವ ನೆತ್ತರಿನ ಬಿರುದರು ಬೆ[3]ನ್ನ
ನೊ[3]ಡನೆ ರಾಮಗೆ ಕಾಣಿಸಿದರು ೧೩೮

†ಮುಱಿದ ಕೊಂಬಿನ ಮಿಗೆ [4]ಹ[4]ಱಿದ ಶುಂ[5]ಡಿ[5]ಲ ದುಱು
ದುಱಿಪ ಘಾಯದ ಕೂರಾ[6]ನೆ[6]
ಮುಱಿದೊಯ್ಯನೆ ಬಂದು ವೀರಬಲ್ಲಾಳನ
ಮಱೆಹೊಕ್ಕು ತರಹರಿಸಿದ[7]ರು[7] ೧೩೯

ಉಡಿದ ಬಿಲ್ಲಿನ ಕಡಿವಡೆದ ಗಡೆಯ ಮಿಗೆ
ಪುಡಿಪುಡಿಯಾದ ಹರಿಗೆಯ
ಕಡುಗಲಿಗಳು ಮುಱಿದೊಯ್ಯನೆ ಬಲ್ಲಾಳ
ನೆಡಬಲದೊ[8]ಳಗೆ[8] ಸೇರಿದುದು ೧೪೦

ಎಡ[9]ವಂಕ[9] ಮುಱಿದುದು ಬಲ[9]ವಂಕ[9] ಬೆನ್ನಿತ್ತು
[10]ದಡಿದೋಱಿದುದು ದಳ[10]ಪತಿಯ
ಪಡೆ ಹೊಯ್ಸಳನ ಮೋಹರ ಮೊಗ[11]ದೆಗೆಯಿತು[11]
ಕಡುಗಲಿ ರಾಮನುಱುಬೆಗೆ ೧೪೧

ಮೊಗದ ಘಾಯದೊಳೊಯ್ಯನೆ ದಳಪತಿ [12]ಮೆ
ಯ್ದೆಗೆದನು[12] ಬಿರುದ[13]ರಾವುತರು[13]
ಜಗಳದೊಳಗೆ ನೊಂದು ಬೇಸತ್ತು ಮೆಲ್ಲನೆ
ಜಗುಳಿದರೆಡಬಲ[14]ಗಳಿಗೆ[14] ೧೪೨

---

[1] ಯ್ದು (ಉ) [2] ಸೀಸಕದೊಳು (ಐ) [3] ನ್ನೊ (ಅ) [4] ಪ (ಐ) [5] ಡ (ಐ) [6] ನೆಗಳ (ಅ ಎ ಗ) [7] ವು (ಐ) [8] ಳು (ಎ ಐ ಗ) [9] ವಕ್ಕ (ಇ ಐ) [10] ಸಿಡಿದೋಡಿದುದು ಜನ (ಐ) [11] ದಿರುಹಿತು (ಇ ಕ) ದಿರುಗಿತು (ಎ ಗ) ದೆಗೆದುದು (ಐ) [12] ಮೊಗದೆಗೆದನು (ಇ) ಮಯ್ದೆಗೆಯೆ (ಎ ಗ) [13] ಮನ್ನೆಯರು (ಇ) [14] ದೊಳಗೆ (ಅ)

* (ಐ) ಪ್ರತಿಯಲ್ಲಿಲ್ಲ † (ಉ) ಪ್ರತಿಯಲ್ಲಿಲ್ಲ.

ಕಂಡನು ರಾಮನಾಥನ ರಾವುತಿಕೆಯು
ದ್ದಂಡತೆಯನು ಬಲ್ಲಾಳ
ಕೊಂಡಾಡಿದ[1]ನಾ[1] ರಾಮನ [2]ಪಡೆದ[2] ಭೂ
ಮಂಡಲಪತಿ ಕಂಪಿಲನ ೧೪೩

ಆವ ನೋಂಪಿಯ ಮಾಡಿ ಪಡೆದನೊ ಕಂಪಿಲ
ದೇವಕುಮಾರ ರಾ[3]ಮನನು[3]
[4]ಪಾವನಿ[4] ಪಾರ್ಥರು [5]ಪಾಟಿ[5]ಯಲ್ಲದೆ ಮಿಕ್ಕ
ರಾವುತೆರೆಣೆಯೆ ರಾಮನಿಗೆ ೧೪೪

ಶಿವಶಿವ ಗುಣಕೆ ಮ[6]ತ್ಸ[6]ರವುಂಟೆ ರಾಮನ
ಬವರದ ಬಲುಗಯ್ಯತನವ
ಹವಣಿಸಬಹುದೆ ಮಹಾದೇವಯೆನುತ ಮ
ತ್ತವನ ಪೊಗಳಿದ ಬಲ್ಲಾಳ ೧೪೫

ನೊಂದು ಬಹಳ ಹಱಿಹಂಚಾದ ತನ್ನಯ
ಮಂದಿ ಕುದುರೆ [7]ಕರಿಘಟೆಯು[7]
ಅಂದು ಮೂದಲಿಸುತ ತಡೆದು [8]ಪವು[8]ಜು ಮಾಡಿ
ನಿಂದನು ಬಲ್ಲಾಳನೃಪತಿ ೧೪೬

ಕೊಂದರಿಬಲವನು ಬಂದು ಕಾಲ್ಗೆಱಗಿದ
ನಂದನನನು ಕಂಪಿಲನು
ಅಂದಪ್ಪಿಕೊಂಡಾನಂದಾಶ್ರುಜಲದೊಳು
ನಾಂದನು ನಲವೇಱಿದನು ೧೪೭

*ಬಿಟ್ಟನು ಬಹುವಾಡವ ರಾಮನೇಱಿದ
ಪಟ್ಟದ ವಾಜಿಗವನಿಪ
ಕಟ್ಟಿಹೊತ್ತರು ಸಹಣಿಗಳು ತರಣಿ ಪಡು
ವೆಟ್ಟ[9]ವನಿ[9]ರದೆ ಸಾರಿದನು ೧೪೮

---

[1] ನು (ಅ) [2] ಹಡೆದಾ (ಇ ಎ ಐ ಗ) [3] ಮುಂಗನ (ಎ ಗ) [4] ಪವಮಾನಿಯು (ಐ) [5] ರೆಣೆಯ (ಐ) [6] ಚ್ಛ (ಎ ಐ) ಶ್ಚ (ಗ) [7] ಯ ಬಲ್ಲಾಳ (ಐ) [8] ಪೌ (ಅ ಇ ಉ) [9] ವಿ (ಐ) * (ಉ) ಪ್ರತಿಯಲ್ಲಿಲ್ಲ.

*ಇರಲಾನಹಿತ ಮೋಹರ[1]ವೆ[1]ಲ್ಲವ ಸಂ
ಹರಿಸದಿರನು ರಾಮನೆಂದು
ಭರದಿಂದ ಪೋಪಂತರವಿಂದಸಖನಸ್ತ
ಗಿರಿಯ [2]ಮಱೆಗೆ ತೆರಳಿದನು[2] ೧೪೯

ಕತ್ತಲೆ ಬಂದು ತರಣಿಕಿರಣಂಗಳ
ನೊತ್ತರಿಸಲು ಘಾಯದವರ
ಹೊತ್ತೊಯ್ಯನೊಯ್ಯನುಭಯಬಲ ನಡೆಗೊಂ
[3]ಡತ್ತು[3] ಬೀಡಿಗೆ ಬೇಗದಿಂದ ೧೫೦

ಅಡರಲೊಯ್ಯನೆ ಕತ್ತಲೆ ರಾಯರಿರ್ವರ
ಪಡೆ ತಮ್ಮತಮ್ಮ ಪಾಳೆಯಕೆ
ನಡೆದುದು ನಾನಾವಾದ್ಯನಿನಾದದಿಂ
ದೊಡೆಯಲಾಶಾಭಿತ್ತಿಗಳು ೧೫೧

ಸಂತಸದಂತ[4]ವೆ[4]ಯ್ದುತ ಕಂಪಿಲ ಭೂ
ಕಾಂತ ಕುವರನೊಡಗೂಡಿ
ತಾಂ ತಡೆಯದೆ ಬಂದು ಪೊಕ್ಕನು ಬೀಡನ
ನಂತವಿಲಾಸ ಕೈಮಿ[5]ಗೆ[5]ಲು ೧೫೨

ಒಗೆದ ಚಿಂತೆಯು ಹೊಗರಳಿದ ಮೊಗದ ಮೆ
ಯ್ದೆಗೆದ ಮಾತಿನ ಬಲವೆರ[6]ಸು[6]
ದುಗುಡದಿಂ ಬಂದು ಪೊಕ್ಕನು ಬೀಡ[7]ಬಲ್ಲಾಳ[7]
ಬಿಗುವುಗುಂದಿದ ಬಿಂಕ[8]ದೊಳು[8] ೧೫೩

ಅನಬಾರದು ರಾಮನುಱುಬೆಯ ಮುನ್ನೆಯ
ರೇನ ಮಾಡುವರೆಂದೆನುತ
ಭೂನಾಥನೆಣಿಸುತೆದೆಯೊಳು ಪೊಕ್ಕನು ದು
ಮ್ಮಾನದಿಂ ಬಂದು ಬೀಡಿಕೆಯು ೧೫೪

ನರನಲ್ಲದೆ ರಾಮನಾಥನೀ ಕಾಲದ
[9]ನರನೆಯೆಂದವನ[9] ಪೊಗಳುತ
ಭರದಿಂದ ಬಂದು ಪೊಕ್ಕನು ಬೀಡ ಬಲ್ಲಾಳ
ನರಪತಿ ಬಹಳ ಚಿಂತೆಯೊಳು ೧೫೫

---

1 ವನೆ (ಎ ಗ) 2 ನೇಱಿದನಳ್ತಿಯಿಂದ (ಐ) 3 ಡಿ (ಐ) 4 ನೆ (ಅ ಇ ಉ ಎ ಗ) 5 ಗಿ (ಅ ಇ ಉ ಎ ಗ) 6 ಸಿ (ಐ) 7 ನವನಿಪ (ಅ ಇ ಎ ಐ ಗ) 8 ದಿಂದ (ಐ) 9 ನರನಲ್ಲವೆಂದು (ಅ) * (ಉ) ಪ್ರತಿಯಲ್ಲಿಲ್ಲ.

ಸು[1]ರತಾ[1]ಳದಂಡುಂಟೊಳತೋಟಿ ಸಲ್ಲದೆಂ
ದಿರದೆ ಮಾತಾಡಿ ಮಂತ್ರಿಗಳು
ನರಪತಿ[2]ಗಳ ತಿಳಿ[2]ಪಿದರಂದು ನಾನಾ
ಪರಿಯೊಳೆರೆದು ಬುದ್ಧಿಯನು ೧೫೬

ಸು[3]ರುತಾ[3]ಳನ ರಾಜಕಾರ್ಯ ತಪ್ಪದು ನಮ್ಮ
ಧರಣಿಗದೇಕೆ ನಮ್ಮೊಳಗೆ
ಪಿರಿದು ಮಚ್ಚರವೆಂದು ಮಂತ್ರಿಗಳಂದಾ
ನರಪತಿ[4]ಗಳ[4] ತಿಳುಪಿದರು ೧೫೭

*ಒಳತೋಟಿಯಿಂದೊಂದು ಮನೆ ಕೆಡೆ ತುರುಕರು
ತುಳಿವರೀ ನೆಲನನೆಲ್ಲವನು
ಕಲಹ ಬೇಡೆಮ್ಮೊಳಗೆಂದು ಮಂತ್ರಿಗಳು ಮೆ
ಯ್ವಳಿ[5]ಯಲ[5]ವರ ತಿಳುಪಿದರು ೧೫೮

ಸೋಮದಂಡಾಧಿಪ ಬೈ[6]ಚ[6]ದಣಾಯಕ
ರಾಮಹೀಪತಿಗಳಿರ್ವರನು
ನಾಮಭೇದಾದಿಗಳಿಂದ ತಿಳುಪಿ ಸಂ
ಗ್ರಾಮವಾರ್ತೆಯ ಬಿಡಿಸಿದರು ೧೫೯

†ತಿ[7]ಳಿ[7]ಪಿ ನಾನಾತೆಱದಿಂದ ಮಂತ್ರಿಗಳು ಭೂ
ಲಲನೇಶ್ವರರಿರ್ವರನು
ಕಲಹವ ಬಿಡಿಸಿ ಪುಗಿಸಿದರು ತಮ್ತಮ್ಮ
ಪೊಳಲನಂದತಿವೇಗದೊಳು ೧೬೦

ದೇಶಾಧಿಪತಿಗಳೊಡನೆ ಕಂಪಿಲಧರ
ಣೀಶ ವಿಲಾಸಕ್ಕೆಮಿಗಲು
ಆಶಾಪತಿಯ ವೈಭವದೊಳು ನಗರಪ್ರ
ವೇಶವ ಮಾಡಿದನೊಸೆದು ೧೬೧

---

[1] ರಿತ್ರಾ (ಉ) [2] ಗಳತಿಳು (ಇ) ಯನುತಿಳು (ಐ) [3] ರಿತ್ರಾ (ಉ)
[4] ಯನು (ಐ) [5] ಯೊಳ್ (ಇ ಎ ಐ ಗ) [6] ಚಪ್ಪ (ಅ) [7] ಳು (ಇ ಐ)
* (ಉ) ಪ್ರತಿಯಲ್ಲಿಲ್ಲ. † (ಎ) (ಗ) ಗಳಲ್ಲಿಲ್ಲ.

ಅರಮನೆಯನು ಪೊಕ್ಕು ಹರಿಹರದೇವಿಯ
ಚರಣಗಳಿಗೆ ರಾಮನಾಥ
ಶಿರವ ಮಣಿಯಲಾಕೆಗಾಗ[1]ಲಾ[1]ನಂದಾಶ್ರು
ಕರೆ[2]ಗು[2]ಣ್ಮಿ ಪೊಱಿಸೂಸಿ[3]ದುದು[3] ೧೬೨

*ಮೊಲೆವಾಲಧಾರೆಯೆದೆಯೊಳಾನಂದಾಶ್ರು
ಜಲಕದಪುಗಳೊಳಂಗದೊಳು
ನೆಲಸಿರೆ ಪುಳಕೋದ್ಗಮ ತನಯನನಾ
ನಳಿನಾಕ್ಷಿ ತೆಗೆದಪ್ಪಿದಳು ೧೬೩

*ಆಗಲವನ ಪಡೆದಂತಿರವಳಿಗನು
ರಾಗ ಕೈಮೀಱೆ ಮನದೊಳು
ಬೇಗದಿಂ ತೂಪಿಱಿದಪ್ಪಿಕೊಂಡಾನಂದ
ಸಾಗರದೊಳು ಮುಳುಗಿದಳು ೧೬೪

ಆರತಿಯಿಂ ರಕ್ತನೀರಿಂದ ಕುಸುಮೋಪ
ಹಾರದಿಂ [4]ನ್ಮೈ[4]ವಾಳಿಗಳ
[5]ಸೀರೆ[5]ಯಿಂದರುಣಾಕ್ಷತೆಗಳಿಂ ಮಗನನಾ
ನಾರಿ ಸತ್ಕರಿಸಿದ[6]ಳಂದು[6] ೧೬೫

ತಾಯಕಯ್ಯಿಂ ಕಳುಹಿಸಿಕೊಂಡೊಯ್ಯ[7]ನಾ[7]
ರಾಯಕುವರ ಲೀಲೆಮಿಗಿಲು
[8]ಓ[8]ಯಾರದಿಂ ನಿಜರಾಜನಿಳೆಯುವ[9]ನಾ[9]
ಕಾಯಜರೂಪನೆಯ್ದಿದನು ೧೬೬

ನರಪತಿಗಳನು ರಾವುತ ಪಾಯಕರನು
[10]ತರುವ[10]ಮಕ್ಕಳ ಪೆಸರ್ವಿಡಿದು
ಕರೆದುಕರೆದು ಸವಿನುಡಿಯಿಂದ ಕಳುಪಿ ತ
ನ್ನರಮನೆ[11]ಯನು ಪೊಕ್ಕ[11]ನಂದು ೧೬೭

---

1 ಳಾ (ಇ ಐ) 2 ಗ (ಅ) 3 ದವು (ಐ) 4 ವ್ಮೈ (ಎ ಗ) 5 ಸಿರಿ (ಎ ಗ) 6 ಳೊಸೆದು (ಉ) 7 ನೆ (ಎ ಗ) 8 ವಾ (ಅ) ವ್ಮೈ (ಇ ಕ) ವೋ (ಎ ಐ ಗ) 9 ನು (ಅ) ನ (ಇ) 10 ದೊರೆ (ಇ) ಅರ (ಉ ಎ ಗ) ಅರಸು (ಐ) 11 ಗೆಯ್ದಿದ (ಎ ಗ) * (ಉ ಎ ಗ) ಪ್ರತಿಗಳಲ್ಲಿಲ್ಲ.

* ಇದುಪರದಾರಸೋದರರಾಮನಾಥನ
ಪದಕೃತಿಯೊಳಗೆ ಮೂಱನೆಯ
ವಿದಿತಾಶ್ವಾಸದೊಳ್ನಾಲ್ಕನೆಯದು ಸಂಧಿ
ಮೃದುಪದಚಯಸಂಬಂಧಿ ೧೬೮

† ಇದುಯದುಕುಲಾಮಾತ್ಯವಂಶದೊಳಗುದಯಿಸಿದ
ಸದಮಲಯಶೋವಿರಾಜಿತವಿಜಯನೃಪತನುಜ
ವಿದಿತವಿತರಣವಿಜಯವಿಕ್ರಮವಿಭಾಸಿಯೆಂದೆನಿಪ
ಮಾಧವನಾಮನ
ಉದರಾಬ್ಧಿಭವಚಂದ್ರ ನಂಜುಂಡನೊಲಿದೊರೆದ
ಕದನಕಲಿಕಾಲಕಪಿಕೇತುಕಲಿಶುಚಿರಾಮ
ನುದಿತಕೃತಿಬಂಧದೊಳ್ಮೃದುಪದನ್ಯಾಸದೊಳಗಾಶ್ವಾಸ
ಮೂಱನೆಯದು ೧೬೯

---

* (ಅ ಎ ಐ ಕ ಗ) ಪ್ರತಿಗಳಲ್ಲಿ ಇಲ್ಲ † (ಇ ಎ ಗ) ಗಳಲ್ಲಿಲ್ಲ.

# ಚತುರ್ಥಾಶ್ವಾಸ

(ಒಂದನೆಯ ಸಂಧಿ)

## ಹದಿನಾಲ್ಕನೆಯ ಸಂಧಿ

### ವೀರರುದ್ರನೊಡನೆ ಯುದ್ಧ

ಸೂಚನೆ: *ವೀರರುದ್ರನ ಜಯಲಕ್ಷ್ಮಿಯ [1]ಮುಡಿ[1]ಯನಂ
ದಾ ರಾಮ ಪಿಡಿದನಾಜಿಯೊಳು

ರಾಮಗೊಪ್ಪಿಸಿ ರಾಜ್ಯಭಾರವ ಕಂಪಿಲ
ಭೂಮೀಶ್ವರ ಕಾಂತೆಯೊಡನೆ
ಕಾಮಕೇಳೀಶರನಿಧಿಯೊಳಗೋಲಾಡು
ತಾಮೋದವೆತ್ತು ನಲಿದನು ೧

ಹೊತ್ತ ಹೊಱೆಯನಿಳುಪಿದನಂತಾ ಭೂ
ಪೋತ್ತಮನಾ ಕುವರನಿಗೆ
ಇತ್ತು ಸಕಲರಾಜ್ಯಭಾರವ ಚಿಂತೆಯ
ಚಿತ್ತದಿಂದೊತ್ತರಿಸಿದನು ೨

ಯುವರಾಜ ಪಟ್ಟವನಾಂತು ಕೊರಲೊಳುರು
ನವರತ್ನಮ[2]ಯ[2] ಕಂಠಿಕೆಯ
ತವೆ ತಳೆದನು ರಾ[3]ಯ[3]ನಾಣತಿಯಿಂ ಬಂಧು
ನಿವಹ ತಳೆಯಲು ಸಂತಸವ ೩

ವಿ[4]ನ[4]ಯನಾಲಗೆಯನಾಂತುದೊ ವಿತರಣಗುಣ
ತನುವಿಡಿದುದೊ ವೀರಧರ್ಮ
ಮನುಜರೂಪಾಂತುದೊಯೆಂದು ಕೊಂಡಾಡದ
ಜನಗಳಿಲ್ಲಾ ರಾಮನನು ೪

---

[1] ಮುರಿ (ಎ ಗ) ಪಿಡಿ (ಕ) [2] ಣಿ (ಉ) [3] ಮ (ಅ) [4] ನೆ (ಅ ಇ ಎ ಗ)
* (ಅ ಐ) ಗಳಲ್ಲಿಲ್ಲ.

ವಸುದೇವಕೃಷ್ಣನ ದಶರಥರಾಮನ
ಬಿಸಿಗಣ್ಣ ಶಿಖಿವಾಹನನ
ಒಸೆದು ಪೆತ್ತಂತೆ ಪೆತ್ತನು ಕಂಪಭೂಮಿಪ
ನಸಹಾಯಶೂರ ರಾಮನನು ೫

ಇಂಗೋಲ್ವಿಲ್ಲನನಿಂದಿರೆ ಭೀಷ್ಮನ
ಗಂಗೆಯಂಜನೆ ಹನುಮನನು
ಪಿಂಗದೆ ಪಡೆದಂತೆ ಹರಿಹರದೇವಿ[1]ಯು
ಭಂಗ[1]ನಿವನನು ಪಡೆದಳು ೬

ಎಂದು ಕೊಂಡಾಡಿಸಿಕೊಳುತ ಕೋವಿದಜನ
ರಿಂದ ಕುಮಾರಕಂದರ್ಪ
ತಂದೆಯಾಜ್ಞೆಯೊಳು ರಾಜ್ಯವನಾಳುತ ಸುಖ
ದಿಂದಿರುತಿರಲಿತ್ತಲತ್ತ ೭

ಓರುಗಲ್ಲೊಳು [2]ವೀರರುದ್ರ[2]ನ ದಳಪತಿ
ಸೇ[3]ರಿಸಿ[3] ತೆಲುಗಮನ್ನೆಯರ
ವೀರರಾಮನ ಬಿ[4]ರಿ[4]ದಿನ ಕೋಳಾಹಳ
ದಾ[5]ರು[5]ಭಟೆಯನು ಪೇಳಿದನು ೮

ಪೇಳಲವರು ಕೇಳಿ ಮನದೊಳು ಕೋಪವ
ತಾಳಿ ರುದ್ರಾವನೀಶ್ವರನ
ಕೇಳಿಸಬೇಕಿದ ಕೆಡಮೆಟ್ಟಬೇ[6]ಕೆ[6]ಂದು
ಪೇಳಿದರವರು [7]ಸಿ[7]ಂಗಮಗೆ ೯

ಅರಸು ಮಕ್ಕಳು ಪದ್ಮನಾಯಕರೊಡವರೆ
ಭರದಿ ರಾವುತ ಸಂಗಮನು
ನರಪತಿ ಕಾಕತಿರುದ್ರನೋಲಗಕಾ
ದರದೊಳೆಯ್ದಿದನು ಲೀಲೆಯೊಳು ೧೦

ಚರಣಕಮಲಗಳಿಗೆಱಗಿ ಕಾಕತಿವಂಶ
ಶರಧಿಸಂಪೂರ್ಣಚಂ[8]ದ್ರಮಗೆ[8]
ಕರಗಳ ಪಣೆಗಿಕ್ಕಿ ರಾಮನಾಥನ ಬಲು
ಬಿ[9]ರಿ[9]ದ ಬಿನ್ನಪವ ಮಾಡಿದರು ೧೧

---

[1] ಯುತುಂಗೆ (ಕ) [2] ರುದ್ರರಾಯ (ಕ) [3] ರಿ (ಅ ಇ ಎ ಐ) [4] ರು (ಉ) [5] ರ (ಎ ಇ ಗ) [6] ಡೆಂ (ಅ ಇ ಎ ಐ ಗ) [7] ಸಂ (ಎ ಗ) [8] ದ್ರಂಗೆ (ಇ) [9] ರು (ಇ ಉ ಕ).

ನವಲಕ್ಕ ತೆಲುಗರ ಗಂಡ ಭೂಮಿಯ ಚೆಲ್ವ
ಕುವರರ ಗಂಡನೆಂದೆಂಬ
ಬವರದ ಬಲುಬಿ[1]ರಿ[1]ದನು ಪೊಗಳಿಸಿಕೊಂ
ಡವಗಡಿಸಿದನು ಲೋಕ[2]ವನು[2]  ೧೨

ನರಪತಿ ಗಜಪತಿ ಯಶ್ವಪತಿಗಳೆಂ
ಬರಸುಗಳಿಗೆ ಗಂಡನೆನಿಪ
ಬಿ[1]ರಿ[1]ದನ್ನೆಯ್ವತ್ತಾರು ದೇಶದೊಳಗೆ ರಾಮ
ಹರಹಿದನೆಂದು ಪೇಳಿದನು  ೧೩

ಪಡೆವಳನಾಡಿದ ಮಾತನಾಲಿಸಿ ಕಿಡಿ
ಕಿಡಿಯೋಗುತ ವೀರರುದ್ರ
ಕಡೆಯಕಾಲದ ರುದ್ರನಂತೆ ಕಣ್ಗೊಳು ಕಿಚ್ಚ
ಪಡೆದನದೇನ [3]ಪೇಳುವೆನು[3]  ೧೪

ತೆಲುಗರ ಗಂಡ ಮೂವರು ರಾಯರ ಗಂಡ
ಚೆಲುವರ ಗಂಡನೆಂದೆಂಬ
ಬಲುಮೆಯ ಬಿರಿದನಾಲಿಸಿ ಕಾಕತಿರುದ್ರ
ತಳೆದನೆದೆಯೊಳು ಕೋಪವನು  ೧೫

ಗಿರಿದುರ್ಗವೇಱಿದ ಗರ್ವದಿಂದೀ ಬಲು
ಬಿರುದ ಹೊಗಳಿಸಿಕೊಂಬುದನು
ಧುರಧರೆಯೊಳು ಕಾಣಬಹುವೆಂದು ರುದ್ರಭೂ
ವರನಾಂತನುಗ್ರಕೋಪವನು  ೧೬

ಎನಿತುಂಟು ತೆಲುಗಾ[4]ಣ[4]ಯವನಿತಱೊ[5]ಳಾಳ್ವ[5]
ಜನಪತಿಗಳಿಗೆ ರಾಯಸವ
ವಿನಯಪೂರ್ವಕದಿಂದ [6]ಕಳುಪಿದನಿನವಂಶ
ವನಜನಳಿನಸಖ[6]ನೊಸೆದು  ೧೭

ರಾಯಸವನು ಬರೆಯಿಸಿ ಕಳುಪುತ ಪದ್ಮ
ನಾಯಕರಿಗೆ ಬೇಗದೊಳು
ಖೋ ಯೆನುತಿರೆ ವಂದಿಗಳು ದಂಡಯಾತ್ರೆಗಾ
ರಾಯನಿರದೆ ತೆರಳಿದನು  ೧೮

---

[1] ರು (ಇ ಉ ಎ ಕ ಗ)  [2] ದೊಳು (ಐ)  [3] ಬಣ್ಣಿಪೆನು (ಇ ಉ ಎ ಕ ಗ)
[4] ಣೆ (ಖ ಕ)  [5] ಳುಳ್ಳ (ಇ ಐ)  [6] ನಿನವಂಶ ನಳಿನೀವನಜಸಖಾನ್ವಯ (ಐ).

ನವಲಕ್ಷಚಾಪಾಧೀಶನಯೋನಿಜ
ನವನೀಶ್ವರ ವೀರರುದ್ರ
ಜವದಿಂದ ಪೊಯ್ಸಿ ಭೇರಿಯ ಪೊಱ[1]ಮಟ್ಟ[1]ನಾ
ಹವಕನವಂಶ[2]ಸಂಭವ[2]ನು ೧೯

ಪಯಣಪಯಣ[3]ದೊ[3]ಳು ಬಂದು ಕೂಡಿದ ಮ
ನ್ನೆಯರನರಸುಮಕ್ಕಳನು
ಹಯ ಗಜ ಸುಭಟರನೆಣ[4]ಪೊಡೆ[4] ಗಣ ಕರ
ಬಯಕೆಗಳವೆ ಪೇಳ್ವೆನೇನ ೨೦

ಕುರುಪತಿ ಗೋಗ್ರಹಣಕೆ ನಡೆವಂತಾ
ನರಪತಿ ಕಾಕತೀಶ್ವರನು
ಬಿರಿದುಪಾಡಿನ ಜಗಳಕೆ ಕಂಪಭೂಮೀ
ಶ್ವರನ ಮೇ[5]ಲೆತ್ತಿ[5] ನಡೆದನು ೨೧

ಲಕ್ಕ ಕುದುರೆ ನೂಱು ಕರಿಘಟೆಯೊಂಬತ್ತು
ಲಕ್ಕ ಕಾಲಾಳಿನೊಗ್ಗಿನೊಳು
ಹೊಕ್ಕನು ಕ[6]ರ್ನಾ[6]ಟದೇಶವನಿರದೊಕ್ಕ
ಲಿಕ್ಕುತ ರಾಜ್ಯವೆಲ್ಲವನು ೨೨

ಚರನೊರ್ವನೆಯ್ತಂದು ಕಂಪಿಲಧರಣೀ
ಶ್ವರನೋಲಗಶಾಲೆಯನು
ಭರದಿಂದ ಪೊಕ್ಕು ಮೆಯ್ಯಿಕ್ಕಿ ಬಿ[7]ದ್ದೆದ್ದಾ[7]
ತುರದಿಂದ ಬಿನ್ನವಿಸಿದನು ೨೩

ಚಿತ್ತೈಸು ರಾಯ ತೆಲುಗಮನ್ನೆಯರು ಮು[8]ನಿ[8]
ದೆತ್ತಿಬಂದೆಮ್ಮ ರಾಜ್ಯವನು
ತೊತ್ತಳದುಳಿದು ಕೆಡಿಸಿ ಸೂಱೆಗೊಂಡರಿ
ನ್ನೆತ್ತ[9]ಣೋ[9]ಲಗ ನಿಮಗೆಂದ ೨೪

ಶರಧಿ ಗೋದಾವರಿಯೊಳಗುಳ್ಳ ಭೂಮೀ
ಶ್ವರರನೆಲ್ಲರ ಕೂಡಿಕೊಂಡು
ಇರದೆ ಕಾಕತಿರುದ್ರ ಬಂದೆಮ್ಮ [10]ರಾಜ್ಯ[10]ದ
ಸಿರಿಯನಿಱಿದು ಕೆಡಿಸಿದನು ೨೫

---

1 ವಂಟಿ (ಕ) 2 ವಲ್ಲಥ (ಎ ಐ ಗ) 3 ಗತಿಯೊ (ಐ) 4 ಪತಿ (ಅ) 5 ಲಿರದೆ (ಎ ಐ ಗ) 6 ಣ್ಣಾರ್ (ಅ) ನ್ನಾರ್ (ಇ ಉ ಎ ಐ ಗ) 7 ಳ್ದಿಳ್ದಾ (ಉ ಎ ಗ) ಳ್ದಿಳ್ದುದಾ (ಐ) 8 ಳಿ (ಉ) 9 ಳೋ (ಅ) 10 ದೇಶ (ಐ).

ನೆಲದೊಳಗಿಂದುವರೆಗೆ ನಮ್ಮ ರಾಜ್ಯದ
ತಲಹ ಕಂಡರಿರಾಯರಿಲ್ಲ
ಕಲಹಕೆ ನಡೆದು ಬಂದನು ಕಾಕತಿರುದ್ರ
ತೆಲು[1]ಗ[1]ಮನ್ನೆಯರೊಗ್ಗಿನೊಳು ೧೬

ಬೇಡಿದ ಕಪ್ಪವ ತೆತ್ತು ಕೈಮುಗಿದಿರ್ಪ
ಹೇಡಿ ಮನ್ನೆಯರುಗಳೆಲ್ಲ
ಕೂಡಿ ಬಂ[2]ದಿತು[2] ರುದ್ರದೇವನೊಡನೆ ನಮ್ಮ
ನಾಡನಿಱುವ ತವಕದೊಳು ೧೭

[3]ನ[3]ರಿಯು ಜಂಗುಳಿ ಪುಲಿಯೊಡನೆ ಸಿಂಹದ ಮೇ
ಲಿರದೆತ್ತಿ ಬರ್ಪಂತೆ ನಿನಗೆ
ಶಿರವ ಮಣಿದು ಕಪ್ಪವೀವರಸುಗಳೆಮ್ಮ
ಧರೆಗೆ ಬಂದರು ರುದ್ರನೊಡನೆ ೧೮

ಚಲುವರ ಗಂಡ ಮೀ[4]ಶ[4]ರಗಂಡ ನವಲಕ್ಕ
ತೆಲುಗರ ಗಂಡನೆಂದೆಂಬ
ಛಲಬಿರಿದಿಗೆ ಲೋಕದ ಮನ್ನೆಯರೆಲ್ಲ
ಕಲಹಕ್ಕೆ ಕೈದೆತ್ತಿದರು ೧೯

ಬಡಗಣಂ[5]ದ[5]ಬುಧಿ ನಡದು ಬರ್ಪಂತಾ
ಪಡೆ ಭರ[6]ದಿಂ[6] ಬಂದು ನಮ್ಮ
ಪೊಡವಿಯೆಲ್ಲವ ಸೂಱೆಗೊಂಡರೆಂದವನಂದು
ತಡೆಯದೆ ಬಿನ್ನ[7]ವಿ[7]ಸಿದನು ೨೦

*ಆ ಮಾತುಗೇಳಿ ನೀರದನಿನದವ ಕೇಳ್ದ
ಸಾಮಜವೈರಿಯಂದದಲಿ
ಭೂಮಿಪ ಕಿಡಿಕಿಡಿವೋಗುತ ಕೋಪದಿಂ
ರಾಮನ ಮೊಗವ [8]ನೋಡಿದನು[8] ೨೧

†ಚರ ವಚನವನಾಲಿಸಿ ತರಹರದಿಂದ
ದರಹಸಿತಾನನನಾಗಿ
ನರಪತಿ ನುಡಿದನಿಂತೆಂದು ತನ್ನೊತ್ತಿನ
ದೊರೆಗಳ ಮೊಗವ ನಿಟ್ಟಿಸುತ ೨೨

---

1 ಗು (ಐ)	2 ದರು (ಕ)	3 ಕ (ಐ)	4 ಸ (ಇ ಎ ಗ)	5 ದಂ (ಐ)
6 ದಿಂದ (ಇ)	7 ಯಿ (ಐ)	8 ನಿಟ್ಟಿಸುತ (ಐ)	* (ಉ) ಪ್ರತಿಯಲ್ಲಿಲ್ಲ
† (ಐ) ಪ್ರತಿಯಲ್ಲಿಲ್ಲ.

ಬಿರಿದು ಪಾಡಿಗೆ ಬರ್ಪ ರುದ್ರನೊಡನೆ ನನ
[1]ಗೆರೆದು[1] ಕಪ್ಪವ [2]ತೆ[2]ತ್ತು ಬಾಳ್ವ
ನರಪತಿಗಳು ಬಂದರು [3]ಕೂರಸಿಗೆ ಮುದ್ದ[3]
ಪರ ಮುಖದಿಂ [4]ಕೊ[4]ಡಿಪಂತೆ ೩೩

ಮೀಸೆ ಕುಣಿಯೆ ಮೆಯ್ಯ ರೋಮ ಕೌಱಿಡೆ ಕಣ್ಣು
ಸೂಸೆ ಕಿಡಿಯು ಮೊಗ ಹೊಗೆಯೆ
ಘಾಸಿಯಾಗಲು ಗಂಟಿನಿಂ ಪುರ್ಬು ನೃಪತಿ ಕ
ಟ್ವಾಸುರವನು ತಾಳಿದನು ೩೪

ಸಮರಭೇರಿಯ ಪೊಯ್ಸಿ ಸಕಲಬಲವ ಕೂಡಿ
ವಿಮಲವಿಕ್ರಮ ಕಂಪನೃಪತಿ
ಸುಮುಹೂರ್ತದೊಳಿಳಿದನು ಗಿರಿದುರ್ಗವ
ನಮರೇಶ್ವರವಿಭವದೊಳು ೩೫

ವೀರರುದ್ರಾವನೀಶ್ವರ ಕಾ[5]ಳ[5]ಗ ನಿನ
ಗೀ ರಾಮನೊಳಾಗದೆಂದು
[6]ಆ[6]ರುವಂದದೊ[7]ಳೆ[7]ಸೆದುದು ಕಂಪಿಲಜಯ
[8]ಭೇರೀ[8] ಘೋರನಿನಾದ ೩೬

ಗಿರಿಜೆ ಶಿವನ ಸಿರಿ ಹರಿಯು ಬಿಧಿಯನಾ
ಸರ[9]ಸ್ವ[9]ತಿ ಬಂದಮರ್ದಪ್ಪೆ
ಧರೆಯೊಳು ಘೂರ್ಣಿಸಿದತ್ತಾ ಕಂಪಿಲ
ನುರುಭೇರಿಯುಗ್ರನಿನಾದ ೩೭

ಕಹಳಾಶಂಖನಿನಾದದಿಂ ಗಿರಿಕುಂಜ
ಗುಹೆಯೊಳು ಮಾರ್ದನಿ [10]ಮಸಗೆ[10]
ಬಹಳ ಭೇ[11]ರೀನಾದ[11]ದಿಂ ತುಳ್ಕಿ ಬಾಂದೊಱೆ
ವಹಿಲದಿಂ ರಾಯನೆಯ್ದಿದನು ೩೮

---

[1] ಗಿರದೆ (ಎ ಐ ಗ) ಗೆರೆದ (ಇ) [2] ನಿ (ಐ) [3] ಕುರುಳಿಗೆಮುತ್ತ (ಗ) ಕೂರಸಿಗೆಮುದ್ದ (ಇ ಎ ಐ) [4] ದೊ (ಇ ಉ ಎ) [5] ಳೆ (ಇ) [6] ಸಾ (ಉ ಎ ಗ) [7] ಳೊ (ಇ) [8] ಭೇರಿಯ (ಐ) [9] ಸ(ಉ) [10] ಗಯ್ಯೆ (ಎ ಗ) [11] ರಿಯುಭಾರ (ಐ).

ಬಿಗಿದ ಗಂಡುಡಿಗೆ ಕಟ್ಟಿದ್ದ ಬಂಕು ಕಯ್ಯೊಳು
ನೆಗೆದ ಖಂಡೆಯು ಮೆಯ್ಯೊಳಗೆ
ಮಗಮಗಿಸುವ ಸಾಧು ಗಂಧ[1]ವೆಸೆ[1]ಯಲಾ
ಮಗ ರಾಮು ರಣಕನುವಾದ  ೩೯

ಹಾರ ಹೀರಾವಳಿ ಪೊಂದೊಡ[2]ವಿ[2]ಕ್ಕಿದ
ತೋರಮುತ್ತಿನ ಕಂಠಮಾಲೆ
ಚಾರುವಜ್ರದ ಪೆಂಡೆಯು ಕಣ್ಗೆಸೆ[3]ಯೆ[3] ಕು
ಮಾರನಲಂಕರಿಸಿದನು  ೪೦

ಅಡಿಗಳಿಗೆಱಗಿ ಜನನಿಯ ಪರಕೆ[4]ಗಳ[4]
ನಡಿಗಡಿಗಾಂತು [5]ಲೀಲೆಯೊಳು[5]
ನಡೆದನು ನಲವಿಂದ ಸತ್ತಿಗೆ[6]ಗಳ ನಾಲ್ಕ
ಱಡಿಯೊ[6]ಳು ಧುರಧೀರರಾಮ  ೪೧

ತಾರಕನಾಹವಕಾ ಪುರಹರನ ಕು
ಮಾರಕನೆಯ್ದುವಂದದಲಿ
ವೀರರುದ್ರನ ಕಾ[7]ಳ[7]ಗಕೆ ಕಂಪಿಲನ ಕು
ಮಾರನೆಯ್ದಿದನು ಲೀಲೆಯೊಳು  ೪೨

ತಾಯ ಪರಕೆಗಳನಾಂತು ಶಿರವನೊಡ್ಡಿ
ರಾಯಕುಮಾರ ಬೇಗದೊಳು
ನಾಯಕಪಾ[8]ಯಿ[8]ಕರೊಡವರೆ ರಣದ ವಿ
ಡಾಯ ಕಣ್ಗೆಸೆಯಲೆಯ್ದಿದನು  ೪೩

ಗಿರಿದುರ್ಗವಿಳಿಯೆ ಪುರಾಂಗನೆಯರು ಮೇಲೆ
ಪರಸಿ ಸೂಸಿದ ಕುಸುಮಾಳಿ
ಕರಮೆಸೆದುದು ರಾಮನ ಮೇಲೆ ಸುರವೆಣ್ಗ
*ಳರ[9]ಳ[9] ಸರಿಯ ಸುರಿದಂತೆ  ೪೪

---

[1] ಮೆಱೆ (ಇ ಎ ಐ ಗ)  [2] ರಿ (ಅ ಇ ಉ ಐ)  [3] ಯಲಾ (ಎ ಗ)
[4] ಗೊಂಡು (ಉ)  [5] ಬೇಗದೊಳು (ಇ ಎ ಐ)  [6] ನಾಲ್ಕಱನೆಳಲೊ (ಎ ಗ)  [7] ಳೆ (ಇ ಎ ಗ)  [8] ಯ (ಇ ಉ ಎ ಐ ಗ)  [9] ಲ (ಇ)  * (ಉ) ಪ್ರತಿಯಲ್ಲಿಲ್ಲ.

ಆವ ಗಂಡಂದವದಾವ ವಿಡಾಯವ
ದಾವ ರಣಾನಂದವೆಂದು
ಕೋವಿದರೊಲಿದು ಕೊಂಡಾಡುತಿರಲು ರಣ
ಕಾ ವೀರರಾಮನೆಯ್ದಿದನು ೪೫

*[1]ಗೆಲ್ಲವೆಣ್ಣತಿ ಮೋಹಿಯಲ್ಲವೆ ರಾಮನಿ[1]
ಗಲ್ಲದುಳಿದ ವೀರರಿಗೆ
ಕಲ್ಲೆರ್ದೆಯಾಗದಿರ್ಪಳೆ ಪೆಣ್ಗಳಲ್ಲದೆ
ಬಲ್ಲರುಂಟೇ ಮೋಹದಿರವ ೪೬

ಈ ರಾಮಗಲ್ಲದನ್ಯರಿಗೆ [2]ಜಯಾಂಗನೆ[2]
ಕೂರಳು ಕೂರ್ತಳಿಜಸವ
ಸಾರಳವಳು ಕಡುಜಾಣೆಯಲ್ಲವೆಯೆಂದು
ಪೌರರುಲಿಯೆ ಬಾಯ್ಗೂಡಿ ೪೭

ಒಲಿದಿಂದು ವಿಜಯಾಂಗನೆ ರಾಮಗೆ ಪರ
ಲಲನಾಸೋದರನೆಂಬ
[3]ಕು[3]ಲಬಿರಿದನು ಬಿಡಿಸದೆ ಮಾಣದಿರಳೆಂ
ದುಲಿವುತಿರಲು ಪೌರರೊಸೆದು ೪೮

ಒಡನೊಲಿದೆಯ್ತಪ್ಪ ರಾಜಸುತರ ಮೆ
ಯ್ದೊಡವಿನ ಬೆಳಗು ದೆಸೆಗಳ
ಬಿಡದೆ ಚಿತ್ರಿ[4]ಸೆ[4] ಬಿಂಕದಿಂ ನಡೆದನು ರಾಮ
ಕಡುಗಲಿಗಳ ಮೋಹರದೊಳು ೪೯

ಬೀಸುವ ಹದಿನಾಱು ಚವರಗಳಿಂದುಱೆ
ದೇ[5]ಸಿವಡೆ[5]ದು ತಂದೆಯೊಡನೆ
ಓಸರಿಸದೆ ನಡೆದನು ವೀರರುದ್ರನ
ಮಾಸಾಳು ಮಗರಾಮನಂದು ೫೦

---

[1] ಗೆಲ್ಲವೆಣ್ಣಿನತಿಮೋಹಿಯಲ್ಲವೆರಾಮ (ಅ) ಗೆಲ್ಲವೆಣ್ಣಿನರತಿಮೋಹಿಯಲ್ಲವೆ ರಾಮ (ಇ ಎ ಗ) [2] ಸೇರದು ಮತ್ತೆ (ಐ) [3] ಥ (ಐ) [4] ಸಿ (ಅ ಉ ಐ) [5] ಸೆಯೊಡ (ಎ ಕ ಗ) ಸಿಯೊಡೆ (ಉ ಐ) * (ಉ) ಪ್ರತಿಯಲ್ಲಿಲ್ಲ.

ವೀರರಾಮನ ಭುಜದೊಳು ವೀರಲಕ್ಷ್ಮೀ
ನಾರಿಗೆ ವಿಜಯಾಂಗನೆಗೆ
ಹೋರಾಟ ತಪ್ಪದು ಸವತಿ ಮತ್ಸರದಿಂದ
ಬಾರಿಪರಳವೆ ರಾಮನಿಗೆ          ೫೧

ಎಂದಾಣಿಕಾರರಲ್ಲಲ್ಲಿ ನುಡಿವುತಿರ
ಲಂದು ಚೆನ್ನಿಗ ರಾಮನಾಥ
ಮಂದಿ ಕುದುರೆಯಾನೆ ಬರಲೆಡಬಲದೊಳು
ತಂದೆಯೊಡನೆ ತೆರಳಿದನು          ೫೨

ಮೊಗದ ಹೊಗರು ವೀರಲಕ್ಷ್ಮಿಯ ಕೂಟದ
ಬಗೆಯಂತೆ ಸೊಗಯಿಸುತಿರಲು
ಮಗರಾಮ ನಡೆದನೊಯ್ಯನೆ ವೀರರುದ್ರನ
ಜಗಳಕ್ಕೆ ಜಯಲಕ್ಷ್ಮಿಗೂಡಿ          ೫೩

ಕರಕಂಜದೊಳು ವೀರಲಕ್ಷ್ಮಿ ತೋಳೊಳು ಜಯ
ಸಿರಿ ಮೊಗದಾವರೆಯೊಳಗೆ
ಉರುಕಾಂತಿಲಕ್ಷ್ಮಿ ನರ್ತಿಸುತಿರೆ ಕಲಿಕಾಲ
ನರನೆಯ್ದಿದನು ಕಾಳಗಕೆ          ೫೪

ಹರಿಯ ಸಹಾಯದಿಂ ಕುರುಬಲವನು ಕೊಂ[1]ದ[1]
ನರನೆಂಬಪಕೀರ್ತಿಯನು
ಪರಿಹರಿಸಲು ಬಂದ ಪಾರ್ಥನಲ್ಲದೊಡೀ
ಧುರಕಿದಿರಹ [2]ಧೀರ[2]ರುಂಟೆ          ೫೫

ಎನಲಮರರು ನಸುನಗುತಿಂದ್ರನಾ ಪಾರ್ಥ
ನನಿಮಿಷಾಂಗನೆಯೊಡಗೂಡಿ
ಮನುಜ ಲೋಕಕೆ ಗಿರಿಜೆಯ ಕೋಪದಿಂ ಬಂ
ದನುವ[3]ನವರಿಗೆ ಪೇಳಿದನು[3]          ೫೬

ಒರೆಯಲಿಂತೆಂದರವರು ನರನಲ್ಲದ
ನರ[4]ರಿ[4]ಗೀ ದಿವ್ಯಶರೀರ
ದೊ[5]ರೆ[5]ಕೊಂಬುದೆ ನಿನ್ನ ಮಗನಿವನಹುದೆಂದು
ಸುರರಂಬರದೊಳು ನಲಿದರು          ೫೭

---

[1] ಡ (ಐ)   [2] ಭಟ (ಇ ಎ ಐ ಗ)   [3] ಪೇಳಿದನಿಂತೆಂದು (ಎ ಗ)   [4] ನಿ (ಎ ಗ)   [5] ರ (ಐ)

ಅಂಗದ [1]ರತ್ನ[1] ಲಹರಿಯು ಬೆಳಗು ದಿ
ವ್ಯಾಂಗದ ಮೇಲೆ ಪಸರಿಸೆ
ಸಂಗರಕೇಳಿಗೆ ನಡೆದನು ನಲವಿಂದ
ಭಂಗನವಮಲವಿಕ್ರಮನು ೫೮

ಬಿಂಕದಿಂ ಬಿಡದೆತ್ತಿ ಬಂದ ಕಾಕತಿರುದ್ರ
ನಂಕದ ಭಟ ನಿಜಸುತನ
ಸೊಂಕಿನೊಳಗೆ ನಡೆದನು ಕಂಪನೃಪತಿ ನಿ
ರಂಕುಶನಾಗಿ ಸಮರಕೆ ೫೯

ಬಿರುದಿನ ರಾವುತರೆಡಬಲದೊಳು ಬರೆ
ಬಿರುದ[2]ನೊದಱು[2]ವ ಪಾಠಕರು
ಬರೆ ಮುಂದೆ ತಂದೆಯೊಡನೆ ನಡೆದನು ರಾಮ
ಧುರಕೆ ರುದ್ರಾವನೀಶ್ವರನ ೬೦

*ಜಡಿಯೆ ಪೊಡವಿ ಪೋಗೆಯೇಳೆ ಕೂರ್ಮನ ಬೆನ್ನು
ಪೆಡೆಯಾಳೆ ಕೊರಲೊಳಹಿಪನ
ಬಡ[3]ಗ[3] ಮುಂತಾಗಿ ನಡೆದುದೊಯ್ಯನೊಯ್ಯನೆ
ಪಡೆ ಕಂಪಿಲಭೂವರನ ೬೧

ದೆಸೆಯಾನೆಗ[4]ಳು[4]ತಲೆಗೊಡಭಾರದಿಂ ನುಗ್ಗು
ನುಸಿಯಾಗೆ ಪೆಡೆ ಫಣಿಪತಿಯ
ಪಸರಿಸಿ ಪಡೆ ನಡೆದುದು ಕಾಕತಿರುದ್ರ
ನಸಮಮೋಹರಕಿದಿರಾಗಿ ೬೨

ಕತ್ತಿಯ ಬೆಳಗು ಪಗ[5]ಲ ಕಾರು[5]ಮಿಂಚಿನ
ವೊತ್ತದಂತೆಸೆಯೆ ದೆಸೆ[6]ಗಳು[6]
ಒತ್ತಿನಡೆದುದು ಕಂಪಿಲಭೂಪನ ಬಲ
ವುತ್ತರಕಭಿಮುಖವಾಗಿ ೬೩

---

1 ರತ್ನದ (ಅ) 2 ನೋದು (ಉ ಐ) 3 ಗು (ಎ ಗ) 4 ಳ (ಅ ಇ ಎ ಗ)
5 ಲುಕಾರ (ಉ ಐ) 6 ಯೊಳು (ಇ ಐ) ಗಳನು (ಎ ಗ) * (ಉ) ನಲ್ಲಿಲ್ಲ.

ತೆಂಕಣಿಂದಂಬುಧಿ ಬಡಗ ಪರಿವ[1]ವೊಲು[1]
ಶಂಕೆಯ ಪುಟ್ಟಿಸುತಂದು
ಮುಂಕೊಂಡು ಬಲ ನಡೆದುದು ಬಹುಭೇರೀ
ಭಾಂಕಾರರವ ಮೊಳಗುತಿರೆ　　೬೪

ಪಟಹ ಮೃದಂಗ ಡಿಂಡಿಮ ಮ[2]ಡ್ಡು[2] ಜರ್ಝರ
ಪ[3]ಟು[3] ಶಂಖವಾಸ ಭೇರಿಗಳ
ಜಟಿಲಿತ ನಾದವೆಸೆಯೆ ಕಂಪಭೂಪನ
ಕಟಕ ನಡೆದುದೇ[4]ನನೆ[4]ಂಬೆ　　೬೫

ವೀರರುದ್ರನ ಸೇನಾಚಕ್ರ ಗಾವುದ
ದಾರಿಯೊಳಿರೆ ಕಂಪಿಲನು
ಸೇರಿ ಬಿಟ್ಟನು ಭೂರಿಭೇರೀ [5]ಭಾ[5]ಂಕಾರ
ದಾರಭಟೆಯ ವೃತ್ತಿ ಮಸಗೆ　　೬೬

ಅಂದಿನಿರುಳು ವೀರರುದ್ರನೋಲಗಕೆ
ಯ್ತಂದು ತೆಲುಗಮನ್ನೆಯರ
ಮುಂದೆ ನುಡಿದನು ಕಂಪಿಲ [6]ನ[6]ಮಗಿದಿರಾಗಿ
ಬಂದು ಬಿಟ್ಟನು ಬಲಸಹಿತ　　೬೭

ಬಂದುದು ಫಡೆಯ ಪೆರ್ಚುಗೆಯ ಪರಾಕ್ರಮ
ದಿಂದಲ್ಲ ನಿಜನಂದನನ
ಸಂದ ಸಾಹಸತನದಿಂ ಬಂದನೆಂ[7]ಬುದ[7]
ನೆಂದು ನುಡಿದನು ಸಭೆಯೊಳು　　೬೮

ಕದನದೊಳಗೆ ಬಲ್ಲಾಳನ ಜೈಸಿದ
ಮದಮುಖತನದಿಂದ ನಮಗೆ
ಇದಿರಾಗಿ ಬಿಟ್ಟನು ಕಂಪಿಲನೆಂದು ಕೋ
ಪದೊಳಾಡಿದನು ವೀರರುದ್ರ　　೬೯

ರಾಯ ನುಡಿಯ[8]ಲಿಂತು[8] ರಾವುತ ಸಿಂಗಮ
ನಾಯಕನೆದ್ದು ಕೈಮುಗಿದು
ರಾಯ ಬಿನ್ನಪವಿದನೊ[9]ದ[9] ಚಿತ್ತೈಸೆನ್ನ
ಬಾಯಿಬ[10]ಡು[10]ಕನೆನ್ನದಿರು　　೭೦

[1] ಬಲು (ಇ ಪ ಐ ಗ)　[2] ಡ್ಡ (ಎ)　[3] ಟ (ಇ)　[4] ನೆಂ (ಉ ಎ ಗ)
[5] ಧಣಾ (ಅ) ಧಾ (ಎ ಐ ಗ) ಠಂ (ಕ)　[6] ನೆ (ಇ)　[7] ದವ (ಇ ಉ ಎ ಐ ಕ ಗ)　[8] ಲಂದು (ಐ)　[9] ದು (ಉ ಎ ಗ)　[10] ಡ (ಇ ಉ ಎ ಗ).

ರಾಮನುಱುಬೆಯು ನಿಲ್ಲಿಸಿ[1]ದರೆ ದೇವ[1]ಸಂ
ಗ್ರಾಮ[2]ಭೂಮಿಯಲಿ[2] ಕಂಪಿಲನ
ಸಾವುವಿಲ್ಲದೆ ಪಿಡಿವೆನು ವೀಳೆಯವ ಕೊಡು
ಭೂಮಿಪ[3]ಯೆಂದೆನಲವನು[3] ೭೧

[4]ಪಿಡಿ[4] ಕಂಪಿಲದೇವನ ರಾಮನಾಥನ
ಮಿಡುಕಲೀಯದೆ ರಣದೊಳಗೆ
ತಡೆದು ನಿಲಿಸಿ ತೋಱುವೆ[5]ವೆ[5]ಂದರಸುಮಕ್ಕ
ಳೊಡನೆ ನುಡಿದ[6]ರು[6] ಪಂಥವನು ೭೨

ಕೊಳುಗುಳದೊಳು ರಾಮನಾಥನ ಕೋಳಾ
ಹಳವ ನಿಲಿಸಿ ತೋಱುವೆವು
ತಳುವೇ[7]ಕೆ[7] ರಾಯ [8]ಚಿತ್ತೈ[8]ಸು ವೀಳೆಯವನೆಂ
ದುಲಿದರು [9]ರಜಪೂತು[9]ಗಳು ೭೩

ಅರಸುಮಕ್ಕಳು ನಿಲಿಸಲಿ ರಾಮನುಱುಬೆಯ
ದೊರೆಯ ಹಿಡಿದು ನಿನಗಾನು
ಭರದಿಂದ ತಂದೊಪ್ಪಿಸುವೆನೆಂದು ಸಿಂಗಮ
ನರಪತಿಯೊಡನೆ ನುಡಿದನು ೭೪

ಸಿಂಗಮನಾಯಕನಾಡಿದ ಮಾತು ಮ
ನಂಗೊಳೆ ಕಾಕತೀಶ್ವರನು
ಮಂಗಲಮಯ ರತ್ನ ದಿವ್ಯಭೂ[10]ಷಾಳಿಯ[10]
ನಂಗಚಿತ್ತವನಿತ್ತನವ[11]ಗೆ[11] ೭೫

ಇದಿರಾಗಲಿ ರಾಜಪುತ್ರರು ರಾಮಗೆ
ಕದನದೊಳಗೆ ಕಂಪಿಲನ
ಒದ[12]ವಿ[12] ಪಿಡಿಯಲಿ ಸಿಂಗಮನೆಂದು ನೃಪನನು
ವದಿಸಿದನಾ ಸಭೆಯೊಳಗೆ ೭೬

---

[1] ದೊಡೆದೇವ (ಇ ಎ ಗ) ದರ ರಾಯ (ಐ) [2] ದೊಳಗೆ (ಉ ಎ ಐ ಗ) [3] ತನಗೆಂದೆನಲು (ಎ ಗ) [4] ಪಿಡಿವೆ (ಎ ಗ) [5] ನೆಂ (ಅ ಉ ಎ ಗ) [6] ನು (ಉ) [7] ತಕೆ (ಎ ಗ) [8] ಕೊಡಿ (ಉ) [9] ರಾಜಪೂತು (ಉ) ರಾಜಪುತ್ರ (ಎ ಗ) ರಾಯಪೂತು (ಐ) [10] ಷಣಗಳ (ಎ ಗ) ಷಣವನು (ಕ) [11] ಗೆ (ಐ) [12] ಗಿ (ಉ).

ಜೋಡು ಸವಗ ಠೌಳಿ ಕತ್ತಿ ಖಂಡೆಯ ಲೌಡಿ
ಖೇಡೆಯ ಚೂಡಾಯತಗಳ
ಪಾಡು[1]ಮಾ[1]ಡುವ ಸಂಭ್ರಮವಂ[2]ದೆ[2]ರಡುಂ
ಬೀಡಿನೊಳಗೆ ಮುಸಗಿದುದು ೭೭

ಪಿಡಿವೆನವನ ನಾನು ತಡವೆನವನ ನಾನು
ತುಡುಕುವೆನವನ ಮೇಲಾನು
ನುಡಿಯಿದ ಬರೆಯಿಸೆಂದೆಂಬ ಭಟರ ಮಾತು
ಬಿಡದೆಸೆದವು ಬೀಡುಗಳೊಳು ೭೮

ತೆಗೆ ಹು[3]ಯ್ಯಲ[3]ನೀನು ನಿಲಿಸಿಕೊಂಬೆನು ಮೆಯ್
ದೆಗೆಯದೆ ತಡೆ ನೀನು ನಾನು
ಜಗಳವ [4]ಹಾಕುವೆನೆಂ[4]ಬ ಭಟರ ಮಾ
ತೊಗೆದವು ಬೀಡೆರಡಱೊಳು ೭೯

ವೀರಸನ್ನ್ಯಾಸದೊಳಿರ್ಪ ವಿಜಯ ಹಯ
ವಾರಣತತಿಯನರ್ಚಿಸುವ
ವೀರರಿಂದೆರಡುಂ ಬೀಡು ಕಣ್ಗೆಸೆದವು
ನಾರದ ನಲಿಯೆ ನಭದೊಳು ೮೦

ತಂದ ವಸ್ತ್ರಾಭರಣಗಳ ಭಟರಿಗೆ ಕೈ
ಗುಂದದೆ ಕೊಡುವ ಮನ್ನಿಸುವ
ದಂದುಗದಿಂದಂದಿನಿರುಳು ಪೋದುದು ರಣಾ
ನಂದದಿಂದುಭಯ ರಾಯರಿಗೆ ೮೧

ಜಗಳವಾತಿಂದ ಜಯದ ಜಾಣ್ನುಡಿಯಿಂದ
ನಗೆಯಿಂದ ನಲಿದಾಟದಿಂದ
ಮಿಗೆ ಕ[5]ಳೆ[5]ದರು ವೀರಭಟರು ರಾತ್ರಿಯನಂದು
ಪಗಲಾಣ್ಮ ಮೊಗದೋಱಿದನು ೮೨

ಕಲಹದೊಳಗೆ ರಾಮ ವೀರರುದ್ರನ ಬಹು
ಬಲವ ಕೊಲ್ವುದ ನೋಡಲೆಂದು
ನಲವಿಂದ ಬಂದನೆಂಬಂತೆ ನಳಿನಮಿತ್ರ
ತಲೆದೋಱಿದನು ತವಕದೊಳು ೮೩

---

1 ಗಳ್ಮ (ಉ) 2 ತೆ (ಐ) 3 ಯ್ಲ (ಇ) 4 ಹೊಕ್ಕುಹೊಯ್ವೆ (ಎ ಗ) ಹಾಕುವೆವೆಂ (ಇ) 5 ಳಿ (ಇ ಐ).

ದೇ[1]ವತಾ[1]ರ್ಚನೆಯನೊ[2]ಸೆ[2]ದು ಮಾಡಿ ಶಸ್ತ್ರಾಧಿ
ದೇವಿಯ ಬಲಗೊಂಡವನಿಯ
ದೇವರಾಶೀರ್ವಚನವನಾಲಿಸಿ ರುದ್ರ
ದೇವನುತ್ತಮಲಗ್ನದೊಳು ೮೪

ಮೊಳಗಿನ ತಡೆ ಬಿಟ್ಟಂತೆ ನಾನಾವಾದ್ಯ
ಮೊಳಗೆ ಮೋಹರದೊಡಗೂಡಿ
ಬಿಳಿಯಾನೆಯ ಮೇಲೆ ನೆಗೆದ ಬೆಳ್ಗೊಡೆಯು ತ
[3]ಣ್ಣಿ[3]ಳಲೊಳೆಯ್ದಿದನು [4]ಸಂಗರಕೆ[4] ೮೫

ಭೂರಿಭೇರಿಯ ಘೋರಭಾಂಕಾರರವ ಭೂ
ಭಾರಸಂಹಾರ ಸಮಯದ
ಭೈರವ ಢಕ್ಕಾರಭಟೆಯಂತಿರಲಾ
ವೀರನೆಯ್ದಿದ ರಣಾವನಿಯ ೮೬

ಸಿಂಗಮನಾಯಕ ಪೇಳಿದ ತಾಣತಾ
ಣಂಗಳೊಳಗೆ ಪೌಜುಗಳು
[5]ಸಂಗ[5]ತಿವಡೆದೆಸೆದವು ಭಟ ತುರಗ ಮ
ತಂಗ ಕೋಳಾಹಳ ಮಸಗೆ ೮೭

ಆಳೊಂದು ಲಕ್ಕ ಕುದುರೆ ಹತ್ತು ಸಾವಿರ
ಕಾಳಗದಾನೆಯಿನ್ನೂಱು
ಲೀಲೆ ಕೈಮಿಗಲೆಸೆ[6]ದುದು[6] ಸಿಂಗಮನರ
ಪಾಲನೊಡ್ಡಿದ ಪೌಜಿನೊ[7]ಳು[7] ೮೮

ಮತ್ತಮಾತಂಗಜ[8]ಯಿ[8]ನ್ನೂಱು ಜಾತ್ಯಶ್ವ
ಹತ್ತು ಸಾವಿರ[9]ವೊಂ[9]ದು ಲಕ್ಕ
ಪತ್ತಿ ಮೆಱೆಯೆ ರಾಜಪುತ್ರರ ಪೌಜೆಸೆ
ದತ್ತದನೇನ ಬಣ್ಣಿಪೆನು ೮೯

ಎರಡು ಲಕ್ಕಾಳು ಮೂವತ್ತುಸಾವಿರ ಜಾತಿ
ತುರಗ[10]ಯಿ[10]ನ್ನೂಱಾನೆ[11]ಯಿಂದ[11]
ಕರಮೆಸೆದುದು [12]ಜ[12]ಡ್ಡಿಗಳ ಮೋಹರವಾ
ಧುರಧರೆಯೊಳಗೆ ಬೊಬ್ಬಿಡುತ ೯೦

---

[1] ವಾ (ಇ ಉ ಎ ಐ ಕ ಗ) [2] ಲಿ (ಐ) [3] ಣ್ಣೆ (ಇ) [4] ಕಾಳಗಕೆ (ಐ) [5] ಸಿಂಗರ (ಐ) [6] ದವು (ಎ ಗ) [7] ಳಗೆ (ಉ) [8] ವಿ (ಎ ಗ). [9] ವೊಂ (ಉ ಎ ಕ ಗ) [10] ವಿ (ಇ ಎ ಗ) [11] ವೆರಸಿ (ಉ) [12] ರ (ಇ ಉ ಎ ಐ ಕ ಗ).

ಸೊಕ್ಕಾನೆಯಿನ್ನೂ[1]ಱು[1]ಪ್ಪತ್ತು ಸಾವಿರ
ಪಕ್ಕರಿಕೆಯು ಸಾಂಬ್ರಾಣಿ
ಲಕ್ಕವೆರಡು ಕಾಲಾ[2]ಳೆಸೆದಿ[2]ರೆ ಪೌ
ಜಿಕ್ಕಿತು ಪದ್ಮನಾಯುಕ[3]ರ[3] ೬೧

ಮೂವತ್ತುಸಾವಿರ ಕುದರೆ ನಾನೂಱಾನೆ
ಸೇವಕತತಿ ಮೂಱು ಲಕ್ಕ
ತೀವಿರೆ ರಾಯುವೋಹರವದು ಸಂಗ್ರಾ
[4]ಮಾವನಿ[4]ಯೊಳಗೆ ಮೆಱೆ[5]ದುದು[5] ೬೨

ನೆರೆದ ನೋಟಕರ ಪೇಳ್ವಡೆ ಸುರಗುರು ಬಂದು
ಕರಣಿಕನಾಗಿ [6]ವಹಿಯೊಳು[6]
ಬರೆವಡಶಕ್ಯವೆಂದೆನ[7]ಲಂತುಟಿಂತುಂಟೆಂ[7]
ದೊರೆವೆ[8]ನೆಂ[8]ತದಱ ಲೆಕ್ಕವನು ೬೩

ಕಳಸಜನಂದು ದುಸ್ಸಳೆಯ ಗಂಡನ ಕಾಯ
ಲೆಳಸಿ ಕರ್ಣಾರಿಗೆಸಗಿದ
ಬಲುಪೌಜುಗಳಂತೆಸೆದವು ಕಾಕತಿ
ಕುಲತಿಲಕನ ಪೌಜುಗಳು ೬೪

ಇಂತು ಮೋಹರವ ಬಲಿದು ರಿಪುಕುಲಕಾ
ಲಾಂತಕನಾ ಸಿಂಗಮನು
ಪಂಥದ ನುಡಿಯೆದೆಯಾನು ಕಲಕುತಿರೆ ಮು
ಯ್ಯಾಂತು ನಿಂದನು ಪರಬಲಕೆ ೬೫

ಇತ್ತ ವಿಜಯದುಂದುಭಿರವ ದೆಸೆಗಳ
ನೊತ್ತರಿಸಲು ಕಂಪನೃಪತಿ
ಎತ್ತಿನಡೆದು ಬಂದನು ಸಂಗರಭೂಮಿ
ಗುತ್ತಮಾಶ್ವದ ಮೇಲಂದು ೬೬

ಎರಡು ಲಕ್ಕಾಳು ಹನ್ನೆರಡು ಸಾವಿರ ಜಾತಿ
ತುರಗ ನಾನೂಱಾನೆ[9]ಯೆಸೆಯೆ[9]
ಭರದಿಂದ ಬಂದು ಪೊಕ್ಕನು ರಣಭೂಮಿಯ
ಧುರಧೀರ ಕಂಪಿಲನೃಪತಿ ೬೭

---

[1] ಱು (ಎ ಕ) [2] ಳು ಸೇರಿ (ಇ ಎ ಗ) [3] ರು (ಅ ಇ ಐ) [4] ಮಭೂಮಿ (ಅ)
[5] ದಿಹಃದು (ಅ) ದವು (ಉ) [6] ಮಹಿಯೊಳಗೆ (ಅ) [7] ಲದನೆಂತುಟೆಂ (ಐ)
[8] ನಿನ್ನೆಂ (ಅ) [9] ವೆರಸು (ಉ) ವೆರಸಿ (ಐ).

ಬಂದು ಕಂಡನು ಕಾಕತಿರುದ್ರದೇವನ
ಸಂದ ಸೇನಾಶರ[1]ನಿಧಿಯ[1]
ಕಂದಿತು ಮೊಗ ಮನಗುಂದಿತು ಬಹುಚಿಂತೆ
ಬಂದಿತು [2]ಕಂಪನೃಪನಿಗೆ[2] ೯೮

ಕಂಡನು ತಂದೆಯು ಕದ[3]ಡ[3]ನು ಕಲಿಕಾಲ
ಗಾಂಡೀವಿ ವೈರಿಮೋಹರದ-
ಗಂಡುಗಲಿಗಳ ಗಂಡನು ರಿಪುಕುವಲಯ
[4]ಚಂಡಕಿರಣ ವೀರರಾಮ[4] ೯೯

ನಿಂದು ಕೈಮುಗಿದು ಬಿನ್ನಹ ರಾಯ ಚಿತ್ತೈ
ಸೆಂದು ಚನ್ನಿಗ ರಾಮನಾಥ
ಕುಂದಕುಟ್ಮಳದಂತಕಾಂತಿ ಪಸರಿಸಲಿಂ
ತೆಂದು ನುಡಿದ ತಂದೆಯೊಡನೆ ೧೦೦

ದೇವ ಚಿತ್ತೈಸು ಬಿನ್ನಪವನಿದನು ರುದ್ರ
ದೇವನ ಬಲವನೆಲ್ಲವನು
ಜಾವದೊಳಗೆ ಜವನಗರಿಗೆ ಕಳುಹುವೆ
ನಾವಗಹನವಿದು ನನಗೆ ೧೦೧

* ಅಡವಿಯೆನಿತು ಕಿಡಿಯೆನಿತಾನೆಯ ಮಂ
ಗಡವೆನಿತಾ ಸಿಂಗವೆನಿತು
ಕಡಲೆನಿತಾ ವಡಬಾನಲನೆನಿತದ
ಪೊಡವಿಪ ನೀನೆ ಚಿತ್ತೈಸು ೧೦೨

ಕುರುಬಲವನು ಗೋಗ್ರಹಣದೊಳಗೆ [5]ಪಾರ್ಥ[5]
ನಿರದೆ [6]ಕಲಕಿ[6]ದಂತಿದನು
ಅರೆಘಳಿಗೆಯೊಳಂತಕಪುರಿಗೆಯ್ದಿಪೆ
ನರಪತಿ ನಿಂದು ಚಿತ್ತೈಸು ೧೦೩

---

[1] ಧಿಯನು (ಅ) ಸನ್ನಿಧಿಯ (ಐ) [2] ಕಂಪನೃಪತಿಗೆ (ಇ ಎ ಐ ಗ) ಕಂಪಿಲ ನೃಪಗೆ (ಕ) [3] ಲ (ಇ ಉ ಎ ಐ ಕ ಗ) [4] ಮಾರ್ತಾಂಡಕಿರಣರತಿರಾಮ (ಎ ಗ) [5] ನರ (ಐ) [6] ಕಲಂಕಿ (ಇ) * (ಉ ಐ) ಗಳಲ್ಲಿಲ್ಲ.

ಏಕಾಂಗದೊಳು ಭೀಮ ಕೌರವನೃಪತಿಯ
ನೇಕಬಲವ ಕೊಂದಂತೆ
ಜೋಕೆಗೆಡಿಸಿ ಕೊಂದು ತೋಱುವೆನಿದ[1]ನಿನ
ಗೇಕಾನಿರಲೀ[1]ಚಿಂತೆ ೧೦೪

ಹದಿನಾಲ್ಕುವರುಷದ ಹರೆಯದೊಳಾ ರಾಮ
ಹದಿನಾಲ್ಕುಕೋಟಿ ದಾನವರ
ಸದೆದಂತೆ ಸದೆವೆನೀ ರುದ್ರನ ಬಲವನು
ಕದ[2]ಡೇ[2]ಕೆ ನಿಮಗೆ ಚಿತ್ತದೊಳು ೧೦೫

ಬಹಳ ಬಲವಿದೆಂದು ಮನದೊಳು ಚಿಂತೆಯ
ವಹಿಸಬೇಡಯ್ಯ ನಾನಿರಲು
ವಿಹಗಕೋಟಿಗಳಿಗೊಂದೇ ಸಾಳ್ವ ಸಾಲದೆ
ಮಹಿಪ ಕೇಳಿದು ನ[3]ನಗರಿದೆ[3] ೧೦೬

*ಹದ್ದುಕಾಗೆಗಳಿಗೀ ಬಲವನೆಲ್ಲವ [4]ರಾಯ[4]
ಬಿರ್ದಿಕ್ಕುವೆನು ಮುಂಡಗಳನು
ಎದ್ದಾಡಿಸುವೆನು ರಣದೊಳೀ ರುದ್ರನ
ಗೆದ್ದು ತೋಱುವೆನು ಚಿತ್ತೈಸು ೧೦೭

ಕಾಯಾಂತರ[5]ದೊಳು[5] ಪೊಕ್ಕು ನುಡಿ[6]ವ[6] ಸುರ
ರಾಯ[7]ತನಯ[7]ನೆಂಬುದನು
ರಾಯ[8]ನಱಿಯದೆ[8] ನಿಜಾತ್ಮಜನೆಂಬಭಿ
ಪ್ರಾಯದಿಂ ನಲಿದನೆದೆಯೊಳು ೧೦೮

ಸು[9]ರುತಾಳ[9]ನ ಕಾರ್ಯಮುಂಟು ಬಲ್ಲಾಳನ
[10]ಬ್ಬ[10]ರವ ನಿಲ್ಲಿಸಿ ತಿರುಗೆಂದು
ನಿರವಿಸಿದುದಱಿಂದ ಬಿಟ್ಟೆನಲ್ಲದೊಡವ
ತರಹರಿ[11]ಪ[11]ನೆ ಪಾಳೆಯದೊಳು ೧೦೯

---

[1] ನೀಗಲೇಕಾನಿರಲೀ (ಅ) ನಿನಗೇಕಾನಿರಲಿನ್ನು (ಎ ಗ) [2] ಲೇ (ಇ ಉ ಎ ಐ ಗ) [3] ಮಗಿದರೆ (ಎ ಐ ಗ) [4] ನಾನು (ಎ ಗ) [5] ಪೊಳು (ಅ) [6] ದ (ಉ) [7] ತನುಜ (ಎ ಐ) [8] ನೆಂಬವನು (ಐ) [9] ರತಾಳ (ಇ) ರತ್ರಾಣ (ಉ) ರಿತಾಳ (ಐ) [10] ಬ (ಎ ಐ ಗ) [11] ಸುವ (ಐ) * (ಉ) ಪ್ರತಿಯಲ್ಲಿಲ್ಲ.

ಏಕಶಿಲಾಪುರ ಪರಿಯಂತರ[1]ವಾ[1]
ನೀ ಕಾಕತಿರುದ್ರನನು
ಜೋಕೆಗೆಡಿಸಿ ಕೊಲದಿರ್ದೆನಾದೊಡೆ ಧರ
ಣೀಕಾಂತ ನಿನಗೆ ಪುಟ್ಟಿದೆನೆ ೧೧೦

[2]ತೀರ ಮು[2]ಱಿಯಲಿಱಿವೆನು ವೀರರುದ್ರನ
ಭೂರಿಬಲವನೋಡಿಸುವೆನು
ಧಾರುಣೀಶ್ವರ ನಿಂದು ನೋಡುತಿರೆಂದು ಕು
ಮಾರ ನುಡಿದ ತಂದೆಯೊಡನೆ ೧೧೧

ಆ ನುಡಿಗೇಳುತಾನಂದಾಶ್ರು ಪೊಱಸೂಸ
ಲಾ ನರಪತಿ ಮನದೊಳಗೆ
ದೀನತೆಯನು ಬಿಟ್ಟು ಧೀರತೆಯನು [3]ತಳೆ
ದೇನೆಂಬೆ ನಲವೇಱಿದನು[3] ೧೧೨

$ ಬೀತುದು ಭೀತಿ ಮನದೊಳು ಶೌರ್ಯೋದ್ರೇಕ
ಕಾತುದು ಕಂಪನೃಪತಿಗೆ
ಸೋತುದಿನ್ನೇನರಿಬಲವೆನುತವನಾತ್ಮ
ಜಾತನ ತಗೆದಪ್ಪಿದನು ೧೧೩

$ ತುರಗ ಸಿಂಗಾಡಿ ಖಂಡೆಯ ಬಲ್ಲೆಯಗಳು ಬಂ
ಧಿರವ ನೆನೆದು ರಾಮೇಶ್ವರನ
ವರಕುವರನ ನಿಟ್ಟಿಸಿ ನಿಶ್ಚೈಸಿದನಾ
ಧರಣಿಪ ಧುರವಿಜಯವನು ೧೧೪

$ ಮೂವತ್ತು ಸಾವಿರ ಮಂದಿ ಕುದುರೆ ಮೂಱು
ಸಾವಿರ ಕರಿಯಿನ್ನೂಱು
ತೀವಿರಲೆಸೆದುದು ರಾಮನ ಪೌಜು ರ
ಣಾವನಿಯೊಳು ರಾಗದಿಂದ ೧೧೫

$ ಮುಸಲ ಮುಸುಂಡಿ ಮುದ್ಗರ ಕಂಪಣ ಕೂ
ರಸಿ ತೋಮರ ಶಾಙ್ರ್ಗ ಕೊಂತ
ಮಸೆದಂಬಿನ ಬತ್ತಳಿಕೆ ತರಕಸವಾಂ
ತೆಸೆದರೊಳಿಗದ ರಾವುತರು ೧೧೬

---

[1] ವುನಾ (ಇ) ನಾ (ಉ ಎ ಐ ಕ ಗ) [2] ತಿರಮು (ಅ ಐ) ತಿರಮೂ (ಉ) [3] ತಾಳ್ದು ಘನಹರುಷವತಾಳ್ದ ನೃಪತಿ (ಉ) $ (ಉ) ಪ್ರತಿಯಲ್ಲಿಲ್ಲ.

ಹೊಳೆವ ನಾನಾಯುಧವಿಡಿದೆಡಬಲದೊಳು
ಬಳಸಿದ್ದೂಳಿಗದ ರಾವುತರ
ಬಳಗದ ನಡುವೆ [1]ಬಲೆ[1]ಯ ಹುಲಿಯಂತೆ ಕಂ
ಗೊಳಿಸಿದನಾ ವೀರರಾಮ ೧೧೭

ಪಿಡಿ[2]ದ[2] ಕುದುರೆಯನೇಱುವ [3]ಪಾ[3]ಡಿ ರಾವುತ
ರೆಡಬಲದೊಳಗೈನೂಱು
ಬಿಡದೆ ಮೆಱೆಯೆ ಕಾಕತಿರುದ್ರದೇವನ
ಪಡೆಗಿದಿರಾಗಿ ಮಲೆತನು ೧೧೮

ಎರಡು ಸಾವಿರ ತೇಜಿ ನಾಲ್ವತ್ತು ಸಾವಿರ
ವರವೀರಭಟರೈ[4]ವತ್ತು[4]
ಕರಿವೆರಸಿದಿರಾದನು ಸಾಯಿದೇವನು
ಭರದಿ [5]ಱ[5]ಡ್ಡಿಗಳ ಮೋಹರಕೆ ೧೧೯

ಚರರು ಮೂವತ್ತು ಸಾವಿರ ಕರಿಯೈವತ್ತು
ತುರಗವೆರಡು ಸಾವಿರದೊಳು
ಇರದಿದಿರಾದನು ಪದ್ಮನಾಯಕರಿಗೆ
ಧುರಧೀರ ಕಾಟಣ್ಣನೊಸೆದು ೧೨೦

ನಾಲ್ವತ್ತು ಕರಿ ಹರಿಯೆರಡು ಸಾವಿರ ಮಂದಿ
ನಾಲ್ವತ್ತು ಸಾವಿರ ಸಹಿತ
ಮೇಲ್ವಾಯ್ದು ಪಿಡಿವೆ[6]ನೆನುತ ಸಿಂಗಮನ ಪೌಜು[6]
ಸಾ[7]ಲ್ವಿ[7]ಡಿದನು ಭೈರವನು ೧೨೧

ಪದಚರರೈವತ್ತು ಸಾವಿರ ಮದಗಜ
ವದು ನಾಲ್ವತ್ತು ಲೆಕ್ಕಿಸಲು
ಕುದುರೆಯೆರಡು ಸಾವಿರದೊಳು ಸಂಗಮದೇವ
ನಿದಿರಾದನರಸುಮಕ್ಕಳಿಗೆ ೧೨೨

ಹತ್ತು ಸಾವಿರ ಮಂದಿ ಸಾವಿರ ಕುದುರೆಯಿ
ಪ್ಪತ್ತಾನೆವೆರಸು ಪೌಜುಗಳ
ಸುತ್ತಬಳಸಿ ನೋಡುತೆಚ್ಚಱಿಕೆಯ ಪೇ
ಳುತ್ತಿರೆ ಕಂಪಿಲನೃಪತಿ ೧೨೩

---

[1] ಬಲ್ಲೆ (ಉ ಐ) [2] ದರು (ಅ) [3] ಪ (ಉ) [4] ನೂಱು (ಐ) [5] ರ (ಇ ಉ ಎ ಐ ಕ ಗ) [6] ನೆಂಬಾಸಿಂಗಮಗೆಪೌಜ (ಐ) ಸಿಂಗಮನನೆನುತಪೌಜ (ಉ ಎ ಗ) [7] ಲ (ಅ) ಪೆ (ಇ).

ವೀರರಾಮನ ರಣಕೇಳಿಯ ವೀರಾವ
ತಾರವ ಕಂಡು ನಭದೊಳು
ನಾರದ ನಲಿದನಮರರು ಕಯ್ಯೆತ್ತಿ ಕೈ
ವಾರಿಸಿದರು ಬಾಯ್ದೂಡಿ ೧೨೪

ಮಚ್ಚರವನು ಬಿಟ್ಟು ತೆಲುಗ ಮನ್ನೆಯರೆಲ್ಲ
ಮಚ್ಚಿದರಾ ರುದ್ರದೇವ
ಅಚ್ಚರಿವಟ್ಟನಾ ರಾಮನ ಶೌರ್ಯದ
ಹೆಚ್ಚುಗೆಯನು ನಡೆ ನೋಡಿ ೧೨೫

* ಗುಣಕೆ ಹುರುಡೆ ಶಿವಶಿವ ರಾಮನಾಥನೀ
ಗಣನೆಗೆ ನಿಲುಕದ ಬಲಕೆ
ಎಣಿಸದೊರ್ವನೆ ಮಾರ್ಮಲೆತು ನಿಂದನು ಫಲು
ಗುಣನಲ್ಲದಿವಗೆ ಪಾಸಟಿಯೆ ೧೨೬

* ಹೆತ್ತುದಿಲ್ಲವೆ ಕಂಪಿಲ[1]ನೀ ಧೀರೋ
ದಾತ್ತನಾಯಕನನಿವನನು[1]
ಹೊತ್ತು ತಂದೀ ಸೇನಾಶರನಿಧಿಯೊಳ
ಗೆತ್ತಿ ಹಾಯ್ಕಿದನು ಮಗನನು ೧೨೭

ಎಂದು ಮ[2]ಚ್ಚ[2]ರವನುಳಿದು ವೈರಿಭೂಮಿಪ
ರಂದು ಕುಮಾರರಾಮನನು
ಒಂದೆ ಕೊರಳೊಳು ಕೊಂಡಾಡಿ ಮನದೊಳುಜು
ನೊಂದರದೇನ ಪೇಳುವೆನು ೧೨೮

* [3]ಬಿ[3]ಳುಗುದುರೆಗನ ಮಗನಿಗೆಂದು ಬಿಲ್ಲೋಜ
ಮುಳಿದೆಸಗಿದ ಪೌಜಿನಂತೆ
ಬಲವಿದೆ ರಾಮಗೆ ಗೆಲವಿನ್ನೆಂತೋ ಎಂ
ದುಲಿದರಂಬರದೊಳಮರರು ೧೨೯

---

[1] ರಾಯನೀ ಧೀರೋತ್ತಮನಾಯಕನಿವನ (ಇ ಎ ಗ) [2] ತ್ಸ (ಉ)
[3] ಬೆ (ಎ ಐ ಗ) * (ಉ) ಪ್ರತಿಯಲ್ಲಿಲ್ಲ.

* ತೆಲುಗವೋಹರವಿದೆ ಮೇರೆಯ ಮೀಱಿದ
ಜಲನಿಧಿಯಂತೆ ಕಂಪಿಲನ
ಬಲವಿದೆ ಬೆಂಚೆಯವೊಲು ರಾಮಗಿನ್ನೆಂತೊ
ಗೆಲವೆಂದೆಣಿಸಿದರಮರರು　　　೧೩೦

$ ಬಲ್ಲಾಳನ ಬಲದಂತಿದು ಸರಿಮಿಗಿ
ಲಲ್ಲ ನೂರ್ಮಡಿ ರಾಮಗೆಂತೊ
ಗೆಲ್ಲವೆಂದಾ ದೇವವಲ್ಲಭನಂಬರ
ದಲ್ಲಿ ಮಮ್ಮಲ ಮಱುಗಿದನು　　　೧೩೧

$ ತೆಲುಗಭಟ್ಟರು ಕವಿಗಳು ಭರದಿಂ ಪರ
ಬಲದಿಂದ ಬಂದು ರಾಮನನು
ನಲವಿಂದ ಕೊಂಡಾಡಿದರದನೊರೆವೆನಾ
ನೊಲಿದುಕೇಳುವುದು ಕೋವಿದರು　　　೧೩೨

ಸ್ವಸ್ತಿ ಪ್ರಶಸ್ತಿ ಸಮಸ್ತಭುವನಾಧೀಶ್ವರ ರಾಜಾಧಿರಾಜ, ರಾಜಪರ ಮೇಶ್ವರ ಕ್ಷುದ್ರಶತ್ರುಗ್ರಹೋಚ್ಚಾಟನಮಹಾಮಾಂತ್ರಿಕ, ವೈರಿಫಣೀಂದ್ರ ವೈನತೇಯ, ವಿಕಟರಿಪುಗಜಘಟಾ ವಿಘಟನಪಟುತರಪಂಚಾಸ್ಯ, ಸಾಮಂತ ಮೃಗಸಮೂಹಶಾರ್ದೂಲ, ಸಕಲವಿದ್ವಜ್ಜನಾಧಾರ, ಸಮಸ್ತಗುಣಪಾರಾ ವಾರ, ಲೋಕೈಕವೀರ, ಏಕಾಂಗಶೂರ, ಅಶ್ವಪತ್ಯಶ್ವಲುಲಾಯ, ನರಪತಿ ನರರಾಕ್ಷಸಪ್ರಾಯ, ಗಜಪತಿಗಜಕಂಠೀರವ, ಮೃದುಮಧುರಗಂಭೀರಾರಾವ [1]ಸಹ್ಯಾ[1]ದ್ರಿಜಯಸ್ತಂಭಪ್ರತಿಷ್ಠಾಪನಾಚಾರ್ಯ, ಸಮರಾಂಗಣಕೃತ ಸ್ಥೈರ್ಯ, ತ್ಯಾಗಲಕ್ಷ್ಮೀವಿಜೃಂಭಿತಪಾಣಿಪಯೋಜ, ಕೀರ್ತಿಲಕ್ಷ್ಮೀಕ್ರೀಡಿತಾ ಶಾಸಾಮಜ, ತುರಗಾರೋಹಣರೇವಂತ, ಗಜಾರೋಹಣಜಯಂತ, ವೈರಿ ದಾನವವೈಕುಂಠ, ವಿಪಕ್ಷಪುಷ್ಪಾಯುಧನೀಲಕಂಠ, ಸಕಲಕಲಾಚತುರ್ಮುಖ,

---

[1] ಸಿಂಹ್ಯಾ (ಇ ಎ ಗ) *(ಇ) ಯಲ್ಲಿಲ್ಲ $ ಇವಕ್ಕೆ ಬದಲಾಗಿ (ಐ) ಪ್ರತಿಯಲ್ಲಿ ಈ ಪದಗಳಿವೆ :

ಎಂದುಚಿಂತಿಸುತಿರಲಮರರು ರಾಮಗಾ
ನಂದದಿಂದತ್ತ ಮತ್ತಿತ್ತ
ನಿಂದು ಭಟ್ಟರ ರಾಮನ ಬವರಕೆ ಬರ
ಲೆಂದಟ್ಟಿದನು ವೀರರುದ್ರ

ಬಂದು ಭಟ್ಟರು ರಾಮನಾಥನಿದಿರಿನೊಳು
ನಿಂದು ಕೈಯೆತ್ತಿ ಮೋಲವರು
ಅಂದು ನಾನಾವಿಧದಿಂ ರಾಮನನಾ
ನಂದದಿಂ ಪೊಗಳಿದರಿಂತು

ಸಮಸ್ತವೈಭವಶತಮುಖ, ದಿಕ್ಪಾಲಕಾಂಶೀಭೂತಶರೀರ, ರೂಪುಲಾವಣ್ಯ ವಿಜಿತಾಶರೀರ, ಅಂಗರಾಜಾಂಧಕಾರಾಂಭೋಜಮಿತ್ರ, ವಂಗರಾಜ ವಾರ್ಧಿವಡಬಾನಲ, ಕಳಿಂಗರಾಜಕದಳೀಕಾನನಕರಿಕಲಭ, ಮಗಧರಾಜ ಮಲಯಾನಿಲಮಹೋರಗ, ಮಾಳವರಾಜಮದನಮಹೇಶ್ವರ, ಕಾಶ್ಮೀರ ರಾಜಕಮಲಕಲಾಧರ, ದ್ರವಿಡರಾಜಧರಣೀಧರದೇವವಲ್ಲಭ, ಆಂಧ್ರರಾಜಾ ರಣ್ಯಾನಲ, ಪಾಂಡ್ಯರಾಜಪಯೋಧರಪರುಷಪವಮಾನ, ಲಾಟರಾಜ ಲಲಿತಲತಾಲವಿತ್ರ, ಭೋಟರಾಜಭೋಗೀಶ್ವರಾಹಿತುಂಡಿಕ, ಕಾಂಭೋಜ ರಾಜಾಂಭೋಜಪ್ರಳಯಪ್ರಾಲೇಯ, ತುರುಷ್ಕತೂಲಝುಂಝಾಸಮೀರಣ, ಪಾಂಚಾಲರಾಜಪಾದಪಪರಶ್ವಧ, ಹಮ್ಮೀರರಾಜಹಂಸಮೇಘಾಡಂಬರ, ಕುರುರಾಜಾಂಗಣರಾಜಕುಡುಂಗಕೃಷ್ಣಮಾರ್ಗ, ಸಿಂಧುರಾಜಸಿಂಧುಕುಂಭ ಸಂಭವ, ಸಿಂಹಳರಾಜಸಿಂಧುರಸಿಂಹ, ಪಾರಸಿಕರಾಜಪಂಚಾಸ್ಯಪಟುತರ ಪಾಟನಾಷ್ಟಾಪದ, ಬರ್ಬರರಾಜಬಲಾಹಕಪ್ರಭಂಜನ, ಕೋಸಲರಾಜ ಕೋಪಾನಲಾಸಾರ, ಸರಸಕಾವ್ಯಸರಸೀರಾಜಹಂಸ, ನಾಟಕನಿರೀಕ್ಷಣ ವಿಕಸಿತವಿಲೋಚನ, ಭಾಣಪ್ರವೀಣ, ಪ್ರಹಸನಪ್ರಗಲ್ಭ, ಕವಿತಾವಿಶಾರದ, ಸಂಗೀತಗೋಷ್ಠೀಶಾರ್ಙ್ಗಧರ, ಸಾಹಿತ್ಯಗೋಷ್ಠೀಶಂಕರ, ವಲ್ಲಕೀವಲ್ಲಭ ಯೌವನಕೇಳೀವಸಂತ, ಪರಾಕ್ರಮಪಂಚಾನನ, ಪರಪುರುಷಾರ್ಥಪರಮ ಪಂಡಿತ, ಸದ್ಗುಣರತ್ನಭೂಷಣಮಂಡಿತ, ಧೀರೋದಾತ್ತನಾಯಕ, ಪ್ರಯುಕ್ತ ಸಾಮಾದಿಸಪ್ತೋಪಾಯ, ರೂಪುಲಾವಣ್ಯಯೌವನಸೌಂದರ್ಯಸೌಕು ಮಾರ್ಯಹಾವಭಾವವಿಲಾಸವಿಭ್ರಮವಿರಾಜಿತಾನ್ಯವಿಲಾಸಿನೀ ಮುಖಾವ ಲೋಕನಜಾತ್ಯಂಧ, ಸತ್ವಸಮನ್ವಿತೋನ್ನತಸ್ಕಂಧ, ವಜ್ರವೃಷಭನಾರಾಚ ಸಂಧಿಬಂಧ, ದಕ್ಷಿಣಕವಿಕೃತಕೀರ್ತಿಪ್ರತಾಪಪ್ರಬಂಧ, ಕಲಹಕಮಲಾ ಕರವೇತಂಡ, ರಿಪುಕುವಲಯಮಾರ್ತಾಂಡ, ವಿಲಸಿತವಿಮಲಕೀರ್ತಿಕರಂಡ, ಶತ್ರುಶಲಭಸಮೂಹಾಗ್ನಿಕುಂಡ, ಕದನಪ್ರಚಂಡ, ಅರಿಶರಭನಿಕರ ಭೇರುಂಡ, ಪರವನಿತಾಸಹೋದರ, ಪರಗುಣಸ್ತೋತ್ರಕೃತಾದರ, ಕುಲವನ ಚೈತ್ರ, ಖಲಜನಭೈತ್ರ, ಕೊಂಕಣಕೋಳಾಹಳ, ತುಳುವದಳದುಳುಕಾಱ, ಸ್ಫುರುತಾಳಬಲಸೂಱೆಗಾಱ, ಬಲ್ಲಾಳಬಲುಬಲಬಂದಿಕಾಱ, ಭೀಷ್ಮಭೀಮ ದ್ರೋಣ ಧೃಷ್ಟದ್ಯುಮ್ನ ಕರ್ಣ ಕಪಿಧ್ವಜ ಸೈಂಧವ ಸಾತ್ಯಕಿ ಶಲ್ಯ ಸಹದೇವ ಸಮಾನ ವೀರ, ರಾಮಾವತಾರ, ರಣರಂಗಧೀರ, ವಿಜಯೀಭವ, ವಿಜಯೀಭವ, ದಿಗ್ವಿಜಯೀಭವ.

ಈ ತೆಱದಿಂದ ಕೊಂಡಾಡಿದ ವಂದಿ<br>
ವ್ರಾತಕಿತ್ತುಡುಗೊಱೆಗಳನು<br>
ಪ್ರೀತಿಯಿಂ ಬೆಸಗೊಂಡನವರನಾ ರಾಮನಾ<br>
ರಾತಿಬಲದ ಮನ್ನೆಯರ ೧೩೩

ಗಗನಗಂಗೆಯ ಪರಿಕಾಲ್ಗಳ ಪರಿಯಂತೆ
ಸೊಗಯಿಪ ಬೆಳುವಟ್ಟೆಯಿಂದ
ನೆಗೆದ ಸಿಂಧಗಳ ನಡುವೆ ತೋರ್ಪ[1]ವನೀಗ[1]
ಜಗದಧಿಪತಿ ವೀರರುದ್ರ ೧೩೪

ಬೆಳ್ಗೊಡೆ [2]ಢಾಳಿಪ[2] ಹದಿನಾಱು ಚವರ ಕಂ
ಗೊಳಿಸಲಾನೆಯ ಮಸ್ತಕದೊಳು
ತೊಳಗುವ[3]ನ[3]ವನೀಗ ಚಿತ್ತೈಸು ಕಾಕತಿ
[4]ಕುಲ[4]ಸಂಭವ ವೀರರುದ್ರ ೧೩೫

ಕುಸುರಿ[5]ವೆ[5]ಸದ ಮಿಸುನಿಯ [6]ಹಕ್ಕರಿಕೆ[6] ಕಯ್ಯ
ಮಸೆದ ಖಂಡೆಯ ಕಟ್ಟಿ ನೇಲ್ವ
ಹೊಸಹೊನ್ನ [7]ಖೇ[7]ಡೆಯುವೆಸೆವ ರಾವುತರವ
ರಸಮುಭಟರು ರಾಜಸುತರು ೧೩೬

ಹೊಳೆವ ಮುತ್ತಿನ ಲಂಬಣದ ಹೊನ್ನ ಕಳಸದ
ಬಿಳಿಯ ಸತ್ತಿಗೆಯ ನೆಳಲೊಳು
ಬಳಸಿದ ಬೆಳ್ಳಿಯ ಸಬಳದ ನಡುವೆ ಕಂ
ಗೊಳಿ[8]ಪ[8]ನವನು ಸಿಂಗಮನು ೧೩೭

ಮುಗಿಲನಳ್ಳಿಱಿವ ಪತಾಕೆಗಳೆಡೆಯೊಳು
ನೆಗೆದ ಸತ್ತಿಗೆಯ ಸಾಲೊಳಗೆ
ಸೊಗಯಿಪ ವೀರಭಟರು ಪದ್ಮನಾಯಕ
ರಗಣಿತರವರ ಚಿತ್ತೈಸು ೧೩೮

ಎಡೆವಿಡದೆಸೆವ ಬಿದಿರ ಪೇರಡವಿಯುಂ
ತಿಡಿಕಿಱಿದಿರ್ದ ಸಬಳದ
ಪಡೆ[9]ಯಿ[9]ದು ಕಡುಗಲಿ ಜಡ್ಡಿಗಳದು ಬಲು
ಗಡಿಯ[10]ರವರು[10] ಚಿತ್ತೈಸು ೧೩೯

---

[1] ವನಿವ (ಅ) ನವನೀಗ (ಇ ಗ) [2] ರಾಜಿಪ (ಐ) [3] ನಿ (ಎ ಗ) [4] ಕುಲಜ (ಎ ಗ) [5] ಗೆಲ (ಐ) [6] ಪಕ್ಕರೆ (ಇ ಉ ಐ) [7] ಖ (ಎ) ಖಂ (ಐ) ಕ (ಗ) [8] ಸುವ (ಉ ಐ) [9] ಯು (ಐ) [10] ವರನು (ಇ ಎ ಗ).

ಸೆಲದ ರಾವುತರಿಪ್ಪತ್ತುಸಾವಿರ ನಿನ್ನ
ಬಲವ ಬಳಸಿಕೊಂಬೆವೆನುತ
ಜಲನಿಧಿಯಂತೆ ಘೂ[1]ರ್ಣಿ[1]ಸು[2]ತ[2]ದೆ ರಾಯನ
ಕೆಲಬಲದೊಳು ವೀರರಾಮು ೧೪೦

ಕಳಹದೊಳಗೆ ನಿನ್ನುಱುಬೆಯು ನಿಲಿಸುವ
ಬಲುಪಂಥ ರಾಜ[3]ಸುತ[3]ರದು
ತಲೆ[4]ವೊ[4]ತ್ತು ನೂಕಿ ನೃಪತಿಯು ಪಿಡಿವ ಪಂಥ
ಕಲಿ ಸಿಂಗಭೂಪಾಲನದು ೧೪೧

ಲಕ್ಕ ಕುದುರೆ [5]ನೂಱು ಕರಿಘಟೆಯೊಂ[5]ಬತ್ತು
ಲಕ್ಕ ಕಾಲಾಳು ರಾಯನಿಗೆ
ಇಕ್ಕಿದೆ ಪೌ[6]ಜ[6] ನಿನಗೆ ಪಾರ್ಥನಲ್ಲದೆ
ಮಿಕ್ಕ [7]ವೀರ[7]ರು ಪಾಸಟಿಯೆ ೧೪೨

ಒಂದೆರಳ್ಮೂನಾಲ್ಕೈದಾಱೇಳ್ಮಡಿ
ಯೆಂದು ನುಡಿವ ಲೆಕ್ಕವಲ್ಲ
ಒಂದಕ್ಕೆ ನೂರ್ಮಡಿ ಬಲಕೆ ನೀನೊರ್ವನೆ
ನಿಂದೆ ಬೇ[8]ಱಿಲ್ಲಿನ್ನು[8] ಪಾರ್ಥ ೧೪೩

ಕುರುಸೇನೆ[9]ಗೆಂತೊ[9]ರ್ವನೆ ಪಾರ್ಥನಿದಿರಾಗಿ
ಧುರವನೆಸಗಿದನೆಂದೆಂಬ
ನರರ ಸಂ[10]ದೇಹವ[10] ಪರಿಹರಿಸಿದೆ ನೀನು
ನರನಲ್ಲದೆ ರಾಮು ನರನೆ ೧೪೪

ಇಂತು ನಿಜವ ನುಡಿದಾ ವಂದಿಗಳಿ[11]ಗಂದ[11]
ನಂತ ವಸ್ತ್ರಾಭರಣಗಳ
ಸಂತಸದಿಂದಿತ್ತು [12]ಬೀಳ್ಕೊಟ್ಟು ಪರಬಲ[12]
ಕಾಂತು ನಿಂದನು ರಾಮನಾಥ ೧೪೫

---

[1] ರ್ಜಿ (ಐ) [2] ತಿ (ಐ) [3] ಪುತ್ರ (ಐ) [4] ಯೊ (ಐ) [5] ಕರಿಘಟೆ ನೂಱುತೊಂ (ಐ) [6] ಜು (ಉ ಐ) [7] ವದಿ (ಐ) [8] ಱೇನಿಲ್ಲ (ಐ) [9] ಗೆಂದೊ (ಐ) [10] ಶಯವನು (ಉ) [11] ಗೆಯು (ಉ) ಗ (ಐ) [12] ಬೀಳ್ಕೊಂಡು ವೋಹರ (ಐ).

*ಇದು ಪರದಾರಸೋದರರಾಮನಾಥನ
ಪದಕೃತಿಯೊಳಗೆ ನಾಲ್ಕನೆಯ
ವಿದಿತಾಶ್ವಾಸದೊಳೊಂದನೆಯದು ಸಂಧಿ
ವ್ಯದುಪದಚಯಸಂಬಂಧಿ　　೧೪೬

---

* (ಅ ಎ ಗ ಐ) ಗಳಲ್ಲಿಲ್ಲ.

## ಹದಿನೈದನೆಯ ಸಂಧಿ

### ವೀರರುದ್ರನ ಪರಾಜಯ

ಭರದಿಂದ ಪೋಗಿ ಭಟ್ಟರು ರಾಮನಾಥನ
ಬಿ[1]ರು[1]ದ ಕಯ್ಯೆತ್ತಿ ಕೊಂಡಾಡಿ
ನರಪತಿ ವೀರರುದ್ರಗೆ ರಾಮನಿತ್ತಾ
ಭರಣವಸ್ತ್ರಗಳ ತೋಱಿಸಲು ೧

ಏನ ನುಡಿದನು ಕುಮಾರರಾಮಗ ನಮ್ಮ
ಸೇನಾ[2]ಶರಧಿಯ[2] ಕಂಡು
ಆನದೆ ಪೇಳಿಯೆಂದಾ ವಂದಿಗಳನಾ
ಮಾನವಪತಿ ಕೇಳಿದನು ೨

ವಿನಯ ವರ್ತನದೊಳು ವಿತರಣ ಕಯ್ಯೊಳು
ಘನಶೌರ್ಯದೇಳ್ಗೆ ಸಂಗರದ
ಮೊನೆಯೊಳಲ್ಲದೆ ಮಾತಿನೊಳುಂಟೆ ರಾಮಗೆ
ಮನುಜೇಶ್ವರ ವೀರರುದ್ರ ೩

ಸಿಂಗದ ಶಿಶು ಕರಿಘಟೆಗಳ ಕಂಡು ನ
ಖಂಗಳನೆಸಗಿ ಕೇಸರವ
ಪಿಂಗದಲುಗುವುದಲ್ಲದೆ ಜಾಯಿಲಂಗಳ
ಜಂಗುಳಿಯಂತೊದಱು[3]ವು[3]ದೆ ೪

ಪರಬಲ ಕುರುಬಲವಾಗಲಿ ರಾವಣ
ನುರುಬಲವಾಗಲಿ ಭಯದ
ಭರವುಂಟೆ ರಾಮನೆದೆಯೊಳಾ ರಾಮಗೆ
ನರಲೋಕದ ವೀರರೆಣೆಯೆ ೫

---

[1] ರಿ (ಐ ಅ)   [2] ಶರನಿಧಿ (ಎ) ಸರದಿಯ (ಅ)   [3] ವ (ಐ).

ಪರವೆಣ್ಣು ಸುರವೆಣ್ಣಾಗಲಿ ಮನಸಿಜ
ನರಸಿಯಾಗಲಿ ಮನದೊಳಗೆ
ಹೊರೆಯುಂಟೆ ರಾಮನ ಶುಚಿತೆಗೆ ಲೋಕದ
ನರರೆಣೆಯೆ ಕೇಳ[1]ವನಿ[1]ಗೆ ೬

ಎನಲು ಕೇಳಿದನು ಕಾಕತಿರುದ್ರ ರಾಮನ
ತನುವಿನ ಸತ್ವದೇಳಿಗೆಯ
ಅನುವದಿಸಿದರವರಿಂತೆಂದು ರಾಯನ
ಮನ[2]ವನಱಿದು[2] ಬೇಗದೊಳು ೭

ಕರುವಿಟ್ಟು ಶುಚಿತೆಯಿಂ ವೀರರಸದೊಳೆಱೆ
ದುರುಶೃಂಗಾರರಸದೊಳು
ಪೊರೆದು ವಿಲಾಸದಿಂದೊಪ್ಪವಿಟ್ಟಂ[3]ತಿದೆ[3]
ನರಪತಿ ರಾಮನ ಮೂರ್ತಿ ೮

ಪುರುಷೋ[4]ತ್ತಮ[4] ಪುಷ್ಪಚಾಪ ಪುರಂದರ
ಪುರಹರಸುತನೆನ್ನದವನ
ನರನೆಂದು ನುಡಿ[5]ದೊಡೆ[5] ನಾಲಗೆ ನಿನ್ನಾಣೆ
ಪೊರಳದಯೋನಿಸಂಭೂತ ೯

ಚೆಲುವು ಚೆಲುವಿಗೆ ತಕ್ಕ ಸೊಬಗು ಸೊಬಗಿಗೆ ತ
ಕ್ಕಳವಳವಿಗೆ ತಕ್ಕ ನಿಲವು
ನಿಲವಿಗೆ ತಕ್ಕ ವಿನಯ ವಿನಯಕೆ ತಕ್ಕ
ಬಲವೆಸೆದದೆ ರಾಮನೊಳು ೧೦

ಎಂದು ವಂದಿಗಳು ಕುಮಾರರಾಮನ ಗುಣ
ವೃಂದವನೊಂದೆ ಕೊರಲೊಳು
ಅಂದು ಪೊಗಳುತಿರಲತ್ತ ಕಂಪಿಲನಿತ್ತ
ಬಂದನು ನಿಜಸುತನೆಡೆಗೆ ೧೧

ಮಂದರ ಮಲಯಾಚಲ ಮೇರು ಹಿಮಗಿರಿ
ಬಂದು ನಿಂದಂತೆ ಕಣ್ಗೆಸೆವ
ಸಂದ ಕಾಕತಿರುದ್ರದೇವನ ಪೌಜುಗ
ಳಂದವ ನಡೆ ನೋಡಿದನು ೧೨

---

[1] ವ (ಅ ಉ ಎ ಗ) [2] ದನುವಱಿತು [3] ತದೆ (ಅ ಐ ಇ) [4] ದ್ಧವ (ಐ)
[5] ವಡೆ (ಐ) ದರೆ (ಉ).

ಅರಿಭಟರೇಱಿದೊಡಾಂತವರಿಗೆ ಕಯ್ಯ
ಪರಿಯ ತೋಱಿದಪೆಯೊ ನೀನೆ
ಇರದೇಱಿ ಪರಬಲವನು ಕಲಕಿದಪೆಯೊ
ಧುರಧೀರ ಪೇಳಿದ[1]ಱಿರ[1]ವ ೧೩

ಎಂದು ಕೇಳಿದ ತಂದೆಯೊಡನೆ[2] ಕುಮಾರನಿಂ
ತೆಂದು ನುಡಿದನುತ್ತರವನು[2]
ನಿಂದು ನಿಟ್ಟಿಸು ರಾಯಪೌಜುಗಳೆಲ್ಲವ
ನೊಂದು ಮಾಡುವೆನು ಬೇಗದೊಳು ೧೪

ಬೆ[3]ಟ್ಟ[3]ಗಳನು [4]ವಜ್ರದಿಂ ಸುರಪತಿ[4] ಕಡಿ
ದಟ್ಟಿ ಬೆನ್ನಟ್ಟುವಂದದಲಿ
ಬಿಟ್ಟ ಮಂಡೆಯೊಳೋಡಿಸುವೆ ಪರಬಲವನು
ನಿಟ್ಟಿಸು ರಾಯ ನೀ[5]ನೆನ್ನ[5] ೧೫

ಒಡ್ಡಿದ ಮೋಹರಗಳ ನೊಡೆಹಾಯ್ದುವೆ
ದೊಡ್ಡಿಹ ರಾವುತರುಗಳ
ಒಡ್ಡ ಮುಱಿವೆ ರುದ್ರದೇವನ ಪೌಜಿಗಾ
ನಡ್ಡಲಾಗುವೆನು ಬೇಗದೊಳು ೧೬

ಸುತ್ತ[illegible]ಬಳಸಿಕೊಂಡಾನೆ ಕುದುರೆಗಳ
ತೊತ್ತಳದುಳಿವೆ [6]ಸು[6]ಭಟರ
ಹೊತ್ತು ತಿವಿದು ರಣಭೂಮಿಯೊಳಗೆ ಬಿ[7]ಸಿ[7]
ನೆತ್ತರ ಪೊನಲೇಳಿಸುವೆನು ೧೭

ಎಂದು ನುಡಿದ ಮಗರಾಮನ ವದನಾರ
ವಿಂದವ [8]ನಿಟ್ಟಿ[8]ಸುತರಸ
ಸಂದೇಹವಿಲ್ಲ ನೀನಾಡಿದ ಮಾತಹು
ದೆಂದು ನಲಿದನೆದೆಯೊಳಗೆ ೧೮

---

[1] ಱಿನು (ಉ) [2] ಚೆನ್ನಿಗರಾಮ ಮಂದಹಸಿತಮುಖನಾಗಿ (ಕ) [3] ಟ್ಟು (ಎ)
[4] ಸುರಪತಿವಜ್ರದಿಂ (ಉ ಎ ಗ) [5] ನೆಂದ (ಅ) [6] ನೀ (ಉ) [7] ಸು (ಇ ಗ)
[8] ನೀಕ್ಷಿ (ಇ ಗ).

ಕುರುರಾಯನ ಮೈದುನನ ಕೊಲೆಗೆ ಧರ್ಮಜ
ನರನ ಕಳುಪುವ ತೆಱದೊಳು
ನರಪತಿಯೊಡಬಟ್ಟು ಕಳುಪಿದ ರಾಮುನ
ಪರಬಲಜಲನಿಧಿಯೆಡೆಗೆ  ೧೯

ಸನ್ನೆಯ ಚವರ[1]ಗಳಾಡಿತು[1] ಕಾಕತಿಕುಲ
ರನ್ನನ ಪೌಜುಗಳೊಳಗೆ
ಭಿನ್ನವಾದ್ಯದ ರವದಿಂ ಚೂಣಿಗಂಟಿಕ್ಕಿ
ತುನ್ನತ ಶೌರ್ಯ[2]ಮದದೊಳು[2]  ೨೦

ಗಗನಮಂಡಲ ಪರಿಯಂತರ ಭೂತಳ
ನೆಗೆದುದೆಂದೆನೆ ಪದಧೂಳಿ
ಮುಗಿಲ ಮುಸುಕಿ ನಿಂದುದು ಚೂಣಿಯ ಕಾ
ಳಗದೊಳಗೇನ ಪೇಳುವೆನು  ೨೧

*ಬಲಪದಹತ ಧೂಳಿಯ ಬಿಱುವೊಯಿಲಿನಿಂ
ಚಲಿಸುವ ರವಿ ಬಾನೊಳಗೆ
ಸಲೆ ಮೆಱೆದುದು ಪವನಾಹತಿಯಿಂ ಕೊಳ
ದೊಳಗೊಲೆವರುಣಾಬ್ಜದಂತೆ  ೨೨

ಸಿಡಿಲಾ[3]ರ[3]ಭಟೆಯಿಂ ಬೆ[4]ಟ್ಟ[4]ಗಳನು ಬಂದು
ಪೊಡೆವಂತೆ ದುಂದುಭಿಗಳನು
ಕುಡುಪುಗಳಿಂ ಪೊಯ್ಯೆ ದಿಗ್ಭಿತ್ತಿ ಮೂಲೆಗ
ಳೊಡೆದವದೇನ [5]ಪೇಳುವೆನು[5]  ೨೩

ಜರಿಯೆ ಬೆಟ್ಟದ ಕಲ್ಲು ಸುರಿಯೆ ತಾರಗೆ[6]ವಳೆ[6]
ಬಿರಿಯೆ ಸರೋಜಭವಾಂಡ
ಇರದೊದಱಿದವು ನಾನಾವಾದ್ಯಂಗಳು
ನರಪತಿ ರುದ್ರನಾಜ್ಞೆಯೊಳು  ೨೪

ದೊರೆದೊರೆಗಳು ತಮ್ಮತಮ್ಮ ಮೊನೆಯ ಮೋ
ಹರಕೆ ಚೂಣಿಯ ಸುಭಟರನು
ಹರಿಯ ಬಿಡಲು ಬಂದು ಪೊಕ್ಕರು ಬಿಲ್ಲಿಂದ
[7]ಶ[7]ರವೆಯ್ವುವ ತೆಱ[8]ದಿಂದ[8]  ೨೫

---

[1] ಗಳಾಡಲು (ಇ ಐ) ಡಾಳಿಸಲು (ಎ ಗ)  [2] ಬಲದಲಿ (ಕ)  [3] ರು (ಐ)
[4] ಟ್ಟು (ಅ)  [5] ಬಣ್ಣಿಪೆನು (ಇ ಎ ಉ ಗ)  [6] ಮಳೆ (ಅ)  [7] ಸ (ಗ)  [8] ನಂತೆ (ಉ)  * (ಉ) ಪ್ರತಿಯಲ್ಲಿಲ್ಲ.

ಹರಿಗೆಯವರು [1]ಹರಿದರು ಮುಂದೆ[1] ಬಿಲ್ಲವ
ರುರವಣಿಸಿದರು ಸಬಳದ
ವರವೀರಭಟರು [2]ಪೊ[2]ಕ್ಕರು ಸಿಂಗಭೂಪನ
ಕರದ ಚವರದ ಸನ್ನೆ[3]ಯಲಿ[3] ೧೬

ಬೀಸಿದ ಸನ್ನೆಯ ಚವರ ನಿಲ್ಲದ ಮು
ನ್ನೋಸರಿಸದೆ ಪಟುಭಟರು
ಘಾಸಿ ಮಾಡಿದರು ಚೂಣಿಯೊಳರಿಸೇನೆಯ
ಮಾಸಾಳನತಿ ವೇಗದೊಳು ೧೭

ಹರಿಯಬಿಟ್ಟರು ವಾಹಕರು ಕುದುರೆಗ[4]ಳ
ನಿ[4]ರದೆ ಜೋದರು ಕರಿಘಟೆಯ
ಧುರಧ[5]ರಣಿಯ[5] ಪೊಗಿಸಿದರು ಕಾ[6]ಳ[6]ಗ ಧರ
ಧುರವಾದು[7]ದು ಸುಭಟರಿಗೆ[7] ೧೮

*ಕಳೆದು ಟೊಪ್ಪಿಗೆಯ ಮೈದಡವಿ ಮೆಲ್ಲನೆ ಕೈ
ದಳದಿಂದ ಬಿಡಲು ಪಕ್ಕಿಗಳ
ಕುಲವ ಗಿಡುಗ ಕೊಲುವಂತರಿ ಬಿರುದರು
ಕಲಕಿದರರಿ ಮೋಹರವ ೧೯

ಭೂಪತಿ ಕುಲರನ್ನಗೆ ಕಂಪರಾಯಗೆ
ಕಾಪನಿಕ್ಕದೆ ಸಂಗರವ
ಕೋಪಾಟೋಪದಿಂದಾನು ಪೋಗಲು ಮು
ನ್ನಾಪತ್ತು ಬಿಡದು ರಾಯನಿಗೆ ೨೦

ಪೊಡವಿಪತಿಯ ಪಿಡಿದಪೆನೆಂದು ಸಿಂಗಮ
ನುಡಿದನು ಬಲುಪಂಥವನು
ಕಡುಗಲಿಗಳನಿರಿಸದೆ ರಾಯನೊತ್ತಿನೊ
ಳಡಿಯಿಡುವುದು ಮತವಲ್ಲ ೨೧

ಎಂದಣ್ಣಭೈರವ ದೇವನೊಡನೆ ರಾಮ
ನಂದು ನುಡಿದ ವಿನಯದಲಿ
ಮಂದಿ ಕುದುರೆಯೆಲ್ಲವ ಕೂಡಿಕೊಂಡು ಕೈ
ಗುಂದದಿರೆಂದು ಪೇಳಿದನು ೨೨

---

[1] ಮುಂದೆ ಬರೆ ಈಟಿ (ಐ) [2] ಹೊ (ಐ) [3] ಯೊಳು (ಉ) [4] ಳ ನಂಧಿ (ಉ) [5] ರಣಿಗೆ (ಇ) ರೆಯೊಳು (ಐ) ರಣಿಯೊಳು (ಕ) [6] ಳಿ (ಅ) [7] ದೇನ ಬಣ್ಣಿಪೆನು (ಕ) * (ಉ) ಪ್ರತಿಯಲ್ಲಿಲ್ಲ.

ಹೆಸರುಳ್ಳ ಬಲುರಾವುತರನೆಲ್ಲರ ನಿನ್ನ
ವ[1]ಶ[1]ಮಾಡಿ ಪೋಪೆ ಸಿಂಗಮನ
ಮುಸುಡುಗಾಣ[2]ದ ಮುನ್ನ[2] ಮುಂದಲೆವಿಡಿದು ನೀ
ನೊಸೆದೊಪ್ಪಿಸಣ್ಣ ರಾಯನಿಗೆ ೩೩

ಎಂದು ನುಡಿದು ಪೆಸರ್ವಿಡಿದು ಕರೆದು ಬಲು
ಮಂದಿ ಕುದುರೆಯನೆಲ್ಲವನು
ತಂದೆಯು ಮೈಗಾವಲಿಗಣ್ಣಭೈರವ
ನೊಂದಾಗಿ ಕಳುಪಿದನೊಸೆದು ೩೪

[3]ಪಿ[3]ಡಿ ವಾಘೆಯವನು ಪಿಡಿಯಿಸಿಕೊಳ್ಳದೆ ತ
ನ್ನೊಡನೆ ಬರ್ಪಾ ತುರಗವನು
ಕಡುಗಲಿ ಕಲಹಲಂಪಟ ಕಲಿಯುಗಪಾರ್ಥ
ಬಿಡದೆ ನೋಡಿದನು ರಾಗ[4]ದಲಿ[4] ೩೫

ತರಣಿಯು ಕುದುರೆ ಸೇನಾಪದಧೂ[5]ಳಿಯು[5]
ಭರದಿಂದ ಪೊಲಬುದಪ್ಪಿಳೆಗೆ
ಇರದೆಯ್ತಂದುದೆಂದೆನೆ [6]ವೀರರಾಮನ[6]
ತುರಗವೆಸೆದುದು ಕಂಗಳಿಗೆ ೩೬

ಬಲಗೊಂಡು ದಿವ್ಯತುರಂಗದ ಪಾದವ
ತೊಳೆದು ಕಾಣಿಕೆಯಿಕ್ಕಿ ನಮಿಸಿ
ನಲವಿಂದ ಬೆಂಗೆವಾಯ್ದನು [7]ಸೂ[7]ತತನಯರ
ಕಲಕಲರವ ಮಸ[8]ಗುತಿರೆ[8] ೩೭

ಆಡೆ ಚವರ ವೀರರುದ್ರನ ಬಲದೊಳು
ನೋಡಿ ಕಾಲಾಳು ಮೇಲಾಳು
ಕೂಡೆ ಹೊಕ್ಕರು ಪರಬಲವನಾನದೆ ಕೈ
ಮಾಡಿದರಂದು ಬೇಗದೊಳು ೩೮

[9]ಅಟ್ಟಿ[9]ಸೂಟಿಯೊಳೊದಗಿದರು ಕಾಲವರು ಸಾ
ಲಿಟ್ಟು ಕವಿದವಾನೆಗಳು
ಮುಟ್ಟಿ ಮೂದಲಿಸುತೇಱಿದರು ರಾವುತರು ಕೈ
ಬಿಟ್ಟಾ ಮೋಹರದೊಳಗೆ ೩೯

---

[1] ಸ (ಅ ಎ ಗ) [2] ಲು (ಎ ಗ) [3] ಪ (ಇ ಎ ಐ ಗ) [4] ದೊಳು (ಎ ಗ)
[5] ಳೀ (ಇ ಉ ಎ ಐ ಗ) [6] ರಾಮನಾಥನ [7] ಸು (ಇ) [8] ಗಿದುದು (ಅ)
[9] ಬಿಟ್ಟ (ಅ ಇ).

ಶರಧಿಯ ತೆರೆಮಾಲೆಗಳಂತೆ ಮೇಲೆ ಮೇ
ಲುರವಣಿಯಿಂದೆಯ್ತಪ್ಪ
ಪರಬಲದುಬ್ಬಿಯ ನೋಡಿ ಕಂಡನು ಧುರ
ಧರಣಿಯೊಳಾ ವೀರ [1]ರಾಮು[1] ೪೦

ಎಡಬಲದೊಳಗಿರ್ದ ಪೌಜುಗಳೆಲ್ಲವ
ಬಿಡದೊಗ್ಗುಮಾಡಿಕೊಂಡವನು
ವಡಬಾಗ್ನಿ ಕಡ[2]ಲ[2] ಪೊಗುವ ತೆಱದಿಂ ಪಗೆ
ವಡೆಯ ಪೊಕ್ಕನು ಬೇಗ[3]ದೊಳು[3] ೪೧

ಸಿಡಿಯೆ ದಿವಿಜತತಿಯೊಡೆಯೆ ಮುಗಿಲಮಂದೆ
ಕೆಡೆಯೆ ಬೆಟ್ಟದ ಕಲ್ಗಳಿಳೆಗೆ
ಪೊಡೆದವು ನಿಸ್ಸಾಳಕೋಟಿ ಕಂಪಿಲಸುತ
ನೊಡನೆ ಪೊಗಲು ಸಂಗರವ ೪೨

ದೊರೆದೊರೆಗಳು ಬಂದಡ್ಡಲಾ[4]ಗಿರಿ[4] ರಾಮು
ಧುರವ ಪೊಕ್ಕನು ಬಣಗುಗಳು
ಭರದಿಂದ ತೆಗೆದೋಡಿಯೆಂದು ಕಹಳೆಗಳಂ
ದಿರದೊದಱಿದವು ಕೋಟಿಗಳು ೪೩

ಹೊಕ್ಕನು ಪದ್ಮನಾಯಕರ ಮೋಹರವ ಮು
ಯ್ಯಿಕ್ಕಿ ತಿವಿದು ಸುಭಟರನು
ಒಕ್ಕಲಿಕ್ಕಿದನು ಱಡ್ಡಿಗಳ ಮೋಹರ ಬಂದು
ಮುಕ್ಕಿಱಿದುದು ಮೂದಲಿಸುತ ೪೪

*ಉರವಣಿಯಿಂ ತಿವಿದೊಳಪೊಕ್ಕು ಱಡ್ಡಿಮೋ
ಹರದ ಮಹಾರಾವುತರನು
ಸುರ[5]ಸುದತಿಯರ ಸುರತಸುಖ ಶರಧಿಯ
ತೆರೆಯೊಳಗೋಲಾಡಿಸಿದನು[5] ೪೫

---

[1] ರುದ್ರ (ಐ) [2] ಲೊಳು (ಐ) [3] ದಿಂದ (ಅ) [4] ಗಲ (ಅ ಗ ಎ)
[5] ಸತಿಯರ ಸುಖಶರಧಿಯ ತೆರೆಯೊಳು ಇರದೆ ಓಲಾಡಿಸುತಿಹನು (ಐ)
* (ಉ) ಪ್ರತಿಯಲ್ಲಿಲ್ಲ.

*ಸವಚಿ ಹೊಕ್ಕನು ಕೆಲಬಲದ ರಾವುತರನಂ
ದವಗಡಿಸಿದನು ಮುನ್ನೆಯರ
ಜವದಿಂದ ಬಂದು ಜಗಳಕೆ ಮಯ್ಯಾಂತರ
ಜವನಗ[1]ರಿ[1]ಗೆ ಕಳುಪಿದನು ೪೬

ಹೊ[2]ಕ್ಕ[2] ಕುದುರೆಗಳ ತೆಕ್ಕೆಗೆಡಪಿದ ಮೇ
ಲಿಕ್ಕಿದಾನೆಯ ಮೆಯ್ಯೊಳಗೆ
ಸಿಕ್ಕಿದ ಬಲ್ಲೆ[3]ಯ[3]ವನು ಕಾಲವರನಂ
ದೊಕ್ಕಲಿಕ್ಕಿದನಾ ರಾಮ ೪೭

ಕದಳೀಕಾನನವನು ಕರಿಕಳಭ ಪೊ
ಕ್ಕೊದೆದು ಮುಱಿದು ತುಳಿವಂತೆ
ಸದೆದನು ಸಮರಾಂಗಣದೊಳು [4]ರಿಪು[4]ಬಲ
ದದಟರನಾ ವೀರರಾಮ ೪೮

ಇದಿರಾದ ವೀರರನಿಱಿದು ಕೆಡಹಿದನಂ
ದೊದವಿ ಕವಿದ ಪಟುಭಟರ
ಮೆದೆ[5]ಗೆಡಹಿ[5]ದನು ಮೇಲ್ವಾಯ್ದು ವೀರರ ಸುರ
ಸುದತಿಯರೆಡೆಗಟ್ಟಿದನು ೪೯

ಹುಡಿಹುಡಿಯಾಗೆ ಸವಗ ಸೀಸಕ ಜೋಡು
ಕಡಿಖಂಡವಾಗೆ ಸುಭಟರ
ಕಡಿದೊಟ್ಟಿದನು ಕಲಹದೊಳಿದಿರಾದರ
ಕಡುಗಲಿ ಕಂಪಿಲಾತ್ಮಜನು ೫೦

ಎಡಬಲದೊಳು ಬಂದವಗಡಿಸುವ ಬಲು
ಗಡಿಯ ರಾವುತರನಾ ರಾಮು
ಎಡಗಯ್ಯ ಬಲಗಯ್ಯ ಖಂಡೆಯದಿಂ ಕಡಿ
ಕಡಿದೊಟ್ಟಿದನು ರಣದೊಳಗೆ ೫೧

ಕರಿಘಟೆಯನು ಕಲಕಿದ ಹಯದೊಡ್ಡನು
ಹರಹಿದ ಕಾಲು ಪಾಯಕರ
ಹುರಿಯೊಡೆಯಿಸಿದನು ಹೊಕ್ಕು ತಿವಿದು ರಾಮು
ನುರವಣೆಯನು ಪೇಳ್ವೆನೇನ ೫೨

---

[1] ಡಿ (ಇ) [2] ಕ್ಕು (ಐ) [3] ಹ (ಅ) [4] ಪರ (ಉ) [5] **ಯೊಟ್ಟ** (ಅ ಇ) **ಯೊಡ್ಡ** (ಎ) * (ಉ) ಪ್ರತಿಯಲ್ಲಿಲ್ಲ.

*ಕಡಿವ ಕೈಚಳಕ ತಿವಿವ ತೀವ್ರಸರಳ್ಗಳಿಂ
ದಿಡುವ ಸಘಾಟಿಕೆ ಮನದ
ಕಡುಹು ಕಲಹಲಂಪಟತೆಯೊಂಬಿವ ಕಂ
ಡೊಡನಮರರು ಪೊಗಳಿದರು ೫೩

ಉರವಣಿಸಿದರು ಭಟರು ಮತ್ತೆ ಸೆಲ್ಲೆಹ
ಶರ ಶಕ್ತಿ ಪಿಂಡಿವಾಳಗಳ
ಸರಿವಳೆಯನು ಸುರಿದರು ರಾಮ[1]ನ ದಿವ್ಯ[1]
ತುರಗದ ಮೇಲೆ ಮೋಹರಿಸಿ ೫೪

ಎಡಬಲದೊಳು ಹಿಂ[2]ದು[2]ಮುಂದವಗಡಿಸುವ
ಕಡುಗಲಿಗಳ ಮೋಹರವನು
ಬಿಡದೆ[3]ಬ್ಬ[3]ಟ್ಟಿ ಕೊಂದನು ಹರಿ ಕರಿಯ ವಂ
ಗಡವ ಬೆನ್ನಟ್ಟಿ ಕೊ[4]ಲ್ವ[4]ಂತೆ ೫೫

ಹುರಿಯೊಡೆದುದು [5]ಮಯ್ದ[5]ಗೆದುದು [6]ಕಣ್ಗ[6]ಟ್ಟು
ಸರಿದುದು ದೆಸೆದೆಸೆಗಳಿಗೆ
[7]ಹರೆ[7]ದುದು ಪಿಡಿದ ಕೈದುಗಳ ನೆಲಕೆ [8]ಹಾಯ್ಕಿ[8]
ಪರಬಲರಾಮನುಱುಬೆಗೆ ೫೬

*ಅಲೆಯೆ ಝಂಝಾನಿಲ ತೊಟ್ಟು ಸಡಲಿದಾಲ
ದೆಲೆಯುದಿರ್ವಂತೆ ಕುವರನ
ಅಲಗಿನ ಹೊಯ್ಲಿನಿಂ ನೆಲಕೆ [9]ಬಿದ್ದ[9]ದು ಪರ
ಬಲವದನೇನ [10]ಪೇಳುವೆನು[10] ೫೭

ಇಳಿಯಬಿದ್ದರು ರಾವುತರು ಕುದುರೆಗಳಿಂ
ದಳವುಗೆಟ್ಟೆಡಬಲಗಳಿಗೆ
ತೊಲಗಿದರಿರದೆ ಜೋದರು ರಾಮನಾಥನ
ಕೊಲೆಯ ಕೋಳಾಹಳಕಗಿದು ೫೮

---

[1] ನಾಥನ (ಇ) [2] ದ (ಅ) [3] ಬ್ಬೆ (ಕ) [4] ಂದ (ಕ) [5] ಹೆರೆದೆ (ಇ) [6] ಕಂಗೆ [7] ಪರೆ (ಉ) ಹರಿ (ಎ ಗ) [8] ಹಾಕಿ (ಇ) ಹಾಯಿಕಿ (ಐ) [9] ಬಿಳ್ದು (ಗ) [10] ಬಣ್ಣಿಪೆನು * (ಉ) ಪ್ರತಿಯಲ್ಲಿಲ್ಲ

*ಪಕ್ಕರಿಕೆಗಳನಿ[1]ಳುಪಿ[1] ಚಿಗಿದರು ಮೇ
ಲಿಕ್ಕಲಮ್ಮದೆ ರಾವುತರು
ದಿಕ್ಕುದಿಕ್ಕಿಗೆ ಕೆದಱಿದವಾನೆಯ ಹಿಂಡು
ಹೊಕ್ಕು ತಿವಿಯೆ [2]ವೀರರಾಮ[2] ೫೯

ಕರಿಯೊಟ್ಟಿಲಾಳ ಬಣಬೆ ಕುದುರೆಯ ಮೆದೆ
ಪರಿವ ನೆತ್ತರ ಪೊನಲೆಸೆಯೆ
ಧುರದೊಳು ಚಾರಿವರಿದು [3]ಚ[3]ತುರಂಗವ
ಸುರನಗರಿಗೆ ಕಳುಪಿದನು ೬೦

*ಉರಿಗಯ್ಯ ಗಗನಾಂಗಣದ ಮಧ್ಯದೊಳು ಮಿಗೆ
ಪರಿದಾಡುವಂತಾ ರಾಮ
ಧುರಧರಣಿಯೊಳು ತಿ[4]ಱ್ಱ[4]ನೆ ತಿರುಗಿದನಂ
ಬರದೊಳಮರರು [5]ಮೆ[5]ಚ್ಚಿದರು ೬೧

ಮುಱಿದುದು ಪದ್ಮನಾಯಕರ ಮೋಹರ ಬಂ
ದುಱುಬಿ ಕವಿವ ಱಡ್ಡಿಗಳ
ಉಱುವ ಭಟರು ದೆಸೆದೆಸೆಗೋಡಿದರು ರಾಮ
ನುಱುಬೆಯ ನಿಲಿಸುವರಿಲ್ಲ ೬೨

ಎಂದು ನುಡಿಯೆ ಕಾಕ[6]ತೀಂದ್ರ[6]ನರಸುಮಕ್ಕ
ಳಂದು ಮೋಹರಿಸಿ ಬೇಗದೊಳು
ಹಿಂದಣ ಪಂಥದ ನುಡಿಯ ನೆನೆದು ಬೇಗ
[7]ದಿಂದ[7] ಮುತ್ತಿದರು ರಾಮನನು ೬೩

*ಹತ್ತುಸಾವಿರ ರಾಜಪುತ್ರರೋಡುವ ಬಲ
ಕಿತ್ತುಭಯವ ಕೂಡಿಕೊಂಡು
ಮುತ್ತಿಗೆಯನು ಮಾಡಿದರು ತಿವಿತಿವಿ[8]ಯೆನು
ತೊ[8]ತ್ತಿಗೆ ಸೇರಿದರವನ ೬೪

---

1 ಳಪಿ (ಇ) ಳಿದು (ಅ) ಳಿಪಿ (ಎ) 2 ರಾಮನಾಥ (ಇ ಐ ಎ) 3 ಚಾ (ಇ) 4 ಟ್ಟ (ಅ ಇ ಎ ಗ) 5 ಮ (ಅ) 6 ತಿರುದ್ರ (ಎ ಐ ಗ) 7 ಬಂದು (ಉ) 8 ಯೆಂದೊ * (ಉ) ಪ್ರತಿಯಲ್ಲಿಲ್ಲ.

ವಸುಧಾಧಿಪ ವೀರರುದ್ರನ ಭಟರೆತ್ತ
ಹಸುಳೆ ನೀನೆತ್ತ ಹುಯ್ಯಲೊಳು
ಅಸಮಭಟರ ಹೋರಾಟವೆನುತ ಮಾ
ಮಸಗಿ ಮೂದಲಿಸಿ ಕವಿದರು ೬೫

ಮಸೆದಲಗಿನ ಬಲ್ಲೆ[1]ಯಗಳ[1] ಮೊನೆಯ ನಡು
ವೆಸೆದ[2]ನು[2] ಮೋಹರದೊಳಗೆ
ಅಸಿಪಂಜರದ ನಡುವಣ ಯೋಗಿಯ ಪೊಚ್ಚ
ಪೊಸಬಗೆಯಂತಾ ರಾಮ ೬೬

*ಅಣೆವಲಗಿಗೆ ಲೆಕ್ಕವಿಲ್ಲ ಮೋಹುವ ಮೊನೆ
ಗೆಣಿಕೆಯಿಲ್ಲೆ ಸುವಂಬುಗಳಿಗೆ
ಗಣನೆಯಿಲ್ಲಾಳಿವೆಂ[3]ತೊ[3] ರಾಮುಗೆಂದಾ ದೇವ
ಗಣ ಮಱುಗಿದುದಂಬರದೊಳು ೬೭

*ಅಱುವತ್ತು ಸಾವಿರ ಕುದುರೆ [4]ವೇಡೈಸಿತ್ತು[4]
ತಱುಬಿತ್ತು ಮೂಱು ಲಕ್ಕಾಳು
ಉಱುಬಿತು ಕರಿಯೈನೂಱು ರಾಮನ ಮೇಲೆ
ಮಱುಗಿತು ದಿವಿಜಸಂದೋಹ ೬೮

*ತಲೆವರಿಗೆಯಲಿ ಕವಿ[5]ದರು[5] ಕಾಲವರಾರ್ದು
ತಲೆವಿಲ್ಲುಗೊಂಡು ಬಿಲ್ಲವರು
ತೊಲತೊಲಗೆನುತ ಮುಸುಕಿದರು ಸಬಳದ
ಬಲುಗಡಿಯರು ಬಳಸಿದರು ೬೯

ಮದದಾನೆಯ ಮೋಹರ ಮುಸುಕಿತು ಬಂದು
ಕುದುರೆಯ ಪೌಜು ಕವಿದುದು
ಕದನ ಕರ್ಕಶರಾಮನ ಕೆಣಕಿ[6]ದುದಂ[6]
ದೊದವಿ ಕಾಲಾಳು ಮೇಲಾಳು ೭೦

---

[1] ಹದ (ಅ) [2] ವು (ಉ) ನಾ (ಐ) [3] ತಾ (ಅ) [4] ಯೋಡೈಸಿತ್ತು (ಗ) ವೆಡ್ಡೈಸಿತು (ಎ ಗ) [5] ದು (ಅ ಉ) [6] ದರಂ (ಐ) * (ಉ) ಪ್ರತಿಯಲ್ಲಿಲ್ಲ.

*ಹಳಚಿ ಮುಱಿದುದು ಮುಂದಣ ಮೋಹರ ರಾಮ
ನ[1]ಳವಿಗೆ[1]ಡದೆ ಮೇಲ್ವಾಯ್ದು
ತುಳುಕಿದನಾ ರಾಜಪುತ್ರರ ಸೇನಾ
ಜಲಧಿಯನಾ ಕಳನೊಳಗೆ ೭೧

ಗಣನಾತೀತಗಜಂಗಳು ಸಿಂಹವ
ಕೆಣಕುವಂತಾ ರಾಜಸುತರು
ರಣದೊಳು ರಾಮನ ಮೇಲೆ ತಿವಿದು ಸುರ
ಗಣಿಕೆಯರನು ಕೆಣಕಿದರು ೭೨

*ಜಲರಾಶಿಯ ಜಲವೆಯ್ತಂದು ವಡಬಾ
ನಲನ ಮೇಲಿಕ್ಕುವಂದ[2]ದೊಳು[2]
ಕಲಿಗಳು ಕವಿದು ರಾಮನ ಮೇಲೆ ನಾಕದ
ಬೆಲೆವೆಣ್ಗಳ ಬೆರಸಿದರು ೭೩

*ಗಗನದ ಮೇಲೊಲೆದಾಡುವುದೆನ[3]ಗೀ[3]
ಯುಗಧರ್ಮವಲ್ಲೆಂದು ತಿಳಿದು
ಬಗೆಯದೆ ಭೂಮಿಯಿರವ ನೆನೆದೆಡೆಗೆ ಕಾ
ಲ್ದೆಗೆವುದು ಕುದುರೆ ಕುವರನ ೭೪

*ಸ್ಥಲಜಲನಿಮ್ನೋನ್ನತ ದುರ್ಗಸುಗಮ[4]ಯೆಂ[4]
ಬಿಳಿಯ ವಿಚಾರ[5]ವ[5]ನುಳಿದು
ತೊಳಲಿದುದಾ ಕಳದೊಳು ರಾಮನಾಥನ
ವಿಳಸಿತ ದಿವ್ಯ ತುರಂಗ ೭೫

*ಸುತ್ತಕಟ್ಟುವುದು ಪೌಜುಗಳನೆಲ್ಲವ ಮೆಲ್ಲ
ನೊತ್ತ ಸೇರುವುದು ಕವಿದೊಡೆ
ತೊತ್ತಳದುಳಿವುದು ತೋಱಿದ ಮೋಹರ
ದತ್ತಪರಿವುದಾ ವಾಜಿ ೭೬

---

[1] ಗಳವಿಗೊ (ಅ) ನಳವಿಗೊ (ಎ ಗ) [2] ದಲಿ (ಇ ಎ ಐ) [3] ಗಿದು (ಎ ಗ)
[4] ವೆಂ (ಅ ಇ ಐ) [5] ವು (ಅ ಇ ಐ) * (ಉ) ಪ್ರತಿಯಲ್ಲಿಲ್ಲ.

*ಬಳಸಿಕೊಂಡಾನೆ ಕುದುರೆಯ ಮೋಹರದೊಳು
ಸಿಲಿಕಿದಂತಿಹುದು ವಾಘೆಯುವ
ಇಳುಹಿದೊಡಾ ಮೋಹರದೊಳು ಪೊಕ್ಕುಬೆ
ತುಳಿವುದಾ ವಾಜಿ ರಣದೊಳು ೭೭

ಗರುಡನಂಬುಜನಾಭನ ಹೊತ್ತು ಗಗನ[1]ದೊ
ಳ[1]ರದೊಲೆದಾಡುವಂದದಲಿ
ಪರಿಪರಿಯೇಱಾಟದಿಂದ ಕಣ್ಗೆಸೆದುದಾ
ತುರಗ ರಣಾಂಗಣದೊಳಗೆ ೭೮

ಕಡಿದಾಡುತಿರಲಿತ್ತ ರಾಮನರಸುಮಕ್ಕ
ಳೊಡನೆ ಸಿಂಗಮ ಕಂಪನೃಪನ
ಹಿಡಿವ ತವಕದೊಳೇಱಿದನತ್ತ ರಾ[2]ಯ[2]ನ
ಪಡೆಯಡ್ಡಲಾದುದವನಿಗೆ ೭೯

ಲಾಯಿದೇವನು ಮಾಯಿದೇವನು ಸಾಯಿದೇವ
[3]ಕಾಯಿದೇವಕನೆಂದೆಂಬ[3]
ರಾಯನ[4]ಮೆಯ್ಗಾ[4]ವಲ ಬಲುರಾವುತ
ಪಾಯಕರಿದಿರಾದರವಗೆ ೮೦

ಸಾಲಿಚಂದ್ರನು ಧರ್ಮಚಂದ್ರ ಹರಿಶ್ಚಂದ್ರ
ಶಾಲಿವಾಹನ ಮೇಘಚಂದ್ರ
ಕಾಲಚಂ[5]ದ್ರನು[5]ಚಂದ್ರಸೇನನೆಂದೆಂಬೀ
ಮೇಲವರವನ ತಡೆದರು ೮೧

ನರಸಿಂ[6]ಗು[6] ರಾಮಕುಮಾರ ವಿಕ್ರಮಬಾಹು
ನರವೇತಾಳರೆಂದೆಂಬ
ವರವೀರಭಟರು ರಾಯನ ಹಿಂ[7]ದಿ[7]ಕ್ಕಿ ಬಂ
ದುರವಣಿಸಿದರು ಸಿಂಗಮಗೆ ೮೨

---

[1] ದೊಳಗಿ (ಅ) [2] ಮ (ಐ) [3] ದೇವರಾಯನೆಂದೆಂಬ (ಅ) ಸಾಯಿದೇವ ಕಾಯಿದೇವನೆಂತೆಂಬಾ (ಇ) ಸಾಯಿದೇವನುಮೆಂದೆಂಬ (ಉ) ಕಾಯಿದೇವನೆಂತೆಂಬ (ಎ ಗ) ಕಾಯಿದೇವನುವೆಂದೆಂಬ (ಕ) [4] ಬಲುಗಾ (ಅ) ಮೇಲ್ಗಾ (ಇ) [5] ದ್ರ (ಅ ಇ ಎ ಗ) [6] ಗ (ಉ) [7] ದಕಿ (ಉ ಎ) * (ಉ) ಪ್ರತಿಯಲ್ಲಿಲ್ಲ.

ಕಾಟಣ್ಣ [1]ಕೊಳ್ಳಿಯನಾಗ ಸಂಗಮದೇವ[1]
ಮೀಟಿನ ಭಂಟ ಬಲ್ಲುಗನು
ತೋಟಿಯನೆಸಗಿದರಂದು ರಾಯನ ಕಣ್ಣ
ನೋಟವಿರಲು ತಮ್ಮ ಮೇಲೆ  ೮೩

ತುರುಕ ರಾವುತರೊಡ್ಡಿಯ ರಾವುತರು ಮೆ
ಯ್ಗರೆಯದೆ ರಾಯನ ಮುಂದೆ
ತುರಗವಿಪ್ಪತ್ತು ಸಾವಿರದೊಡ್ಡನಿಱಿಡಾಡಿ
ನರಪತಿಯನು ಮೆಚ್ಚಿಸಿದರು  ೮೪

* ಮತ್ತೆ ಹರಿಯ ಬಿಟ್ಟನು ವೀರರುದ್ರನಿ
ಪ್ಪತ್ತು ಸಾವಿರ ಕುದುರೆಯನು
ಮುತ್ತಿ ಮುಗಿಲಮೋಹರ ರವಿಬಿಂಬವ
ಮುತ್ತುವಂತವನೀಶ್ವರನ  ೮೫

*ಕಡುಗಲಿಗಳ ಕೂಡಿಕೊಂಡಣ್ಣಭೈರವ
ಪೊಡವಿಪತಿಯ ಹಿಂದಕಿಕ್ಕಿ
ಬಿಡದಿದಿರಾದನು ಸಿಂಗಮನೃಪ[2]ನ[2] ಬ
ಲ್ಪಡೆಗೆ ಕೊಂಡಾಡೆ [3]ರಿಪುಗಳು[3]  ೮೬

*ಏಳು ಸಾವಿರ ಕುದುರೆಯ ಕೂಡಿಕೊಂಡು ನೃ
ಪಾಲ ನೋಡಲು ಭೈರವನು
ಕೋಲಾಹಲವ ಮಾಡಿದ ರಿಪುಸೇನಾ
ಜಾಲವನಾ [4]ಸಮ[4]ರದೊಳು  ೮೭

*ಒತ್ತಿ ತಿವಿದು ಹೊ[5]ಕ್ಕು[5] ನೆಲನ ಬಿಡಿಸುವನು
ಮತ್ತೆ ಮುಸುಕಿದೊಡಾನುವನು
ಒತ್ತರಿಸಿದೊಡೆ ತೆಗೆವ ತೆಗೆದನಿತ ಮು
ತ್ತೊ[6]ತ್ತರಿಸುವ[6] ರಿಪುಬಲವ  ೮೮

---

[1] ಸಂಗಮದೇವಕೊಳ್ಳಿಯನಾಗ (ಇ ಉ ಎ ಐ ಗ) [2] ತಿಯ (ಅ ಇ [illegible] ಗ)
[3] ಸಭಟರು (ಕ) [4] ಮೋಹ (ಐ) [5] ಕ್ಕ (ಇ ಎ ಐ ಗ) [6] ತ್ತವನಾ
(ಇ) * (ಉ) ಪ್ರತಿಯಲ್ಲಿಲ್ಲ.

ಕಡಿದಾಡಿ ಸುಭಟರುಭಯಮೋಹರದೊಳು
ಮಡಿಯೆ ರಾವುತ ಸಿಂಗಮನು
ಬಿಡದೆ ಮನ್ನೆಯರ ಮೂದಲಿಸುತ ರಾಯನ
ಪಡೆಯು ಕೆಣಕಿ ಕಲಕಿದನು ೮೯

ಕಂಡನದನು ಚಂಡವಿಕ್ರಮ ಗಂಡರ
ಗಂಡನುದ್ದಂಡರಿಶಾಲ[1]ಭ
ಮಂಡಲಾನಲಕುಂಡಮಂಡಿತಕೀರ್ತಿಕ
ರಂಡ [2]ನಾಖಂಡಲ[2]ತನಯ ೯೦

ರಾಯನ ಮೇಲೆ ಮೋಹರಿಸಿದ ಸಿಂಗಮ
ನಾಯಕ[3]ನುರು[3]ಸೈನ್ಯವನು
ರಾಯಕುವರ ಕಂಡನು ರಣದೊಳು ಜಯ
ಜಾಯಾಪತಿ ವೀರರಾಮ ೯೧

ನುಡಿದ ಪಂಥದ ಮಾತಿಗೆ ಸಿಂಗಮ ಕಂಪ
ಪೊಡವಿಪತಿಯು [4]ಪಿ[4]ಡಿವುದಕೆ
ಪಡೆಯನೆಲ್ಲವ ಕೂಡಿಕೊಂಡು ಪರಿದನೆಂದು
ನುಡಿದನು ರಾಮ ಭಟರಿಗೆ ೯೨

ಅರಸುಮಕ್ಕಳ ಕಾಳಗವನುಳಿದು ರಾಮ
ನರಸಿನ ಮೋಹರದೆಡೆಗೆ
[5]ಪ[5]ರಿಯೆ ಮೂದಲಿಸುತವರು ಬೆಂಬಿಡಿದರು
ವರವೀರಭಟ[6]ನನವ[6]ನನು ೯೩

ರಣದೊಳು ಬೆನ್ನಕೊಟ್ಟೋಡುವುದಿದು ರಾಮ
ಗುಣವೆ ನಿನಗೆ [7]ವೀರಗೆ[7]ನುತ
ಕಣೆಯನುಗುಳಿಸುತ ಸಿಂಗಾಡಿವಿಲ್ಲಿಂದ
ಕೆಣಕುತವರು ಬೆಂಬಿಡಿದರು ೯೪

---

[1] ರ (ಇ ಉ ಎ ಐ ಗ) [2] ಲನಾರಾಯನ (ಎ) ಲನಾರಾಯ (ಗ)
[3] ರನು (ಅಇ) [4] ಹಿ (ಎ) [5] ಹ (ಅ) [6] ರಾಮ (ಉ) [7] ಧೀರನೆ (ಐ)

ಮನ[1]ಕಿಂ[1]ದ ಮುಂ[2]ದೆ[2] ರಾಮನ ವಾರುವ ಪೋಗಿ
ನೆನೆದೆಡೆಯೊಳು [3]ಬಂದು[3] ನಿಲಲು
ಅನುರಾಗರಸದೊಳು ಮೂಡಿ ಮುಳುಗಿದನು
ತನಯನ ಕಂಡು ಕಂಪಿಲನು ೯೫

*ಅಳುರ್ವ [4]ದಾವಾ[4]ನಲನಿಂದುರಿವಡವಿಗೆ
ಮಳೆ ತಲೆದೋ[5]ಱುವಂ[5]ದದಲಿ
ಕಲಹದೊಳಗೆ ಕದಲುವ ನಿಜಬಲಕಂದು
ತಲೆದೋಱಿದನು ವೀರರಾಮ ೯೬

ಹೊಕ್ಕನು ರಾಯನ ಪಾಜನು ರಾಮು [6]ಮೇ
ಲಿಕ್ಕಿ[6] ತಿವಿದು [7]ಪರಬಲವ[7]
ಒಕ್ಕಲಿಕ್ಕಿದನು ಪಿಡಿದು ರಾಯನ ಮುಂ
ದಿಕ್ಕಿದನಾ ಸಿಂಗಮು[8]ನ[8] ೯೭

ಸಿಂಗಮನಾಯಕನನು ರಾಯಗೊಪ್ಪಿಸಿ
ತುಂಗವಿಕ್ರಮ ರಾಮನಾಥ
ಸಂಗರಕಿದಿರಾದನು ಮತ್ತೆ ಮೇಲಮ
ರಾಂಗನೆಯರು ಪರಸಿದರು ೯೮

ಬಲವನೆಲ್ಲವ ಕೂಡಿಕೊಂಡು ಬೆಂಬತ್ತಿದ
ಬಲಯುತ ರಾಜಸುತರಿಗೆ
ಮಲೆತನೇಕಾಂಗದೊಳಗೆ ಭೀಮಕೌರವ
ಬಲ[9]ಕಿದಿರಾಗಿ ನಿಂದಂತೆ[9] ೯೯

ಸೇನೆಯೆಲ್ಲವ ನಮ್ಮ ಮೇಲೆ ಕಳುಪಿ ಮದ
ದಾನೆಯ ಮೇಲೆ ತೆಲುಗನು
ತಾನೊಸೆದಿರ್ದಪನೀ ಬಲದೊಡನೆನ
ಗೇನೆನುತತಿಬೇಗದೊಳು ೧೦೦

---

[1] ದಿಂ (ಐ) ಕ್ಕಿ (ಇ) [2] ಚೆ (ಐ) ಚಿ (ಉ) [3] ಪೋಗಿ (ಇ ಎ ಕ ಗ) ಮುಂದೆ ನಿಲಲು (ಉ) ನಿಂದಿಹುದು (ಐ) [4] ಡಬಾ (ಇ) ಡವಾ (ಎ ಗ) [5] ಱಿದಂ (ಐ) [6] ಮೆಯ್ಯಿಕ್ಕಿ (ಇ ಐ ಕ) [7] ಪಗೆವಡೆಯ (ಇ ಎ ಐ ಕ ಗ) [8] ನು (ಅ) [9] ನಿಂದಂತಾರಾಮ (ಅ) ಕಿದಿರಾಗಿ ನಿಂತಂತೆ (ಇ)
* (ಉ) ಪ್ರತಿಯಲ್ಲಿಲ್ಲ.

ಹರಿಯಬಿಟ್ಟನು ಕುದುರೆಯು ವೀರರುದ್ರನ
ಕರಿಯಿ[1]ರ್ದ[1]ಡೆ[2]ಗಾಗ[2]ರಾಮ
ನರಪತಿ ಸಿಕ್ಕಿದನೆನುತ ಸೇನಾಚಕ್ರ
ಪರಿದುದು ರಾಯನ ಬಳಿಗೆ ೧೦೧

ಕರಿಯು ಮೋಹರದ ನಡುವೆ ಬಿಳಿಯಾನೆಯು
ಶಿರದ ಮೇಲೆಸೆವ ರಾಯನನು
ಕರೆದು ಕರೆದು ಮೂದಲಿಸಿ ನುಡಿದನಿಂತು
ಧುರಧೀರ ರಾಮನಾಜಿಯೊಳು ೧೦೨

ನಳಿನಸಖಾನ್ವಯಸಂಭೂತ ನೀನಿಂತು
ಕಲಹವ ಪುಗದೆ ಭೂಸುರರ
ಕುಲಜರಂತಿರ್ಪುದುಚಿತವೆಯೆಂದವನ ಮೂ
ದಲಿಸಿದನಾ ವೀರರಾಮ ೧೦೩

ಇಳಿ ಕರಿಯನು ಕುಳ್ಳಿರು ಕುದುರೆಯ ಮೇಲೆ
ಕಲಹಕ್ಕೆ ಕಟ್ಟಾಳಾಗು
ಕಳನೇಱಿ ಕೈಮಱೆದಿಂತು ಕುಲವ ನೀರೊ
ಳ[3]ಲೆದು ಬಿಡುವುದಿ[3]ದುಚಿತವೆ ೧೦೪

ಕಲಿ ಸತ್ತು ಹಂದೆ ಬದುಕುವನೆಂದೆಂಬಿದು
ನೆಲೆಯಾದೊಡೆ ರಣದೊಳಗೆ
ತಲೆಗಱೆಯಲ್ಲದೊಡನುವಾಗೆಂದು ಮೂ
ದಲಿಸಿದನಾ [4]ವೀರರಾಮ[4] ೧೦೫

ಕೆಡುವೊಡಲನು ನಚ್ಚಿ ಕೀರ್ತಿಶರೀರವ
ಬಿಡುವರೆ ವೀರರಾದವರು
ಪಡೆಯನೆಲ್ಲವ ಮುಂದಕಿಕ್ಕಿ ಪಿಂಗಡೆಯೊಳ
ಗಡಗಿಹುದಿದು ಬಲ್ಲತನವೆ ೧೦೬

ಬರಬಾರದು ಬವರಕೆ ಬಂದೊಡೆ ಪಿಂ
ತಿರಬಾರದಿದಿರ್ದೊಡೆ ಬೀರ
ಸಿರಿ ನಗುವಳು ಜಯಲಕ್ಷ್ಮಿ ಜಱೆವಳೀ
ಧರಣೀವನಿತೆ ಬಿಡುವಳು ೧೦೭

---

[1] ದ್ದ (ಉ ಐ ಗ) [2] ಗಾ (ಅ ಇ ಐ ಗ) [3] ಗರಿಯಃ (ಉ) ಗದ್ದು ಬಿಡುವು (ಕ) [4] ನರಪತಿಯು (ಕ).

ಕರಿಯ ಮೇಲಿಹುದು ಕಾಂತಾಜನಕಲ್ಲದೆ
ವರವೀರಭಟರಿಗುಚಿತವೆ
ತುರಗವನೇಱೆನಗಿದಿರಾಗು ನಿನ್ನ ಕೈ
ಪರಿಯ ತೋಱಿಸು ನೋಡುವೆನು ೧೦೮

ಎಂದು ಮೂದಲಿಸುತಿರಲು ರಾಮನಾಥನೆ
ಯ್ತಂದು ರುದ್ರಾವನೀಶ್ವರನ
ಮಂದಿಕುದುರೆಯಾನೆ ಮುಸುಕಿತು ಕಂಪಿಲ
ನಂದನನನು [1]ವೋಹರಿಸಿ[1] ೧೦೯

ಹಿರಿ[2]ಯು[2]ಬ್ಬಣವ ತೆಗೆದನು ರಿಪುಬಲವನು
ಹೊರ[3]ಳಿಯೊ[3]ಡೆಯೆ ಸವರಿದನು
ಕರಿತುರಗಗಳ ತುಂಡೇ[4]ಳ[4]ಹೊಯ್ದನು ರಾಮ
ನುರವಣೆಯನು ಪೇಳ್ವೆನೇನ ೧೧೦

ಮುತ್ತಿದ ಮಾರ್ಬಲವನು ಲೌಡಿಯಿಂದ ನು
ಗ್ಗೊತ್ತಿದ ತರವಾರಿಯಿಂದ
ತತ್ತಱದಱಿದನು ಬಲ್ಲೆ[5]ಯ[5]ದಿಂ ತಿವಿ
ದೆತ್ತಿ ಬಿಸುಟನು ರಣದೊಳು ೧೧೧

ಕಡುಗಲಿ ರಾಮನ ಖಡ್ಗದ [6]ಹೊಯ್ಲಿನಿರ[6]
ಕಡಿವಡೆದಿದ್ದಾನೆಗಳ
ನಿಡುಭರಿಕೈಗಳೆಸೆದವು ಪೆರ್ಬಾವಿನ
ಪಡೆಯಂತಾ ರಣದೊಳಗೆ ೧೧೨

ಸತ್ತಾನೆ ಮೊರಡಿಗಳ್ಬಿದ್ದ ಕುದುರೆಗಳ
ಮೊತ್ತ ಕಲ್ಗಳು ಕಾಲಾಳು
ಸುತ್ತುವ ಮೀನಾಗೆ ಪರಿದುದು ತೊಱೆಯಂತೆ
ನೆತ್ತರ ಪೊನಲು ರಣದೊಳು ೧೧೩

---

[1] ಮೂದಲಿಸಿ (ಅ) [2] ಯ (ಅ) [3] ಳೆವೊ (ಅ ಇ ಕ) ಳೆಯೊ (ಎ ಗ)
[4] ಳೆ (ಉ ಎ ಐ ಗ) [5] ಹ (ಉ ಎ ಗ) [6] ಹುಯ್ಲಿನಿಂ (ಅ) ಹೊಯ್ಲಿಂದ
(ಐ).

ಅ[1]ರೆದ[1] ಬಲವನೆಲ್ಲವ ಭೂತಂಗ[2]ಳ[2]
ಹೊರೆ[3]ದ[3] [4]ಮತ್ತಹಿತ[4] ಬಲವನು
ಕರೆ[5]ದ[5] ಕಾಳಗಕೆ ಜಯಸ್ತ್ರೀಯ ಮೊಲೆಯೊಳು
ಬರೆದ ಮಕರಿಕೆಯನವನು ೧೧೪

ಜಱಿದನಹಿತರನು ವಿಕ್ರಮ[6]ದಿಂದ[6] ಮೆ
ಯ್ಮಱಿದನೋಲೆಯಕಾಱಿಕೆಯನು
ಮೆಱಿದನಮರತತಿ ಮೆಚ್ಚೆ ಸಂಗರದೊಳು
ತೊಱಿದನಾ ರಾಮು ಭೀತಿಯನು ೧೧೫

ಎಲ್ಲನೋಡಿ[7]ದೊಡೆ[7] ರಾಮನ ಬೊಬ್ಬೆಯಬ್ಬರ
ವೆಲ್ಲ ನೋಡಿ[8]ದೊಡೆ[8] ರಾಮುಗನ
[9]ಶಲ್ಲೆಹ[9] ಶಕ್ತಿಗ[10]ಳೀಡೆ[10]ಸೆದವು ರಣ
ದಲ್ಲಿ ರಾಮನ ಶೌರ್ಯವೆಂತೊ ೧೧೬

ವೀರರಾಮನ ಸಿಂಹನಾದ ಕುದುರೆಯ ಹೇ
ಷಾರವದಿಂ ರಿಪುಬಲ[11]ದ[11]
ವಾರಣಗಳು ಬೆಂಗೊಟ್ಟೋಡಿದವು [12]ಧುರ[12]
ಧಾರುಣಿಯೊಳು ದೆಸೆದೆಸೆಗೆ ೧೧೭

*[13]ಪೊ[13]ಕ್ಕಡೆಯನು ಪೊಱಿಮಟ್ಟೆಡೆಯನು ಮೇ
ಲಿಕ್ಕಿದೆಡೆಯನೆಮೊಗಳನು
ಇ[14]ಕ್ಕ[14]ದವರಿಗೆ ಕಾಣ್ಬುದಕರಿದೆನೆ ರಾಮು
ಲೆಕ್ಕದ ಭಟನೆ ಧರಣಿಯ ೧೧೮

ಮುಱಿದುದು ಮೋಹರವೆಲ್ಲ ಚೆನ್ನಿಗರಾಮು
ನಿಱಿತಕಗಿದು ರಣದೊಳಗೆ
ನೆಱಿಗಲಿ ರಾಮನ ಭಟರು ಪಿಡಿದರು ಕೈ
ಮಱಿಯದೆ ಕರಿತುರಗಗಳ ೧೧೯

---

[1] ರಿದಾ (ಎ ಐ ಗ) [2] ಳು (ಅ) [3] ದು (ಐ) [4] ಮತ್ತೈತ (ಅ) [5] ದು (ಎ ಗ) [6] ದಿಂ (ಅ ಇ ಉ ಎ ಗ) [7] ದರೆ (ಇ ಎ ಕ ಗ) [8] ದರೆ (ಇ ಎ ಗ) [9] ಶಲ್ಲೆ (ಅ) ಶೆಲ್ಲೆ (ಇ) ಸಲೆ (ಉ) [10] ಳಿದ್ದೆ (ಎ ಗ) [11] ವ (ಅ) [12] ರಣ (ಉ) ಧರ (ಎ ಗ) [13] ಹೊ (ಅ) [14] ಕ್ಕಿ (ಎ ಗ) * (ಉ) ಪ್ರತಿಯಲ್ಲಿಲ್ಲ.

ಇಱಿವುತ ತಱಿವುತ [1]ಕೊಱೆವುತ ಜಱೆವುತ[1]
ನೆಱೆಗಲಿಗಳು ಬೆಂಬತ್ತಿ
ಸೆಱೆವಿಡಿದರು ಮಂದಿ ಕುದುರೆಯೆಲ್ಲವ ತೀರ
ಮುಱಿದುದು ರುದ್ರನ ಸೇನೆ   ೧೨೦

ಮುಱಿಯಲಿಱಿದು ಪಾಳೆಯ ಪರಿಯಂತರ
ಒಱಲಿಸಿ ಧರ್ಮ[2]ಗಹಳೆಯ[2]
ನೆಱೆಗಲಿ ರಾಮ ತಿರುಗಿದನೊಯ್ಯನೆ ತ
ನ್ನಱುವ ಭಟರ ಮೋಹರದೊಳು   ೧೨೧

ಪಿಡಿದಾನೆ ಕುದುರೆ ಕಾಲಾಳನೆಲ್ಲವ ಮುಂದೆ
ನಡೆಯಿಸಿಕೊಂಡು ವಾದ್ಯಗಳ
ನುಡಿಯಿಸಿಕೊಳುತೊಯ್ಯನೆ ಬಂದು ಕಂಪಿಲ
ನಡಿದಳಿರ್ಗಳಿಗೆಱಗಿದನು   ೧೨೨

[3]ತೆಗೆ[3]ದಪ್ಪಿಕೊಂಡು ಸಂತೋಷಾಂಬು[4]ನಿಧಿ[4]ಯೊಳು
[5]ಮಿಗೆ[5] ತೇಂಕಾಡುತಾತ್ಮಜನ
ಮೊಗವ ನಿಟ್ಟಿಸುತ ಮೋಹೋದ್ರೇಕ[6]ದಿಂದ[6]ಕ
ಣ್ಮುಗಿದವು ಕಂಪನೃಪತಿಗೆ   ೧೨೩

ತನಯನನಾ ಕ್ಷಣದೊಳು ಪಡೆದಂತಿರೆ
ತನುವಿನೊಳಗೆ ಪುಳಕಗಳು
ಜನಿಸಿದವಾನಂದಾಶ್ರು ಸೂಸಿದವಂದು
ಜನಪತಿಗಾ ವಿಜಯದೊಳು   ೧೨೪

*ಬೇಕಾದವರಳಿಯದೆ ರಿಪುಬಲವನು
ನೂಕಿದ ಪರಮಹರುಷಕೆ
ನಾಕಾಧಿಪತಿಯ ವಿಭವ ಸರಿಯಲ್ಲ ಪಿ
ನಾಕಿಯಱುವನದಱಿರವ   ೧೨೫

---

1 ಜಱೆವುತ ಕೊಱೆವುತ (ಐ)  2 ಗಾಗೆಗಳ (ಅ)  ಗಾಳೆಯನು (ಎ ಗ) ಗಹಳೆಯನು (ಕ)  3 ಪಿಡಿ (ಅ)  4 ಧಿ (ಅ)  5 ಮುಳುಗಿ (ಅ)  ಮುಳುಗಾಡಿ (ಕ)  6 ದಿಂ (ಅ ಇ ಉ ಎ ಕ ಗ)  * (ಉ) ಪ್ರತಿಯಲ್ಲಿಲ್ಲ.

ನಾನಾವಾದ್ಯಂಗಳ ನುಡಿಗೇಳು[1]ತ[1]
ಮಾನವಪತಿ ಹರುಷ[2]ದಲಿ[2]
ತಾನತಿ[3]ವೇ[3]ಗದಿಂ ಬಂದು ಪೊಕ್ಕನು ಬೀಡ
[4]ನೇ[4]ನೆಂಬೆನವನ ಸಂತಸವ ೧೨೬

ಓಲಗದೊಳು ಬಂದು ಕುಳಿತು ಕಂಪಿಲನರ
ಪಾಲ ಸಿಂಗಮನೃಪತಿಯನು
ಲೀಲೆ ಕೈವಿಗೆ ಕರೆಯಿಸಿಕೊಂಡು ಮೃದುಮಧು
ರಾಲಾಪದಿಂ ನುಡಿಸಿದನು ೧೨೭

ಮೇಲು[5]ಡುಗೊಱೆ[5]ಗೊಟ್ಟು ಸಿಕ್ಕಿದ ಸುಭಟರ
ಜಾಲಸಹಿತ ಸಿಂಗಮನ
ಮೇಲುಗುದುರೆಯನಯ್ವತ್ತನಿತ್ತಾ ನರ
ಪಾಲನೊಸೆದು ಕಳುಪಿದನು ೧೨೮

ಅರುಣೋದಯದೊಳು ನರಪತಿ ಮಗರಾಮು
ವೆರಸು ಸೇನಾಚಕ್ರದೊಡನೆ
ತೆರಳಿದ ನಿಜಪುರದತ್ತ ಸಂತೋಷದ
ಶರಧಿಯೊಳೋಲಾಡುತ್ತ ೧೨೯

ಪುರವ [6]ಪೊ[6]ಕ್ಕನು ಪುರನಾರಿಯರೆತ್ತುವ
ಪರಿಪರಿಯಾರತಿಗಳನು
ಪರಮಹರುಷದಿಂದ ನೋಡುತ ಕಂಪಿಲ
ಧರಣೀಶ್ವರ ಲೀಲೆ ಮಿಗಲು ೧೩೦

ಮನ್ನೆಯರನು ರಾವುತ ಪಾಯಕರನು
ಮನ್ನಣೆಯೆಕ್ಕಟಿಗರನು
ಮನ್ನಿಸಿ ಕರ್ಪುರ ವೀಳ್ಯದಿಂದಾ ರಾಮು
ತನ್ನರಮನೆಗೆ[7]ಯ್ದಿ[7]ದನು ೧೩೧

---

[1] ತೆ (ಅ) [2] ದೊಳು (ಅ) [3] ಬೇ (ಅ) [4] ದೇ (ಅ) [5] ಬುಗೊಡೆ (ಅ) ರುಗೊರೆ (ಇ ಎ ಗ) [6] ಹೊ (ಅ ಎ ಐ ಗ) [7] ನಡ (ಉ).

ಚರಣಕಮಲಗಳಿಗಿರದೆ ಬಂದೆಱಗಿದ
ವರಸುತನನು [1]ತೆಗೆ[1]ದಪ್ಪಿ
ಪರಮಸಂತೋಷಾಂಬು[2]ಧಿ[2]ಯೊಳು ಮುಳುಗಿ ಮೆ
ಯ್ಗರೆದಳಾ ಹರಿಹರದೇವಿ ೧೩೨

ಹದಿನೆಂಟುವರುಷದ ಮಗನನಾ ಕ್ಷಣದೊಳ
ಗುದಯಿಸಿದಂತಾ ಕಾಂತೆ
ಮುದವನೆಯ್ದಿದಳು ಮುದಾಶ್ರುವಿಂ ಭೂಮಿಯು
ಪದಗೊಳಿಸಿದ[3]ಳಾ[3] ಜನನಿ ೧೩೩

ತಾಯ ಕಯ್ಯಿಂ ಕಳುಹಿಸಿಕೊಂಡೊಯ್ಯನಾ
ರಾಯಕುವರನಳ್ತಿ[4]ಯಿಂದ[4]
[5]ವೈಯಾ[5]ರದಿಂ ನಿಜನಿಳಯವೆಯ್ದಿದನು ಪಿ
ಡಾಯ ಕೈಮಿಗಲೆಯ್ತಂದು ೧೩೪

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೆ ನಾಲ್ಕನೆಯ
ವಿದಿತಾಶ್ವಾಸದೊಳೆರಡನೆಯದು ಸಂಧಿ
ಮೃದುಪದಚಯಸಂಬಂಧಿ ೧೩೫

---

[1] ಬಿಗಿಯ (ಉ) [2] ನಿಧಿ (ಇ ಎ) [3] ಳು ಆ (ಅ) [4] ಯೊಳು (ಇ)
[5] ವಾಯಾ (ಅ ಐ) ಒಯಾ (ಎ ಗ) *(ಅ ಎ ಐ ಗ) ಪ್ರತಿಗಳಲ್ಲಿಲ್ಲ.

# ಹದಿನಾರನೆಯ ಸಂಧಿ

## ಕಪಿಲೇಶ್ವರ ಕಾಳಗ

ಬಿ[1]ರು[1]ದಿನ ಜಗಳಕೆ ಕಾಕತೀಶ್ವರ ಕಂಪ
ಧರಣಿಪತಿಯು ಮೇಲೆ ಪೋಗಿ
ಧುರದೊಳು ಮುಱಿದು ಬಂದುದ ಕೇಳಿದನಾ
ಕರಿಪತಿ ಕಪಿಲೇಶ್ವರನು

ಕೇಳಿ ಷೋಡಶಪಾತ್ರೆಗಳೊಳಗಾ ರಾಯ
ನಾಳೋಚಿಸಿದನಿಂತೆಂದು
ತಾಳಬಾರ[2]ದು ಗಡ[2]ರಾಮನುಱುಬೆಯನೀ
ಭೂಲೋಕದ [3]ರಾವುತ[3]ರಿಗೆ

ಖಂಡೆಯ[4]ದಿಂದ[4] ಪೊಯ್ದಡೆ ರಾವುತರು ಕಡಿ
ಖಂಡವಡೆದು ಧ[5]ರಣಿಯೊಳು[5]
ದಿಂಡುಗೆಡೆವರು ಗಡವನ ರಾವುತಿಕೆಯು
ದ್ದಂಡ[6]ತೆಗೆಣೆಯಿಲ್ಲ ಗಡ[6] ೩

ಲಕ್ಕ ಕುದುರೆಯೊ[7]ಳ[7]ಪೊಕ್ಕು ರಾವುತರ ಮೇ
ಲಿಕ್ಕಿ ತಿವಿದು ಸಮರ[8]ದಲಿ[8]
ಒಕ್ಕಲಿಕ್ಕುವ ಗಡ ಕ[9]ಲಿ[9]ಗಳ ಕಡಿದುಣ
ಲಿಕ್ಕುವ ಗಡ ಭೂತಗಳಿಗೆ ೪

ಹೆಸರುಳ್ಳ ರಾವುತರಾ ರಾಮನಾಥನ
ಹೆಸರ ಕೇಳುತ ಕಣ್ಗೆಟ್ಟು
ದೆಸೆದೆಸೆಗೋಡುವರು ಗಡ ರಾಮನ ಶೌರ್ಯ
ದೆಸಕ ಪಿರಿದು ಗಡಿ[10]ಳೆಯೊಳು[10] ೫

---

[1] ರಿ (ಇ ಐ) [2] ದ ದುಗುಡವ (ಅ) [3] ನಾಥ (ಉ) [4] ದಿಂ (ಅ ಐ ಇ ಉ)
[5] ರೆಯೊಳಗೆ (ಅ) [6] ತನವ ಪೇಳ್ವೆನೇನ (ಐ) [7] ಳು (ಐ) [8] ದೊಳು (ಇ ಉ ಎ ಐ)
[9] ರಿ (ಅ ಇ ಉ ಐ) [10] ಯೊಳಗೆ (ಐ).

ಎಂದು ನುಡಿಯೆ ಗಜಪತಿ ವಿದ್ಯಾಧರ
ನೆಂದೆಂಬ ಪಾತ್ರೆ ಕೈ ಮುಗಿದು
ನಿಂದು ನುಡಿದನು ರಾವುತ ಪಾಯಿಕೆಯು ಪಾ
ಡೊಂದಿದ ಬಲುಪಂಥ[1]ಗಳನು[1] ೬

*ತ್ರಿವುಳ ತೆಲ್ಲುಗ ರಾವುತರಡ್ಡಹೊಯ್ಗುಳ
ವಿವರವ ಬಲ್ಲರೆ ನನ್ನ
ಬವರದೊಳಗೆ ರಾಮ[2]ನ ಹೊಯ್ಯೆದೊಡೆ[2]ನನ
ಗವನಿಪ ಮಾಡಿಸಾಜ್ಞೆಯನು ೭

ಕಲ್ಲ ಕಂಭವನಿಕ್ಕಡಿಯಾಗಿ ಪೊ[3]ಯ್ದ[3]ಗೆ
ಬಲ್ಲಿದನೇ ರಾಮನಾಥ
ನಿಲ್ಲದೆನ್ನನು ಬಿಟ್ಟು ನೋಡು ರಾಮನ ಮೆ[4]ಯ್ಯ
ನೆಲ್ಲವ[4] ಕಡಿದೊಟ್ಟುವೆನು ೮

ರಣದೊಳು ರಾಮನಾಥನನಲ್ಲದೆ ಮಿಕ್ಕ
ಬಣಗು ರಾವುತ ಪಾಯಕರನು
ಕೆಣಕಿದೆನಾದೊಡೆ ರಾಯ ಕರುಳ ಬೆನ್ನೊ
ಳೆಣಿಸಿ ತೆಗೆಯಿಸು ಮಾತೇನು ೯

ಎಂದು ವಿದ್ಯಾಧರ ಪಾತ್ರೆ ನುಡಿಯೆ ಬೇಗ
ದಿಂದೆದ್ದು ಳಿದ ಪಾತ್ರೆಗಳು
ಅಂದು ಬಿ[5]ನ್ನವಿ[5]ಸಿದರಾ ಗಜಪತಿಗಿಂ
ತೆಂದು ರಾವುತಿಕೆಯಿರವನು ೧೦

ಖಂಡೆಯವನು[6]ಝುಳಪಿ[6]ಸಲಱಿಯದ ಜಡ
ಗಂಡರ ಪೊ[7]ಯ್ದ[7]ಂತೆನ್ನ
ಕಂಡು ಪೊಯ್ದ[8]ಡೆ[8] [9]ಕಂ[9]ಗಲು ಸಹ ರಾಯನ
ತುಂಡೇಳ [10]ಹೊ[10]ಯ್ವೆ ಚಿತ್ತೈಸು ೧೧

---

[1] ವನು (ಅ ಉ ಎ ಗ) [2] ಹೋಯ್ದು ಹೋದರೆ (ಆ ಇ ಉ) ನಹೊಯ್ಯದಡೆ (ಎ) [3] ಯ್ವ (ಉ ಗ) [4] ಯೆಲ್ಲವ (ಅ) ಯ್ಯನಿಲ್ಲದೆ (ಇ) [5] ನ್ನೈ (ಐ) [6] ಫರಗಿ (ಉ) ಪರಜಿ (ಎ ಗ) ಪರಿಕಿ (ಐ) [7] ಯ್ವ (ಕ) [8] ರೆ (ಆ ಉ ಐ) [9] ತಂ (ಅ ಎ ಗ) [10] ಪೊ (ಇ ಐ) * (ಉ ಐ) ಪ್ರತಿಯಲ್ಲಿಲ್ಲ.

ಎಂದು ಹರಿಶ್ಚಂದ್ರ ಪಾತ್ರೆ ನುಡಿಯೆ [1]ಬೇಗ
ದಿ[1]ಂದ ಶಿರಶ್ಚಂದ್ರನೆಂಬ
ಸಂದವೆಸರ ಪಾತ್ರೆ ರಾಯುಗೆ ಕೈಮುಗಿ
ದಂದು ನುಡಿದನು ಪಂಥವನು ೧೨

[2]ಹಾ[2]ರೆಯುನಿಕ್ಕಡಿಯಾಗಿ ಪೊಯ್ವೆನಗೆ ಕು
ಮಾರರಾಮುಗ ಸಿಕ್ಕಿದೊಡೆ.
ಧಾ[3]ರು[3]ಣೇಶ್ವರ ತುಂಡಿಸೆ ಪೊಯ್ವೆನಲ್ಲದೊ
ಡಾರ[4]ಯ್ಯದಿ[4]ಕ್ಕಿ [5]ಸಾ[5]ಜ್ಞೆಯನು ೧೩

ಎಂದು ನುಡಿಯೆ ಹರಿಶ್ಚಂದ್ರ ವಿಕ್ರಮಬಾಹು
ಯೆಂದೆಂಬ ಪಾತ್ರೆ ವಿಕ್ರಮದ
ಸಂದ ಮಾತುಗಳನಾಡಿದನಾನೆಯೊಡೆಯನ
ಮುಂದೆ ಶೌರ್ಯಾತಿರೇಕದೊಳು ೧೪

ಹಸಿಯು ಗೋಡೆಯ ಕಡಿವಂತೆ ರಾಮನ ಮೆಯ್ಯ
ಕುಸುರಿದಱಿಯದಿರ್ದೊಡೆನ್ನ
ದೆಸೆವಲಿಗೊಡಿಸು ದೇಶಾಧಿಪ ನೀನೆಂ
ದೊಸೆದು ಬಿ[6]ನ್ನವಿ[6]ಸಿದ [7]ನ[7]ವನು ೧೫

ಹುಯ್ಯಲು ಮುಱಿಯೆ ಮರಳದ ಪಂಥ[8]ದ[8] ಬಲು
ಗಯ್ಯ ರಾವುತರು ನುಡಿದರು
ಜೀಯ ಚಿತ್ತೈ[9]ಸೆಮಗಾ[9]ಜ್ಞೆಯ ರಾಮನ
ಹೊಯ್ಯ[10]ದೋಡಿದರಾದೊಡೆಮ್ಮ[10] ೧೬

ಬಳಿಕ ಪೇಳಲು [11]ಗಜ[11]ಪತಿ ರಾಯು ಪಾತ್ರೆಗ
ಳೊಲಿದು ಸನ್ನಾಹ ಭೇರಿ[12]ಗಳ[12]
ತಳುವದೆ ಪೊಯ್ಸಲಂಬರದೊಳು ಮಾರ್ದನಿ
ಮೊಳಗಿದವಾ ಸಮಯದೊಳು ೧೭

---

[1] ಕಡುಪಿ (ಇ ಎ ಐ ಗ) [2] ಹೊ (ಅ ಇ ಐ) [3] ರಿ (ಎ ಗ) [4] ಯ್ದಿ (ಐ) [5] ನಾ (ಅ ಎ ಗ) [6] ನ್ನೈತ್ರಿ [7] ನೋ (ಐ) [8] ವ (ಅ ಇ) [9] ಸಾ (ಅ ಉ) [10] ದೋಡಿದಿರಾದರೆಮ್ಮ (ಅ) ದೇಡಿದಿರಾದೊಡೆಂದು (ಇ) ದೋಡಿದಿರಾದಡೆಂದು (ಉ) ದೋಡಿದಿರಾದರೆಂದು (ಐ) [11] ಜನ (ಐ) [12] ಯುನು (ಐ).

ಕುಲಗಿರಿಶಿಖರದ ದೇವತೆಗಳು ಬೆ[1]ರ್ಚೆ[1]
ಜಲಧಿ ಮೇರೆಯ ಮೀಱಿ ಪೆ[2]ರ್ಚೆ[2]
ತಳ [3]ಹೊಳಗೊಳೆ[3] ತಾರಾಲೋಕಭೇರೀ
ಕುಳ ಮೊಳಗಿದುದು ಬೇಗದೊಳು ೧೮

*ಕರಿಪತಿಯಮಲಯಶೋಲತೆಗಳ ಸುರು
ಚಿರ ಕಂದಗಳೆಂದೆನಿಸುವ
ವರಶಂಖಗಳು ಪುಟ್ಟಿಸಿದುವು ಗಿರಿಕುಂಜ
ದರಿಗಳೊ[4]ಳಗೆ[4] ಮಾರ್ದನಿಯ ೧೯

*ಸುರಲತೆಗಳು ಕೂರ್ತು ಸುರಿವಂತೆ ಮುಗುಳ್ಗಳ
ಸುರಿಯೆ[5] ಲತಾಂಗಿಯರೊಸೆದು
ಇರದೆ ಮುತ್ತಿನ ಸೇಸೆಯನಿಕ್ಕಿದರು ಕೇ
ಕರರುಚಿ[6]ವೆರಸು[6] ಬೇಗದೊಳು ೨೦

*ಹದಿನಾಱು ಚವರವಿಕ್ಕಲು ಪೆರ್ಮೊಲೆ ಕದ
ಕ್ಕದಿಸೆ ಕಮಲನೇತ್ರೆಯರು
ಕದನಲಂಪಟ ಕಪಿಲೇಶ್ವರನೊಯ್ಯನೆ
ಸದನವ ಪೊಱಮಟ್ಟನೊಸೆದು ೨೧

ಸುಜನಜನಾಶೀರ್ವಾದ ಕಿವಿಯನೇಱೆ
ನಿಜ ಬಾಹಾದಂಡವನು
ವಿಜಯಾಂಗನೆಯೇಱಲೇಱಿದನಂದಾ
ಗಜಪತಿ ಪಟ್ಟದಾನೆಯನು ೨೨

ಬಂಟರೆರಡು ಲಕ್ಕ ಜಾತಿತುರಂಗಮ
ವೆಂಟುಸಾವಿರ ಕೂರಾನೆ
ಎಂಟು ನೂಱೊಡನೆಯ್ತರೆ ಗಜಪತಿ ನಿ
ಷ್ಕಂಟಕತೆಯೊ[7]ಳೆ[7]ಯ್ದಿದನು ೨೩

---

[1] ರ್ಚಿ (ಉ ಎ ಐ) [2] ರ್ಚಿ (ಎ ಗ) [3] ಹೊಳಗೊಳೆ (ಅ) ವಳಗೊಳೆ (ಉ) ಹೊಳಗಾಗಿ (ಐ) [4] ಳು (ಅ ಉ ಎ ಗ) [5] ಸರಿಯ (ಅ ಇ ಉ ಐ) [6] ಗೂಡಿ (ಐ) [7] ಳಗೆ (ಎ ಗ) * (ಉ) ಪ್ರತಿಯಲ್ಲಿಲ್ಲ.

ಷೋಡಶಪಾತ್ರೆಗಳೆಡಬಲ[1]ದಲಿ[1] ಬರೆ
ಗಾಡಿಯಿಂ ಗಜಪತಿ ತನ್ನ
ನಾಡ ನೋಡುತ ಬಂದು ಕೃಷ್ಣವೇಣಿಯ ದಾಂಟಿ
ಬೀಡ ಬಿಟ್ಟನು ಬೇಗದೊಳು ೨೪

ಚರರೆಯ್ತಂದಾ ಸುದ್ದಿಯ ಕಂಪಿಲ
ಧರಣಿಪತಿಗೆ ಪೇಳಲವರು -
ಭರದಿಂದ [2]ಪೊಯ್ಸಿ ಸೇನಾಚಕ್ರವೆರಸಾ
ತುರದಿಂದ ತೆರಳಿದನಂದು[2] ೨೫

ಪಿಡಿದುಗ್ರಾಸಿಯನೇಱಿ ತುರಗವನು
ನಡೆನೋಡುತ ದೆಸೆಗಳನು
ನಡೆದನು ನಲವಿಂದ ತನ್ನ ಮೆಯ್ಗಾವಲ
ಪಡೆವೆರಸಾ ರಾಮನಾಥ ೨೬

ಬೆಳುಗೊಡೆ ಭೇರೀರವ ಶಂಖಗಳ ಕಳ
ಕಳ[3]ರವವೆಸೆಯೆ[3] ಕಂಪಿಲನು
ಒಲಿದು ಬಿಟ್ಟನು [4]ಬೀಡ ಪಿನಗೊಂ[4]ಡೆಯ ಪೊಱ
ವೊಳಲೊಳು ಮಗ ರಾಮವೆರ[5]ಸು[5] ೨೭

ಕಣಿವೆಯ ದಾಂಟಿತು ಕಪಿಲೇಶ್ವರನ ದಂಡು
ಎಣಿಸೆ ನಮ್ಮಯ ಮೋಹರಕೆ
ಎಣೆ ಸಾಮಜ ಮಿಗಿಲೆಂದು ಪೇಳಿದರಾ
ಪ್ರಣಿಧಿಗಳಾ ರಾಯನೊಡನೆ ೨೮

ಜವನೊಳು ಸರಿಮಿಗಿಲೆನಿಸುವ ಸುಭಟರ
ನಿವಹವೆಯ್ತರೆ ಕಂಪಿಲನು
ತವಕದಿಂದಿದಿರಾಗಿ ನಡೆದನು ನಿಜತನೂ
ಭವವೆರ[6]ಸಂದು[6] ಲೀಲೆಯೊಳು ೨೯

---

1 ದೊಳು (ಎ ಐ) 2 ಪೊಯಿಸಿ ಭೇರಿಯ ಸೇನಾಚಕ್ರವೆರಸಾ ತುರದಿ ತೆರಳಿದ (ಉ) ಪೊಯಿಸಿ ಬೇರಿಯ ಸೇನಾಚಕ್ರ ವೆರಸಿಯೆಯ್ದಿದನು ಕಂಪಿಲನು (ಐ) 3 ವೆಸೆಯಲು (ಐ) 4 ಪೆನುಗೊಂ (ಅ) ಪಿನಗುಂ (ಇ) ಪಿನುಗುಂ (ಉ) 5 ಸಿ (ಉ ಐ) 6 ಸತಿ (ಇ ಎ ಗ) ಸಿದು (ಐ).

ದುಂದುಭಿಗಳು ಧಂಧಣರೆನುತಿರೆ ಬೇಗ
ದಿಂದ ಕಂಪಿಲಭೂವರನು
ಒಂದು ಯೋಜನದಳತೆಯೊಳಿರೆ ಗಜಪತಿ
ಬಂದು ಬಿಟ್ಟನು ಪಾಳೆಯವ ೩೦

ಮಱುದಿನದೊಳು ರಾಯರಿರ್ವ[1]ರ[1]ನೇಮದಿಂ
ಕುಱಿತೆಡೆಯೊಳು ಪೌಜುಗಳು
ತಱುಬಿದವಂದು ನಾನಾವಾದ್ಯಂಗಳ
ಬಿಱು[2]ಧ್ವ[2]ನಿ ಬಿಡದೆ ಮೊಳ[3]ಗಲು[3] ೩೧

ಎರಡು ಸಾವಿರತೇಜಿಯಯ್ವತ್ತು ಸಾವಿರ
ವರವೀರಭಟರು ಕಾಳಗದ
ಕರಿಯೆಂಟುನೂಱೆಸೆದಿರೆ ಗಜಪತಿಯು ಮೋ
ಹರವೆಸೆದುದು ಕಣ್ಗಳಿಗೆ ೩೨

ತುರಗವೆರಡು ಸಾವಿರ [4]ಕರಿಯಿನ್ನೂಱು
ನರರೈವತ್ತು ಸಾವಿರದಿ[4]
ಧುರಧ[5]ರಣ[5]ಯೊಳು ಕಣ್ಗೆಸೆದುದು ವಿದ್ಯಾ
ಧರಪಾತ್ರೆಯು ಬಲುಪೌಜು ೩೩

ಇಂತು ಪರಾಕ್ರಮಬಾಹು ಶೃಂಗಾರಸಾ
ವಂತರೆಂದೆಂಬ ಪಾತ್ರೆಗಳ
ಮುಂತೆಸೆ[6]ದವು[6] ಪೌಜುಗಳೆರಡದನಂ
ತಿಂತೆಂದು ಪೇ[7]ಳಲೆ[7]ನ್ನಳವೆ* ೩೪

---

[1] ರು (ಗ) [2] ಧ (ಇ) [3] ಗಿದವು (ಉ) [4] ವೈವತ್ತು ಸಾವಿರ ಕಾಲಾಳೆಸೆದಿರಲು (ಅ ಇ ಉ) ವೈವತ್ತುಸಾಸಿರಕಾಲಾಳೆಸೆದಿರಲು (ಗ) [5] ರೆ (ಉ) [6] ದೆದು (ಅ) [7] ಳ್ವರೆ (ಅ ಇ ಉ ಎ ಗ) * ಅನಂತರ (ಐ) ಪ್ರತಿಯಲ್ಲಿ ಮಾತ್ರ ಈ ಪದವಿದೆ:

ಕರಿಪತಿಧುರಧರಣಿಯೊಳು ಪೌಜನೀ
ಪರಿಯೊಳು ಬಲಿಯಲತ್ತತ್ತ
ಧುರಗಲಿ ಕಂಪರಾಜೇಂದ್ರ ತನ್ನಯ ಮೋ
ಹರಕೆ ಸೆಲವನೀಯಲಂದು

ಶೃಂಗಾರಸಾವಂತಪಾತ್ರೆಯ ಪೌಜನ
ಭಂಗ ಕಾಟಣ್ಣ ತಾಗಿದನು
ಪಿಂಗದೆ ವಿದ್ಯಾಧರಪಾತ್ರೆಯ ಪಾ
ಜಿಂಗಡ್ಡಲಾ[1]ದ[1] ಸಂಗಮನು ೩೫

ರಾಹು ಚಂದ್ರನ ತಾಗುವಂತೆ ಪರಾಕ್ರಮ
ಬಾಹು ಪಾತ್ರೆಯ ಮೋಹರವನು
ಕಾಹುರದಿಂ ತಾಗಿದನಣ್ಣಭೈರವ
ನಾಹವಭೂಮಿಯೊಳಂದು ೩೬

ಮೊನೆಗೆ ಮೊನೆಯ ಚಾಚಿ ಕಂಪರಾಜೇಂದ್ರನ
ತನುಜನಾ ವಾರಣಪತಿಯ
ಘನಮೋಹರವನು ಪೊಕ್ಕನು ಕಾಳ್ಗಿಚ್ಚು ಕಾ
ನನವ ಪುಗುವ ತೆಱ[2]ದಿಂದ[2] ೩೭

ಗಿರಿಯ ಮೋಹರವ ಗೀರ್ವಾಣೇಂದ್ರ ಪೊಗುವಂತೆ
ಕರಿಯ ಮೋಹರವ[3]ನಾ[3] ರಾಮ
ಭರದಿಂದ ಪೊಗೆ ಗಜಪತಿಯ ರಾವುತರು ಬಂ
ದಿರ[4]ದ[4]ಡ್ಡಲಾದರವನಿಗೆ ೩೮

ಲವುಡಿಯಿಂದಪ್ಪಳಿಸಿದನು ಖಂಡೆಯದಿಂದ
ಸ[5]ವ[5]ಗ ಸೀಳಾ[6]ಗೆ[6] ಕಡಿದನು
ಜವನಗರಿಗೆ ಕಳು[7]ಪಿ[7]ದನು ಕೃಪಾಣದಿಂ
ದವರನಾ ರಾಮನಾಜಿಯೊಳು ೩೯

ಕಳಿದ ಹೂವಿನ ತೊಡಂಬೆಯನಾ ಬಿಱುಗಾಳಿ
ಸುಳಿದು ಕೆಡಪುವ ತೆಱದೊಳು
ಕಲಹದೊಳಗೆ ಕರಿಪತಿಯ ರಾವುತರನು
ಕಲಕಿದನಾ ರಾಮನಾಥ ೪೦

ಕಾ[8]ಳೆ[8]ಗದೊಳು ಬಂದಡ್ಡಲಾದರ ಕರ
ವಾಳಿಂದ ಪೊಯ್ಯಲಾ ರಾಮ
ಸೀಳೆರಡಿಳೆಗೆ ಬೀಳುವವನೆನಲವನ ಕ
ಟ್ಟಾಳುತನವ[9]ನೇನ[9]ನೆಂಬೆ ೪೧

---

[1] ನು (ಇ) [2] ದಂತೆ (ಇ) [3] ನೀ (ಐ) [4] ಲ (ಅ ಇ ಎ ಐ ಗ) [5] ವಃ (ಅ) [6] ಗಿ (ಅ ಇ ಎ ಗ) [7] ಹಿ (ಐ) [8] ಳ (ಉ ಐ) [9] ನೇ (ಇ ಉ ಎ ಗ).

*ಬಲುರಾವುತರ ಮೈಯೊಳಗೆ ಬ[1]ಲ್ಲೆಹ[1]ವನು
ಬಲಿದನು [2]ಸೆ[2]ಲದ ರಾವುತರ
[3]ಸೆ[3]ಲವನಿಕ್ಕಿದನಂತಕನ ಮೇಲೆ ರಾಮನ
ಬಲುಗಯ್ಯತನವನೇನೆಂಬೆ ೪೨

ಧುರಧರಣಿಯೊಳು ಧುರಂಧರಿಕೆಯೊಳು ಬಂ
ದಿರದೇಱಿದ ರಾವುತರನು
ಎರಡು ತುಂಡಾಗಿ ಪೊಯ್ಯಲು [4]ಕರಿ[4]ಪತಿ ಕಂಡು
[5]ಶಿ[5]ರವನೊ[6]ಲೆದನು[6] [7]ಮ[7]ಚ್ಚಿದನು ೪೩

ಇಟ್ಟ ಗೊರಕೆಯನೆ[8]ದೆಯೊ[8]ಳಾಂತು ಕೊಂಡು ಮೈ
ಬಿಟ್ಟಿಡಲಾ ರಾಮನಾಥ
ನೆಟ್ಟನೆ ನೆಲಕೆ ಬಿದ್ದರು ರಣದೊಳು ಜಗ
ಜಟ್ಟಿರಾವುತರು ಕೆಲಬರು ೪೪

ಲಕ್ಕ ಕುದುರೆಗಡ್ಡಲಾಗಿ ತುರುಕ[9]ರ[9] ಮೇ
ಲಿಕ್ಕಿ ತಿವಿವ ರಾವುತರನು
ಇಕ್ಕಿದನಾಜಿಯೊಳಾ ರಾಮನ ಶೌರ್ಯ
ದುಕ್ಕಂದವ[10]ನೇನ[10]ನೆಂಬೆ ೪೫

*ಹಱಿಹಂಚಾಗೆ ಮಹಾರಾವುತ[11]ರ[11] ಕಂಡು
ನೆಱೆಗಲಿ ಜೋದರುವೆರ[12]ಸು[12]
ಉಱುಬಿದನಾ ಗಜಪತಿ ರಾಮನಾಥನ
ಮುಱಿದು[13]ವೋದು[13]ವ ತವಕದಲಿ ೪೬

*ತಳಸಂಕಲೆ ಪಂಚಘಂಟೆ ತೊಡರು ಬೆನ್ನ
ವಿ[14]ಳಿ[14] [15]ಕೈಪಟ್ಟೆಯವೆಸೆಯೆ[15]
ತಳುವದಾನೆಗಳ ನೂಕಿದ್ಧರಾದ್ಧುರ್ ಜೋದರು
ಕಲಿ ರಾಮನಾಥನ ಮೇಲೆ ೪೭

---

[1] ಯ (ಇ ಉ ಗ) ಲೆಯ (ಎ) [2] ಥ (ಉ) ಸಿ (ಎ) [3] ಸಿ (ಉ) [4] ಗಜ (ಉ) [5] ಸಿ (ಉ) [6] ಲದು (ಉ ಐ ಎ ಗ) [7] ಮ (ಉ ಐ) [8] ಲದೊ (ಉ) ಡೆಯೊ (ಎ) [9] ರು [10] ನೇ (ಗ) [11] ರು (ಇ ಐ ಎ ಗ) [12] ಸಿ (ಇ ಐ) [13] ನೋಡು (ಇ) [14] ಣಿ (ಇ) [15] ಕೈಯಲೆಕ್ಕೆಯ ವೆಸೆಯೆ (ಇ) ಕೈಯರಿಕೆಯ ವೆಸೆಯೆ (ಎ ಗ) ಕಯ್ಯಪತ್ತೆಯವೆರಸಿ (ಐ) * (ಐ) ಪ್ರತಿಯಲ್ಲಿಲ್ಲ.

ಅಂಕುಶಗಳ ಕುಣಿಯಿಸುತ ಬಿಡದೆ ಜೋದ
ರಂಗದಾನೆಯ ಮಸ್ತಕದೊಳು
ಶಂಕೆಯಿಲ್ಲದೆ ನೂಕಿದರು ಕರಿಘಟೆಯ ಮಾ
ಱಂಕದ ರಾಮನ ಮೇಲೆ ೪೮

ಸಿಂಗದ ಶಿಶುವನಾನೆಯು ಜಂಗುಳಿ ಬಂದು
ಪಿಂಗದೆ ಬಳಸಿಕೊಂಬಂತೆ
ಸಂಗರದೊಳು [1]ಸು[1]ತ್ತಿದವು ಗಜಪತಿಯ ಮ
ತಂಗಜವಾ ರಾಮನನು ೪೯

ಗಿರಿಗಳು ಬಂದು ಗೋತ್ರಾರಿಯ ಮುತ್ತುವಂ
ತಿರೆ ಗಜಪತಿಯಾನೆಗಳು
ಧುರಧರಣಿಯೊಳು [2]ಸು[2]ತ್ತಿದವು ಕುಂತಣದೇಶ
ದರಸಿನ ಸುಕುಮಾರನನು ೫೦

*ತುರಗಗಳನು ತೊತ್ತಳದುಳಿವುತ ಪದ
ಚರರ ಹಿಂಗಾಲ್ಗಳ ಹಿಡಿದು
ಧರೆಯೊಳಪ್ಪಳಿಸುತ ಮದದಂತಿಗಳು ಬಂ
ದಿರದೊದಗಿದವು ರಾಮನನು ೫೧

†ಬೆಟ್ಟಗಳೆಯ್ತಂದು ಧರಣಿಯೆಲ್ಲವ ತುಳಿ
ದಟ್ಟುಳಿಯನು ಮಾಡುವಂತೆ
ಮೆಟ್ಟಿ ತುಳಿವುತ ಬಲವನಾನೆಗಳಡ್ಡ
ಗಟ್ಟಿದವಾ ರಾಮನನು ೫೨

[3]ಡೌಡೆ[3]ಯ ದನಿಯ[4]ನಾ[4]ಲಿಸುತೆಡಬಲಗಳ
ನೋಡುತ ಕಾಲಾಳ ಪಿಡಿದು
ಈಡಾಡುತ ದಿಕ್ಕುದಿಕ್ಕಿಗೊದಗಿದವು
ಕೂಡೆ ಕೂರಾನೆಗಳಂದು ೫೩

ಸೂ[5]ನಗಿ[5]ಯಿಂದ ಸುಳಿದು ತಿವಿ[6]ವು[6]ತ ರಿಘ
ಸೇನೆಯ ವೀರಭಟರನು
ಆನದೆ ಬಂದು ಪೊಕ್ಕವು ಕಪಿಲೇಶ್ವರ
ನಾನೆಗಳಾಜಿರಂಗ[7]ದೊಳು[7] ೫೪

---

[1] ಮು (ಐ ಎ ಗ) [2] ಮು (ಉ) [3] ರೌಡಿ (ಅ) [4] ಲಾ (ಅ ಇ ಎ ಗ ಉ) [5] ನಂಗಿ (ಇ ಎ) ನಿಗೆ (ಐ) [6] ಯು (ಅ ಎ ಗ) [7] ವನು (ಐ)
* (ಉ) ನಲ್ಲಿಲ್ಲ † (ಉ ಐ) ಗಳಲ್ಲಿಲ್ಲ.

*ಸರ[1]ಳು[1] ಪೆರ್ಮೞೆ ಸೀಸದೊಡೆದ ಗುಂಡುಗೆಳಾಲಿ
ಪರಲಾನೆ ಕಾರ್ಮುಗಿಲಾಗೆ
ಧರದಿಂದ ಬಂದು ತಾಗಿದರು ಪ್ರಾವಟಿಗರಾ
ಧುರಧರಣಿಯೊಳು ರಾಮನನು ೫೫

‡ಗೊರಕೆ ಸೆ[2]ಲ್ಲೆಯು[2] ಪೆಟಲಂಬಿಟ್ಟಿ[3]ಸೂನೆಗಿ[3]
ಸುರಗಿ ಯರಗಿ ಪಿಂಡಿವಾಳ್[3]
ಪರಶು ಪಟ್ಟೆಯಗಳ ಕಲಿಜೋದರ[4]ಯ್ತಂ[4]
[5]ದಿ[5]ರದೆ ತಾಗಿದರು ರಾಮನನು ೫೬

ಎಡಬಲದೊಳು ಹಿಂ[6]ಪ[6] ಮುಂದೆ ಬಂದಿರದವ
ಗಡಿಸುವಾನೆಗಳ [7]ಸುಂ[7]ಡಿಲನು
ಕಡಿವು ಹರಹಿದನು ಕಲಹಾಂಗಣದೊಳು
ಕಡುಗಲಿ ಕಂಪಿಲಾತ್ಮಜನು ೫೭

ಉಡಿದ ಕೊಂಬುಗಳಿಂದ ಸಿಡಿದ ಪೊಂಬಳೆಗಳಿಂ
ದೊಡೆದ ಮಸ್ತಕಗಳಿಂದೊಡನೆ
ಕೆಡೆದಾನೆಗಳೆಸೆದವು ವಜ್ರಿಯಿಂ ಕಡಿ
ವಡೆದ ಕುಲಾದ್ರಿಗಳಂತೆ ೫೮

ಕಡಿವಡೆದಾನೆಯು [8]ಸುಂ[8]ಡಿಲು ಮೊಗದ ಕ
ನ್ನಡಿಯು ಮುಂದೆಸೆ[9]ದುದಿ[9]ಳೆಯೊಳು
ಪಿಡಿದಿನವೆರಸಾಗಸದಿಂ[10]ದಿಳೆಯೊಳು[10]
ಕೆಡೆದ ರಾಹುವಿವೆಂಬಂತೆ ೫೯

ಕಡಿದ ಕದ್ದಾಳ ಕುಮ್ಮರಿಯಂತೆ ಕಂಸಾರಿ
ಯಡಿಯಿಂದ ಮಡಿದ ಸರ್ಪಗಳ
ಪಡೆಯಂತೆ ಮೆಱೆದುದು ಕಡಿವಡೆದಾನೆಯು
ನಿ[11]ಡುಧ[11]ರಿಕೆಯ್ಗಳಾಜಿಯೊಳು ೬೦

---

[1] ಳ (ಐ) [2] ಲ್ಲೆಹ (ಇ) [3] ಸುರಗಿಪಿರಿಪಿಂಡಿವಾಳಮುಸುಂಡಿ (ಇ ಎ ಗ ಟ) ಮುದ್ಗರ ಸುರಗಿ ಮುಸಲ ಪಿಂಡವಾಳ (ಐ) [4] ಯ್ತಂದು (ಅ ಇ) [5] ಇ (ಅ ಇ) [6] ದು (ಐ) [7] ಸೊಂ (ಇ) [8] ಸೊಂ (ಇ) [9] ದವಿ (ಐ) [10] ದ ಭೂಮಿಗೆ (ಇ ಉ ಎ ಐ) [11] ಡಿಬ (ಇ) * (ಉ ಐ) ಗಳಲ್ಲಿಲ್ಲ ‡ (ಉ) ಪ್ರತಿಯಲ್ಲಿಲ್ಲ.

*ಉರಗಸಮೂಹ ಕಾಳಗವ[1]ನೀಕ್ಷಿ[1]ಸಲೆಂ
ದಿರದೆ ರಸಾತಳದಿಂದ
ಧರಣಿಗೆ ಬಂ[2]ದವೆಂ[2]ದೆನೆ ಬಿದ್ದ ಕರಿಗಳ
[3]ಭ[3]ರಿಕೆಯ್ಗೆಸೆದವಾಜಿಯೊಳು ೬೧

ಕಟ್ಟು[4]ವೊ[4]ಡೆಯೆ ಶರನಿಧಿ ಕೇಳ್ದು ಪವನಜ
ನಿಟ್ಟ ಬೆಟ್ಟಗಳಿವೆಂಬಂತೆ
ದಿಟ್ಟಗೆಸೆದವು ಭಾರತಮಲ್ಲನುಜ ಕಡಿ
ದೊಟ್ಟಿದ ಕರಿಗಳಾಜಿಯೊಳು ೬೨

ಕರಿಘಟೆಗಳು ಕಂಡಕಡೆಗೆ [5]ಕೆದಱಲಾ[5]
[6]ಕರಿ[6]ಪತಿ ನಿಂದು ಕಾದುತಿರೆ
ಧುರದೊಳು [7]ಬಂ[7]ದಡ್ಡಲಾದನು ವಿದ್ಯಾ
ಧರಪಾತ್ರ ರಾಮನಾಥನಿಗೆ ೬೩

$ಪರಿದಾಟ ಬೇಡಿತ್ತ ತಿರುಗು ಕುವರ ನನ್ನ
ಕರದ ಖಂಡೆಯದ ಧಾರೆಯನು
ಪರಿಕಿಸದೆಲ್ಲಗೆ ಪೋ[8]ಪೆ[8]ಯೆನುತ ವಿದ್ಯಾ
ಧರಪಾತ್ರ ತಡೆದ ರಾಮನನು ೬೪

*ಕರಿಗಳು ಪಶುಗಳವನು ಕಡಿದೊಟ್ಟಿದ
ಧುರಗಲಿತನವನು ಬಿಟ್ಟು
ಹರಣದಾಸೆಯನುಳಿದಿದಿರಾಗೆನುತವ
ನಿರದೆ ಮೂದಲಿಸೆ ರಾಮನನು ೬೫

ಹಿರಿಯುಬ್ಬಣವ ತೆಗೆದನು ವೀರವಿದ್ಯಾ
ಧರಪಾತ್ರಯ ನೋಡಿದನು
ತುರಗವ ನೂಕಿ ಪೊಯ್ದನು ರಾಮನವನೊರ್ವ
ನೆರಡಾದನಾಜಿ ರಂಗದೊಳು ೬೬

---

[1] ನಿಟ್ಟಿ (ಅ) [2] ದುದೆಂ (ಇ ಎ ಗ) [3] ಬ (ಇ ಗ) [4] ವ (ಇ ಎ ಉ ಗ) [5] ಕಣ್ಗೆಟ್ಟೋಡೆ (ಅ) ಬೆದರಲಾ (ಐ) [6] ನರ (ಉ) [7] ನಿಂ (ಐ) [8] ದಷೆ (ಅ ಎ ಗ) ದೆ (ಇ) *(ಉ) ಪ್ರತಿಯಲ್ಲಿಲ್ಲ $ (ಐ) ಪ್ರತಿಯಲ್ಲಿಲ್ಲ.

ಹರಣವ[1]ಳಿದನು[1] ವಿದ್ಯಾಧರಪಾತ್ರೆ ಸಂ
ಗರವನೆಸಗಿ ಹರಿಶ್ಚಂದ್ರ
ಸುರಪನಣುಗನ ಕಯ್ಯಿಂ ಕಳುಹಿಸಿಕೊಂಡು
ಸುರನಗರಿಯುನೆಯ್ದಿದನು ೭೭

ವಿಕ್ರಮದಾಹು ಶೃಂಗಾರ ಸಾ[2]ವಂ[2]ತ ಪ
ರಾಕ್ರಮದಾಹುಪಾತ್ರೆಗಳು
ಶಕ್ರನಂದನನ ಕೆಣಕಿ ಸುರಲೋಕವ
ನಾಕ್ರಮಿಸಿದರು ಬೇಗದೊಳು ೭೮

ಹರಿಬದಾಹವಕೆಯ್ತಂದು ಶಿರಶ್ಚಂದ್ರ
[3]ಶಿ[3]ರವನೊಪ್ಪಿ[4]ಸಿದ[4] ರಾಮನಿಗೆ
ತರಣಿಮಂಡಲವ ಭೇದಿಸಿ ಸುರಲೋಕದ
ತರುಣಿಯರೆಡೆಗೆಯ್ದಿದನು ೭೯

ವೀರ ಹಮ್ಮೀರ ದಾಮೋದರ ಪಾತ್ರೆಗ
ಳಾ ರಣರಂಗ[5]ಮಧ್ಯದೊಳು[5]
ವೀರರಾಮನ ಖಡ್ಗದಿಂದ ಮಡಿದು ಸುರ
ನಾರಿಯರೆಡೆಗೆಯ್ದಿದರು ೮೦

ಸೆಡೆದರು ಸೆಲದ ರಾವುತರು ಪಾತ್ರೆಗಳಂದು
[6]ಸಿ[6]ಡಿದರು ಗಜವಾಹಕರು
ಬಿಡದೆ ಬೆಂಗೊಟ್ಟರು ಕಪಿಲೇಶ್ವರನ ಬಲ
ಪಿಡಿದುದು ಬಂದ ದಾರಿಯನು ೮೧

ಮುರಿದ ಬಲವ ಕಾಣುತ ರಾಮನಾಥನ
ನೆರಿಗೆಲಿಗಳು ಪೊಕ್ಕು ತಿವಿದು
ಹರಿಹಂಚ ಮಾಡಿ ಪಿಡಿದರಾನೆ ಕುದುರೆಯ
ನರುವರಾರದರ ಲೆಕ್ಕವನು ೮೨

ಒಂದು ಗಾವುದ ಪರಿಯಂತ ಮುರಿಯಲರಿ
ದಂದು ರಾಮನ ಪರಿವಾರ
ಬಂದುದು ಧರ್ಮಗಹಳೆಯ ಕೋಳಾಹಳ
ದಿಂದ ಕುಮಾರನಿದ್ದೆಡೆಗೆ ೮೩

---

[1] ನುಳಿಯೆ (ಅ ಇ ಎ ಗ) ನಳಿಯೆ (ಉ) [2] ಮಂ (ಉ) [3] ಸಿ (ಇ ಉ ಗ) [4] ಸಿ (ಇ ಎ) [5] ಭೂಮಿಯಲ್ಲಿ (ಐ) [6] ಪಿ (ಅ).

ಕರಿಪತಿಯಾನು ಕಲಹದೊಳು ಮುಱಿಯಲಿಱಿ
ದಿರದೆ ಕಂಪಿಲಭೂವರನು
ಪರಮಹರುಷ[1]ದಿಂದ[1] ಪುತ್ರ[2]ಸಹಿತ[3] ಬಂದು
ಪುರವ [3]ಪೊ[3]ಕ್ಕನು ಲೀಲೆ [4]ಮಿಗಲು[4] ೭೪

ತನಯನ ಮೊಗವ [5]ಕಾಣುತ[5] ಹರಿಹರದೇವಿ
ಘನಹರುಷಾಂಬುನಿಧಿಯೊಳು
ಮನವನಾಳಿಸಿದಳಾನಂದಾಶ್ರುಜಲದಿಂದ
ತನುವ ಮುಳುಗಿಸಿದಳವಳು ೭೫

*ಇದು ಪರದಾರಸೋದರರಾಮನಾಥನ
ಪದಕೃತಿಯೊಳಗೆ ನಾಲ್ಕನೆಯ
ವಿದಿತಾಶ್ವಾಸದೊಳ್ಮೂಱನೆಯದು ಸಂಧಿ
ಮೃದುಪದಚಯಸಂಬಂಧಿ ೭೬

$ಇದು ಯದುಕುಲಾವಮಾತ್ಯವಂಶದೊಳಗುದಯಿಸಿದ
ಸದಮಲಯಶೋವಿರಾಜಿತ ವಿಜಯನೃಪತನುಜ
ವಿದಿತ ವಿತರಣ ವಿನಯ ವಿಕ್ರಮವಿಭಾಸಿಯೆಂದೆನಿಪ ಮಾಧವನಾಮನ
ಉದರಾಬ್ಧಿಭವಚಂದ್ರ ನಂಜುಂಡನೊಲಿದೊರೆದ
ಕದನಕಲಿಕಾಲಕಪಿಕೇತು ಕಲಿ ಶುಚಿ ರಾಮ [೭೭
ನುದಿತಕೃತಿಬಂಧದೊಳು ಮೃದುಪದನ್ಯಾಸದೊಳಗಾಶ್ವಾಸ ನಾಲ್ಕನೆಯದು

———

[1] ದೊಳು (ಇ ಉ ಎ ಐ ಗ) [2] ಪರಸಿ (ಉ) [3] ಹೊ (ಅ ಇ ಎ ಐ ಗ) [4] ಮಿಗಿಲು (ಅ ಎ ಗ) ಯೊಳು (ಉ) [5] ನೋಡಿ (ಎ ಗ) * (ಅ ಎ ಐ ಗ ಚ ಟ) ಪ್ರತಿಗಳಲ್ಲಿಲ್ಲ $ (ಉ ಐ) ಪ್ರತಿಗಳಲ್ಲಿ ಮಾತ್ರ ಇದೆ.

# ಪಂಚಮಾಶ್ವಾಸ

(ಒಂದನೆಯ ಸಂಧಿ)

## ಹದಿನೇಳನೆಯ ಸಂಧಿ

### ಡಿಳ್ಳಿಯ ಸುರುತಾಳ

ಶ್ರೀಯುತನಾಶಾಪೂರಿತಕೀರ್ತಿನಿ
ಕಾಯನವಮಲಗುಣಭಾಸಿ
ಕಾಯಜರೂಪ ವಿನಯವಿತರಣ ಕವು
ನೀಯನೆಸೆದನು ಕಂಪಿಲನು ೧

ಕಾಮನಿಂದಾ ಕಮಲಾ[1]ಕಾಂತ ಬುಧನಿಂದ
ಸೋಮ[1] ಜಯಂತನಿಂದಿಂದ್ರ
ರಾಮನಿಂ ದಶರಥನೆಸೆ[2]ದಂ[2]ತೆಸೆದನಾ
ರಾಮನಿಂ ಕಂ[3]ಪರಾಜೇಂದ್ರ[3] ೨

ಕೊಡುವೆಡೆಯೊಳು ಕಲ್ಪತರು ಕಾಮಧೇನುಗ
ಳೊಡನೆ ಮ[4]ಚ್ಚ[4]ರಿಸುತ ಜನದ
ಕಡು[5]ವೆ[5]ಳ್ವಿನಿಂ ಚಲ್ಲವಾಡುತ ಚಂದಿರ
ನೊಡನೆಸೆದನು ಕಂಪನೃಪತಿ ೩

ಗಂಭೀರತೆಗೆ ಮುನ್ನೀರೈಶ್ವರ್ಯಕೆ
ಜಂಭಾರಾತಿ ಸ್ಮರಣೆಗೆ
ಕುಂಭಿನಿ ಸರಿಯಲ್ಲದೆ ಕಂಪಿಲಗೆ ಮಿಕ್ಕ
[6]ಡಂಭ[6]ಕನೃಪರು ಪಾಸಟಿಯೆ ೪

ಹಿಂದಣ ನಳ ನಹುಷಾದಿಗಳಿಗೆ ದೊರೆ
ಯೆಂದೆನಿಸುತ್ತ ಗುಣದಿಂದ
ನಂದನನೊಡಗೂಡಿ ರಾಜ್ಯವಾಳುತ ಸುಖ
ದಿಂದಿರ[7]ಲ[7]ತ್ತ ಕಂಪಿಲನು ೫

---

[1] ಕ್ಷ ಷಣ್ಮುಖನಿಂ ಕಾಮಾರಿ (ಎ ಗ) [2] ವಂ (ಉ ಎ ಐ ಕ ಗ) [3] ಪಿಲ ನೃಪತಿ (ಕ) [4] ತ್ಸ (ಉ ಐ) [5] ಬೆ (ಐ ಗ) [6] ಡಂಬ (ಉ ಐ) ದಂಬ (ಅ ಇ) [7] ಲ (ಇ).

ಅತ್ತ ಹಸ್ತಿ[1]ನ[1]ಪುರ ಡಿಳ್ಳಿಯೆಂಬೀ ಪೆಸ
ರ್ವೆತ್ತು ಹನ್ನೆರಡು ಯೋಜನದ
ಬಿತ್ತರ[2]ವಡೆ[2]ದಳಕಾಪು[3]ರವ[3]ನು [4]ದೆಸೆ[4]
ಗೊತ್ತರಿಸಿದುದು ಚೆಲ್ವಿಂದ ೬

ಮೆಟ್ಟಿದುದುರಗಪುರ[5]ವ[5]ನಳಕೆಯನಱೆ
ಯಟ್ಟಿದುದದು ದೆಸೆ[6]ಗಡೆ[6]ಗೆ
ಮುಟ್ಟಲೀಯದೆ ಮೇಲಕೆ [7]ನೂ[7]ಕಿದುದು ಸುರ
ಪಟ್ಟಣವನು [8]ಚೆ[8]ಲ್ವಿನಿಂದ ೭

ಸುರಲೋಕವಮರಾವತಿ ಪನ್ನಗಲೋಕ
ಕುರುಭೋಗವತಿಯೆಂ[9]ತಂ[9]ತೆ
ಕರವೆಸೆ[10]ದುದು[10] ಡಿಳ್ಳಿವೆಸರಿಂದ ಹಸ್ತಿನಾ
ಪುರ[11]ನ[11]ರಲೋಕಮಧ್ಯ[12]ದೊಳು[12] ೮

ಲೋಕಾಲೋಕವಾ ಪುರದ ಸೊಬಗನವ
ಲೋಕಿಸಲೆಯ್ತಂದುದೆನಲು
ಪ್ರಾಕಾರವೆಸೆದುದು ಪಗಲೊಡೆಯನ ತೇರ
ಸೋಕುತುನ್ನತಿವೆತ್ತು ಕಣ್ಗೆ ೯

ಉರಗಪುರಕೆ ನರರೆಡೆಯಾಡಲೆಂದಾ
ಸರಸಿಜಭವನುಱೆ ಸ[13]ವೆ[13]ದ
ನರಣಿಯೆಂದೆನೆ ಕಣ್ಗೊಳಿಸಿದುದಾ ಪುರ
ವರದಗಳೇನ ಬಣ್ಣಿಪೆನು ೧೦

ಅಟ್ಟಳೆಗಳ ಮೇಲೆ ಸುರರು ವಿಮಾನವ
ಬಿಟ್ಟು ಸುರತಸುಖದಿಂದ
ಪಟ್ಟಿಹರೆನಲಾ ಪುರದ ಸೊಬಗ ಬಾ[14]ಯಿ[14]
ಬಿಟ್ಟು ಪೊಗಳಲೊರ್ವರಳವೆ ೧೧

---

[1] ನಾ (ಕ) [2] ಪೊಡೆ (ಅ ಉ ಎ ಗ) [3] ರಿಯ (ಐ) [4] ಕಡೆ (ಕ) [5] ಮ (ಅ ಇ ಗ) [6] ದೆಸೆ (ಎ ಗ) [7] ನೂಂ (ಉ ಗ) [8] ಚ (ಐ) [9] ಬ (ಐ) [10] ವುದು (ಎ ಕ ಗ) [11] ವ (ಇ ಎ ಗ) [12] ದಲಿ (ಐ) [13] ಮೆ (ಇ ಐ) [14] ಯು (ಅ ಉ ಎ ಗ).

ನಗರಲಕ್ಷ್ಮಿಯ ಪೊಱಕಾವಲ ಮಾರಿಯ
ನೆಗೆದ ಪಲ್ಗಳ ಪಂಕ್ತಿಯಂತೆ
ಮಿಗೆ ಸೊಗಯಿಸಿದವು ಕೋಟೆಯ ತೆನೆಗಳು
ಮುಗಿಲ ಮೋಹರದೊಡವೆರ[1]ಸಿ[1] ೧೨

ತರಣಿ [2]ಶಶಿ[2]ಗಳಾ ಪುರಗೋಪುರವ ಸುರ
ಗಿರಿಯೆಂದು ತಿಳಿದು ಚಿತ್ತ[3]ದೊಳು[3]
ತಿರುಗುತಿಹ[4]ರು[4] ಕೆಲಬಲದೊಳಗೆನಲಾ
ಪುರದ ಸಿರಿಯ[5]ನೇನನೆಂಬೆ[5] ೧೩

*ಇಟ್ಟಣಿಸಿದ ಮೀನನಿಳೆಗೆ ಸೆಳೆವ ಗಾಳ
ಗಟ್ಟಿಗೆಗಳೊ ದೇವತೆಗಳ
ಮುಟ್ಟಿ ತಿವಿವ ಸಬಳಗಳೊ ಯೆಂದೆನಲಲ್ಲ
ನೆಟ್ಟ ಡೆಂಕಣಿಗಳೆಸೆದವು ೧೪

ಪುರವಂಬುಜ ತೆನೆಗ[6]ಳು[6] ತೆಕ್ಕೆ ಯೆಸಳು ಭಾ
ಸುರರಾಜನಿ[7]ಳ[7]ಯಕ[8]ರ್ಣಿ[8]ಕೆಯ
ಇರವಾಗಲಾ ಗಜಪುರಿ ಪುರಲಕ್ಷ್ಮಿಯ
ವರಗೃಹದಂತೆ ಮೆಱೆ[9]ದು[9]ದು ೧೫

ಭಾನುಸನ್ನಿಭತೇಜನಮರಾಧೀಶ ಸ
ಮಾನವಿಭವನುರು [10]ದಾನಿ[10]
ಭೂನುತ ವಿಕ್ರಮನೆಂದೆನಿಸುವಲಾವ
ದೀನನಾ ನಗರಕೊಡೆಯನು ೧೬

ಸುರಪಾಗ್ನಿ ಯಮ ನೈಋತ್ಯ ವರುಣ ವಾಯು
ಹರಸಖ ರುದ್ರರೆಂಬಿವರು
ಇರ[11]ಲಮ್ಮ[11]ದಾ ಸು[12]ರುತಾಳ[12]ನಿದಿ[13]ರೊ[13]ಳು ಮೈ
ಗರೆದರಾಶಾಂತರಾಳದೊಳು ೧೭

---

1 ಸು (ಎ ಗ) 2 ಸಸಿ (ಅ ಇ ಉ ಎ ಗ) 3 ದಲಿ (ಐ) 4 ವು (ಇ) 5 ನೇನೆಂಬೆ (ಉ) 6 ಳ (ಅ ಇ ಎ ಗ) ಳೆ (ಐ) 7 ಳೆ (ಇ ಐ ಗ) 8 ರ್ಣಿ (ಎ ಐ ಕ) 9 ವು (ಕ) 10 ತೇಜ (ಅ) 11 ಲಾಣ್ಮ (ಇ ಗ) ಲಣ್ಮ (ಉ ಕ) 12 ರಿತಾಳ (ಕ) ರುತ್ರಾ (ಐ) 13 ರಿನೊ (ಅ ಇ) * (ಉ) ಪ್ರತಿಯಲ್ಲಿಲ್ಲ.

ಧರೆಯೊಳಿರ್ದೊಡೆ ಸು[1]ರುತಾಳನೆನ್ನೀ[1] ಬಲು
ಸಿರಿಗೆ ಮುನಿಯದಿರನೆಂದು
[2]ಧರಣಿಯೊಳಿರಲಮ್ಮದ[2] ಸಗ್ಗ[3]ವೆಂ[3]ದೆಂಬ
ಗಿರಿದುರ್ಗವೇಱಿದನಿಂದ್ರ ೧೮

*ನೆಲೆಗೊಂಡೊಂದೆಡೆಯೊಳಗಿರಲೆನ್ನೀ
ವಿಲಸಿತ ದಿವ್ಯತುರಗವ
ಸೆಳೆಯದಿರನು ಸು[4]ರುತಾಳ[4]ನೆಂದಿನನಂಜಿ
ತೊಳಲ್ವನಾಗಸದೆಱಪಿನೊಳು ೧೯

ಬಡಗಣ ಭೂವಿಗವಧಿ ಹಿಮಗಿರಿ ಮೂಱು
ಕಡೆಯು ಭೂಮಿಗೆ ಮುನ್ನೀರ
ತಡಿ ಮೇರೆಯೆನಿಸುವ ರಾಜ್ಯವನಾಳುತ
ಪೊಡವಿಪ ಸುರು[5]ತಾಳನಿಹನು[5] ೨೦

ಕರಿ [6]ಹದಿನೈದು[6] ಸಾವಿರ ನೋಡೆ ನವಲಕ್ಕ
ತುರಗ ಪದಾತಿಯು ಲೆಕ್ಕ
ಶರಧಿಯ ಮಳಲ ಲೆಕ್ಕಿಸುವನ ವಹಿಯೊಳು
ಬರೆದದೆ ನಾನದನಱಿಯೆ ೨೧

ಬಲಯುತ ಸುರುತಾಳನ ಧಾಳಿಗೆ ಗಿರಿ
ಜಲ ವನ ದುರ್ಗಸಮೂಹ
ನೆಲಸವ [7]ವಹ[7]ವೆಂದೆನಲಾ ರಾಯಗೆ
ಮಲೆತು ನಿ[8]ಲುವ ರಾಯರುಂಟೆ[8] ೨೨

ಬಾನೊಳಗಣ ತಾರೆಗಳನೆಣಿಸಬಹು
ದಾ ನರಲೋಕಪಾಲಕನ
ಖಾನ ವಜೀರ ಮಲ್ಲಿಕರ ಲೆಕ್ಕಿಸಬಾರ
ದೇನೆಂಬೆನವನ ಸಂಪದವ§ ೨೩

---

1 ರಿತಾಳನು (ಉ) ರುತಾಣನೆನ್ನಯ (ಎ ಗ) ರಿತ್ರಾಣನೆನ್ನೀ (ಐ)
2 ಧರಣಿಯೊಳಿರಲಾಣ್ಮದೆ (ಇ) ಧರೆಯೊಳಗಿರಲಾಣ್ಮದೆ (ಎ ಗ) 3 ವೆ (ಅ ಉ ಎ ಐ ಗ) 4 ತ್ರಾಣ (ಕ) 5 ರಿತಾಣನಿರಲು (ಉ) 6 ಹನ್ನೆರಡು (ಐ)
7 ನಹು (ಉ) 8 ಲವನಿಪರುಂಟೆ (ಇ ಎ ಗ) ಲ್ವರಿರಾಯರುಂಟೆ (ಉ)
* (ಉ) ಪ್ರತಿಯಲ್ಲಿಲ್ಲ. § ಈ ಪದದ ಮುಂದೆ (ಐ) ಪ್ರತಿಯಲ್ಲಿ,

ನೆರೆದ ಪೋಹರದ ಲೆಕ್ಕವ ಪೇಳ್ವರೆ ಸುರ। ಗುರು ಬಂದು ಕರಣಿಕನಾಗಿ।
ಬರೆವಡಶಕ್ಯವೆಂದೆನಲಂತುಂಟಿತುಟೆಂ। ದೊರೆದನದಱ ಲೆಕ್ಕವನು।

—ಎಂದಿದೆ.

ಮದವತಿಯರು ಮಂಜುಳಮೃದು[1]ವಾಣಿ[1]ಯ
ರುದಿತಯವ್ವನಕೋ[2]ಮಲೆ[2]ಯರು
ಹದಿನಾಱು ಸಾವಿರ ಭೋಗ[3]ವನಿತೆ[3]ಯರಾ
ಮದನಸನ್ನಿಭಗೊಪ್ಪುತಿಹರು ೨೪

ಮೂವತ್ತೆರಡು ನಾಟಕಶಾಲೆಯಿಪ್ಪತ್ತು
ಸಾವಿರ ವಾರುವವೆನಲು
ಆವನವನ ಸಿರಿಯನು ಪೇಳ್ವನವನುಱೆ
ಗಾವಿಲನಾಗದೇನಿಹನೆ ೨೫

ಭಾನು[4]ಸಮೋ[4]ಗ್ರತೇಜಸ್ವಿ ವಿಕ್ರಮಷಂ
ಚಾನನ ನೇಮಿಖಾನೆಸರಿನ
ಖಾನ್[5]ನಾ[5] ಸಾರ್ವಭೌಮಗೆ ಸು[6]ರು[6]ತಾಳಗೆ
ಸೇನಾನಿಯಾ[7]ಗೊಪ್ಪು[7]ತಿಹನು ೨೬

ದೇವಗಿರಿಯ ರಾಮದೇವರಾಯನ ಬೆಟ್ಟಿ[8]
ದೇವರಾಯನ ಪಿಡಿತಂದು
ಭೂವರ ಸು[9]ರು[9]ತಾಳಗಿತ್ತ ನೇಮಿಯ [10]ಧಾ[10]ಳಿ
ಗಾವನಿದಿರು ಭೂಮಿಯೊ[11]ಳು[11] ೨೭

ರಾಮೇಶ್ವರಕೆ ತೆರಳಿ ಬಂದು ಮಧುರೆಯ
ಭೂಮೀಶ್ವರ[12]ನ[12]ನು ಪಿಡಿದು
ಆ ಮಧುರೆಯೊಳು ಠಾಣೆಯ[13]ನಿ[13]ಕ್ಕಿದನಾ
ನೇಮಿ ಪರಾಕ್ರಮದಿಂದ ೨೮

ರಣ[14]ತಂ[14]ಬಟವನೇಳೆಂಟು ವರುಷ ಮುತ್ತಿ
ರಣಹಮ್ಮೀರ ಭೂವರನ
ಅಣಿಯೊಳಮರನಗರಿ[15]ಯನೆಯ್ದಿ[15]ಸಿದ ನೇಮಿ
ಗೆಣೆಯೆ ವಿಕ್ರಮ[16]ಕೇಸರಿಗೆ[16] ೨೯

---

[1] ಯಾನೆ (ಅ ಉ ಎ ಒ ಗ) ವಾನೆ (ಇ) [2] ವಿದೆ (ಇ ಉ ಎ ಕ ಗ) [3] ವತಿ (ಅ) [4] ಮಹೋ (ಐ) [5] ನು (ಅ) [6] ರಿ (ಎ ಕ ಗ) [7] ಗಿರು (ಅ ಇ ಉ ಎ ಕ ಗ) [8] ಟ್ಟ (ಅ) ಟ್ಟು (ಉ) [9] ರಿ (ಕ) [10] ದಾ (ಎ ಗ) [11] ಳಗೆ (ಕ) [12] ರ (ಅ ಇ ಎ ಐ ಗ) [13] ವಿ (ಐ) [14] ದ (ಐ) [15] ಗೈದಿ (ಕ) [16] ರಾರುಂಟು (ಉ).

[1]ಚ[1]ಪ್ಪನ್ನದೇಶದ ರಾಯ[2]ರೆಲ್ಲರ ಕಯ್ಯ[2]
ಕಪ್ಪವ ಕೊಂಡು ರಾಯನಿಗೆ
ಒಪ್ಪಿಸುವತಿಬಲ ನೇಮಿಖಾನಗೆ ಸರಿ
ಯಪ್ಪ ಸೇನಾನಿಗಳುಂಟೆ ೩೦

ಸರ್ಪನನಿರದೆ ಗರುಡನೆತ್ತುವಂದದಿ
ಖರ್ಪರದೇಶಾಧಿಪತಿಯ
ದರ್ಪಗೆಡಿಸಿ ಪಿಡಿದಾ ನೇಮಿಮಲ್ಲುಕ
ನಾರ್ಪಿಗೆಣೆಯೆ ಲೋಕದೊಳಗೆ ೩೧

ಮುಗಳೊ[3]ರ್ವ[3]ಳುಂಟಾ ರಾಯಗೆ ಮದನನ
ಬಿಗಿವ [4]ಬಿಲ್ಲಿ[4]ನ [5]ಬಿಂಕವನು[5]
ಮಿಗುವ ಮೃಗಾಕ್ಷಿ ಮೃಗಾಂಕನಿ[6]ಭಾನನೆ[6]
ಮೃಗಮ[7]ದಾ[7]ಮೋದನಿಶ್ವಾಸೆ ೩೨

ಮೊಗವೆಲ್ಲ ಕಣ್ಣು ಕಣ್ಣೆಲ್ಲ ಮೋಹನದೇಳ್ಗೆ
ನಗೆಯೆಲ್ಲ ನನೆಗಣೆಯಾಟ
ಬಗೆಯೆಲ್ಲ ಬೇಟ[8]ದ ಬಯಕೆಯಾ[8]ಗಿರೆ ಕಣ್ಗೆ
ಸೊಗಸಿದಳಾ ರಾಯಕುವರಿ ೩೩

ಅಲರಂಬಿಂದ್ರಿಯಪಂಚಕವಾಗಲಾ
ವಿಲಸಿತಕುಸುಮಕೋದಂಡ
ಲಲನಾರೂಪವನಾಂತುದೆಂದೆನೆ ಕಣ್ಗೆ
ಸಲೆ ಸೊಗಯಿಸಿದ[9]ಳಾ[9] ಕುವರಿ ೩೪

*ಪರಿಮಳಪರಮಾಣುಗಳ ಪುಂಜವ ತಂದು
ಕರುವಿಟ್ಟು ಸುರಕಾಂತೆಯರ
ವರಲಾವಣ್ಯದಿಂದೆಚಿದೊಪ್ಪವಿಟ್ಟಂ
ತಿರೆ ರಾಜಿಸಿದಳಾ ಕುವರಿ ೩೫

---

[1] ಥ (ಅ ಉ) [2] ರ ಕ್ಯೆಯ್ಯಲಿ (ಅ) [3] ಬ್ಬ (ಅ) [4] ಹುಬ್ಬಿ (ಅ ಕ) [5] ವೋಹನವ (ಕ) [6] ಭಾಂಗನೆ (ಕ) [7] ದ (ಉ ಎ ಐ ಕ) [8] ಬೆಡಂಗಾ (ಕ) [9] ಳು (ಅ ಉ) * (ಐ) ಪ್ರತಿಯಲ್ಲಿಲ್ಲ.

ತುಱುಗೆವೆ ನಿಱುಗುರುಳ್ಮಿಱುಪ ಕದಪು ತೋರ
ಪೊಱವಾಱು ಪೊಂ[1]ಬೊ[1]ಗರಿಯನು
ಜಱೆವ ಮುಗು[2]ಳುವೊ[2]ಲೆ ಜಾಣೆಸೆದಿರೆ ಕಣ್ಗೆ
ಮೆಱೆದಳಾ ಸು[3]ರು[3]ತಾಳ[4]ನಣುಗಿ[4] ೩೬

ರತಿಗಲ[5]ಗಣ[5]ಸು ರಂಭೆಗೆ ಸರಿ ಮಿಗಿಲು ಭಾ
ರತಿಗೆ[6]ಕ್ಕೆ[6]ತಕ್ಕೆ ಸುರಪನ
ಸತಿಗೆ ಹೊಯ್ಕಯ್ಯೆನಲಾ ಸು[7]ರು[7]ತಾಳನ
ಸುತೆ ಮೆಱೆದಳು ಚೆಲ್ವಿ[8]ನಿಂದ[8] ೩೭

ನವಯವ್ವನೆಯಾದ ಮಗಳ ಮೊಗವ ನೋಡಿ
ಭುವನಾಧಿಪ ಸು[9]ರು[9]ತಾಳ
ಅವಳಿಗೆ ತಕ್ಕ ವರ[10]ನ[10] ನೋಡಿ ಕಾಣದೆ
ತವೆ ಚಿಂತಿಸಿದನೆದೆ[11]ಯೊಳಗೆ[11] ೩೮

ಇಂತಿ[12]ರಲ[12]ತ್ತ ಸು[13]ರು[13]ತ್ರಾಣಧರಣೀ
ಕಾಂತನಿಂ[14]ದ್ರೈ[14]ಶ್ವರ್ಯ[15]ದಲಿ[15]
ಕಂತುಸನ್ನಿಭ ರಾಮನಾಥನ ಕೀರ್ತಿ ದಿ
ಗಂತರಾಳವ ಮುಸುಕಿದುದು ೩೯

ಕೇಳಿ ಭಟರು ದಿಳ್ಳಿಯಿಂದ ಕಂಪಿಲಭೂ
ಪಾಲಕನೆಡೆಗೆಯ್ತಂದು
ಲೀಲೆಯಿಂ ಕೊಂಡಾಡೆ ಕಲ್ಪಪಾದಪವನು
ಕೂಲವಾದಂತಾಯ್ತವರಿಗೆ ೪೦

ಬಳಿಕ ಭಟರು ರಾಮನಾಥನೋಲಗಕೆ ಬಂ
ದೊಳುನುಡಿಯಿಂದಮೃತವನು
ತ[16]ಳಿ[16]ವುತ ಕೊಂಡಾ[17]ಡಿದರಾ ರಾಮನ[17]
ಕುಲ [18]ಚಲ[18] ಬಿರುದಾವಳಿಯ ೪೧

---

[1] ಬು (ಉ) [2] ಳ್ತೊ (ಉ) [3] ರಿ (ಉ ಕ) [4] ಕುವರಿ (ಐ) [5] ಸಣಗು (ಇ) [6] ಕ್ಕ (ಉ) [7] ರಿ (ಎ ಗ) [8] ನಿಂದೆ (ಅ ಎ ಗ) ಂದ (ಇ) [9] ರಿ (ಉ ಎ ಕ ಗ) [10] ವ (ಅ ಉ) ವನು (ಎ ಕ ಗ) [11] ಯೊಳು (ಇ ಎ ಗ) [12] ರುತಿ (ಅ) [13] ರ (ಅ) ರಿ (ಎ) [14] ದ್ಮೈ (ಕ) ತ್ಮೈ (ಎ ಗ) [15] ದೊಳು (ಇ ಉ ಎ ಕ ಗ) ದೊಳಗೆ (ಐ) [16] ಳೆ (ಎ ಗ) [17] ಡೆ ರಾಮನಾಥನ (ಉ) ಡಿದರಾ ರಾಮನಾಥನ (ಏ) [18] ಧಲ (ಐ ಕ).

ಅಂಗರಾಜಾಂಭೋನಿಧಿವಡಬಾನಲ
ವಂಗನೃಪಾಲ[1]ಮಾ[1]ತಂಗ
ಸಿಂಗ ಕಳಿಂಗ ಭುಜಂಗ ವಿಹಂಗೇಶ
ತುಂಗವಿಕ್ರಮ ಗುಣಸಂಗ † ೪೨

ಇಂತು ಕೊಂಡಾಡಿದ ವಂದಿಜನಗಳಿಗೋ
ರಂತಿತ್ತು ಬಹಳ ಧನವನು
ಚಿಂತಾಮಣಿ ಸುರಧೇನುಗಳಿಗೆ ಬ[2]ಹು[2]
ಚಿಂತೆಯನಿತ್ತನಾ ಕುವರ ೪೩

ಕಳುಹಿಸಿಕೊಂಡು ಪೋಗುತ ಮಾಗಧರು ತ
ಮ್ಮೊಳಗೆ ನುಡಿದ[3]ರಿಂ[3]ತೆಂದು
ಹಲವು ಮಾತೇ[4]ನಿ[4]ನ್ನು ಸು[5]ರುತಾಳ[5]ನ ಸುತೆ
ಯೊಲಿವಳಿವನಿಗೆ ಮೋಹಿಪಳು ೪೪

ಆ ವಧು[6]ಗಿವನ[6] ತಕ್ಕವನಿವನಿಗೆ ತಕ್ಕ
ಳಾ ವಧುವೆಂದು [7]ತಮ್ಮೊಳಗೆ[7]
ಭಾವಿಸಿ ಬರೆಯಿಸಿದರು ರಾಮನಾಥನ
ಭಾವಚಿತ್ರವನೊರ್ವನಿಂದ ೪೫

ಅವರಾ ಭಾವಚಿತ್ರದ ಪಟವನು ತಂದು
ತವಕದಿಂ ನರಲೋಕಪತಿಯು
ಕುವರಿಯ ಕಯ್ಯೊಳು [8]ಕು[8]ಡೆ ಕೇಳಿದಳವ
ಳಿವನಾರೆಂದು ವಂದಿಗಳ ೪೬

---

[1] ಮ (ಅ ಉ ಎ ಗ) [2] ಲು (ಉ) [3] ರು ಇಂ (ಕ) [4] ಕಿ (ಅ) [5] ರುತ್ರಾಣ (ಅ) ರತಾಳ (ಇ) ರಿತಾಳ (ಉ ಕ) [6] ವಿಪಗೆ (ಅ ಚ) ವಿಗೆ (ಎ ಗ) [7] ವಂದಿಗಳು (ಕ) [8] ಕೊ (ಎ ಐ ಕ) † ತರುವಾಯ (ಉ) ಪ್ರತಿಯಲ್ಲಿ ಮಾತ್ರ ಈ ಎರಡು ಪದಗಳು ಬರುತ್ತವೆ :—

ಲಾಳ ಬಂಗಾಳ ಕೊಂಕಣ ಗೌಳ ಗುರ್ಜರ
ಚೋಳ ಬರ್ಬರ ತೌಳ ತುರುಕ
ಧಾಳಿಗಂಜದ ರಿಪುಗಜಸಿಂಹ ನೀ ಸ್ಥಿರ
ಬಾಳೆಂದವರು ಪರಸಿದರು

ಮೂವಟು ರಾಯರ ಗಂಡ ರಣದೊಳೋಡಿ
ಜೀವಿಪರಸುಗಳ ಗಂಡ
ಕೋವಿದ ಕುಶಲಕಲಾವಿದ ನೀ ಸ್ಥಿರ
ಜೀವಿಸೆನುತ ಪೊಗಳಿದರು

[1]ಹೇ[1]ಳಿದರವರು ಕ[2]ರ್ನಾ[2]ಟಕದೇಶವ
ನಾಳುವರಸಿನ ಕುಮಾರ
ಭೂಲೋಕ ಮದನಾವತಾರನಿವನು ಕೇಳು
ಲೋಲಾಕ್ಷಿ ರಾಮನೆಂಬುವನು ೪೭

*ಎನೆ ಭವಬದ್ಧಮೋಹೋದ್ರೇಕದಿಂದವ
ನನುಪಿನ ಭಾವಚಿತ್ರವನು
ಮನ[3]ವೊಲದಿ[3]ಟ್ಟಿಸಿ ಮನಸಿಜತಾಪದಿಂ
ತನುವ ಮಱೆದಳಾ ಕುವರಿ ೪೮

ಮುನ್ನಿನ ಜನ್ಮಾಂತರದಳ್ಕಱಿಂದಾ
ಕ[4]ನ್ನೆ[4]ಯಾ ಚಿತ್ರವ ಕಂಡು
ತನ್ನ ತಾ ಮೈಮಱೆ[5]ದ[5]ಳು ಮೋಹ[6]ನ[6] ಮೂರ್ಛೆ
ಯಿಂ ನುಡಿಗಟ್ಟಳೇನೆಂಬೆ ೪೯

ಬರೆ ಪ[7]ಟ[7] [8]ಪೂರ್ವಜನ್ಮದ[8] ಪುರುಷನ ಕಂ[9]ಡ[9]
ತರುಣಿ[10]ಗೆ[10] ದ್ರುಪದನಂದನೆಗೆ
ಸ್ಮರಪರಿತಾಪ ವೆಗ್ಗಳಿಸಿತು ಜನ್ಮಾಂ
ತರದನುಬಂಧ ಸದರವೆ ೫೦

ಬರೆ ಪ[11]ಟ[11] ಪುರುಷನ ರೂಪುಗಂಡವಳಿಂತು
ಪರವಶೆಯಾದಳೆಂದೆಂಬ
ಪರಿ[12]ಯಿ[12]ದು ಪುಸಿಯೆನಬೇಡಾ ಕಥನವ
ನೊರೆವೆ ಲಾಲಿಪುದು ರಸಿಕರು ೫೧

ಹಿಂದೀಶ್ವರಶಾಪದಿಂದೈವರ ಭೋಗಿ
ಪಂದು ದ್ರುಪದನಂದನೆಗೆ
ಬಂದಿಹುದತಿಮೋಹ ಪಾರ್ಥನ ಮೇಲದ
ಱಿಂದಾದುದವಳಿಗಾ ವಿರಹ ೫೨

---

[1] ಪೇ (ಉ ಎ) [2] ರ್ಣಾ (ಅ) [3] ದೊಳಿ (ಐ) [4] ಚೆನ್ನೆ (ಉ) [5] ದವ (ಅ ಇ ಉ ಎ ಗ ಚ ಟ) [6] ದ (ಐ) [7] ದ (ಉ ಎ ಐ ಗ ಟ) [8] ಜನ್ಮಪೂರ್ವದ (ಎ ಗ ಚ ಟ) [9] ಡು (ಅ) [10] ಗಾ (ಐ) [11] ದ (ಉ ಎ ಐ ಗ) [12] ಯಿಂ (ಐ) * (ಎ ಗ) ಪ್ರತಿಗಳಲ್ಲಿಲ್ಲ.

ನರನ ಮೇಲಣ ಮೋಹದಿಂದಾಕೆ ನಾನಾ
ಪರಿಯು ಜನನದೊಳೆಯ್ತಂದು
ಸು[1]ರು[1]ತಾಳಗೆ ಮಗಳಾಗಿ ಪುಟ್ಟಿದಳವಳ
ಲರಂಬು ರೂಪುಗೊಂಡಂತೆ ೫೩

ಹಿಂದಣ ಜನ್ಮದ ಜೀವಕಾಂತನ ರೂಪಿ
ನಂದದ ಭಾವಚಿತ್ರವನು
ಇಂದುವದನೆ ಸುರುತಾಳನ ಸುತೆ ಕಂಡು
ಸಂದ[2]ಳು ಪಾರವಶ್ಯಕ್ಕೆ[2] ೫೪

ಶಿಶಿರೋಪಚಾ[3]ರ[3]ಗಳಿಂದಾಕೆಯ ಪರ
ವಶತೆಯು ತಿಳುಪಿ ಸಖಿಯರು
ಕುಶಲವಚನದಿಂದ ನರಲೋಕಪಾಲಗಾ
ಶಶಿಮುಖಿಯಿರವ ಪೇಳಿದರು ೫೫

ತಂದವರಾರು ಪಟವನದನದಱೊಳ
ಗೊಂದಿದ ರೂಪಾರದೆಂದು
ಮಂದ[4]ಹಾ[4]ಸನದಿಂದ ಸುರುತಾಳನಾ ಸಖಿ
ವೃಂದವ [5]ನಿರದೆ[5] ಕೇಳಿದನು ೫೬

ಒರೆದರವರು ಕುಂತ[6]ಣ[6]ದೇಶಾಧೀ
ಶ್ವರ ಕಂಪಿಲನೆಂಬರಸಿನ
ವರಸುತ ರಾಮನೆಂಬನ ರೂ[7]ಪುಗಂಡ[7]ದ
ನಿರದೆ ತಂದರು ಭಟ್ಟರೆಂದು ೫೭

ಆ ಪಟವನು ತಂದವರ [8]ಮುಖದಿಂ[8]ದಾ
ಭೂಪನಾ ಕಂಪಿಲಸುತನ
ರೂಪು ಲಾವಣ್ಯ ವಿಲಾಸ ಯವ್ವನವ ನಾ
ನಾ ಪರಿಯಿಂದ ಕೇಳಿದನು ೫೮

---

[1] ರಿ (ಉ) ರ (ಗ) [2] ಳ ಪಾರವೈಸ್ಯಕ್ಕೆ (ಅ ಕ) ಳಃ ಪಾರವಾಶ್ಯಕೆ (ಎ ಗ) [3] ರಂ (ಅ) [4] ಹ (ಇ) [5] ನೊಲಿದು (ಎ ಕ ಗ) [6] ಳ (ಐ) [7] ವ ಗಡ (ಅ ಉ) ಪು ಗಡ (ಎ ಗ) [8] ಕಯ್ಯಿಂ (ಅ ಇ ಉ ಎ ಕ ಗ).

ಆವನ ವಿಕ್ರಮ ವಿತರಣ ವೀರ ವಿದ್ಯಾ
ನಿವಹವನಾ ವಂದಿಗಳು
ಸವಿದಟ್ಟೆ ಕಿವಿಗೆ [1]ಪೇಳಿ[1]ದರು ಸು[2]ರುತ್ರಾಣ[2]
ನವರಿಗಿತ್ತುಡುಗೊಱೆಗಳನು ೪೯

ಬಳಿಕ ಮಗಳ ಕರೆಯಿಸಿಕೊಂಡು ಸುರುತಾಳ
ತಲೆದಡವುತ ರಾಮನನು
ತಳು[3]ವಿಲ್ಲ[3]ದೆ ಬರಿಸು[4]ವೆನು[4]ಚಿಂತೆಯ ಬಿಡೆಂ
ದೊಳುನುಡಿಯಿಂ [5]ತಿಳುಪಿ[5]ದನು ೫೦

ಕರೆಯಿಸಿ ರಾಯಭಾರಿಗಳನಾ ಸುರುತಾಳ
ಬರೆಯಿಸಿ ಕಾಗ[6]ಜ[6]ಗಳನು
ಭರದಿಂದ ಕಂಪಿಲನೃಪತಿಯ ಬಳಿಗಾ
ದರ ಮಿಗೆ ಕಳುಪಿದನಂದು ೫೧

ಸುರುತಾಳನ ಕಾಗ[6]ಜ[6]ವ ತಂದವರಾ
ದರ[7]ದಿಂದ[7] ಕಂಪನೃಪತಿಯು
ಕರದೊಳು [8]ಕು[8]ಡಲವ ಮಂತ್ರಿಯು ಹಸ್ತದೊ
ಳಿರಿಸಿದನಾ ಮಂತ್ರಿಯುದನು ೫೨

ಭರದಿಂದ ರಾಯಸದವನ ಕೈಯೊಳು [9]ಕು[9]ಡ
ಲಿರದವನಾ ರಾಯಸವನು
ಪರಿವಿಡಿದಪ್ಪದೆಡಹದೆ ತಡೆಯದೆ [10]ಕದ್ದು[10]
ಗರೆಯ[11]ನೋದುವವೊಲೋದಿದನು[11] ೫೩

ನರಲೋಕದೇವೇಂದ್ರ ಸುರುತಾಳ ಕಂಪಿಲ
ಗಿರದಟ್ಟಿ ಕಳು[12]ಹಿದ[12] ಕಾರ್ಯ
ಎರವಿಲ್ಲದಿರಬೇಕು [13]ನಿನಗೆ ನಮಗೆ[13]ನಮ್ಮ
ವರವಚನವನುಲ್ಲಂಘಿಸದೆ ೫೪

---

[1] ಕೇಳಿಸಿ (ಐ) [2] ರಿತಾಳ (ಕ) ರಿತ್ರಾಣ (ಗ) [3] ವ (ಎ ಗ) [4] ಷೆ (ಅ ಇ) [5] ದ ನುಡಿ (ಐ) [6] ದ (ಇ) [7] ಮಿಗೆ (ಉ ಖ) [8] ಕೊ (ಉ ಐ ಕ) [9] ಕೊ (ಐ ಕ) [10] ಮೊಯ್ (ಐ) [11] ಲೋದಿದ ಕಾಗಜವನು (ಎ ಗ) [12] ಪಿ (ಇ ಉ ಎ ಐ) [13] ನಮಗೆ ನಿಮಗೆ (ಅ).

ನಿನ್ನಕುಮಾರ ರಾಮನ ಕ[1]ಳುಪುವುದೆಮ್ಮ[1]
ಕನ್ನೆಯ[2]ನವನಿ[2]ಗಿತ್ತಪೆವು
ನನ್ನಿಯೀ ಮಾತು ಸದಾಶಿವನಾಣೆ ಕೇಳ್
ನಿನ್ನ ಸಂಬಳಕೆ ರಾಜ್ಯವನು ೬೫

ಕೊಟ್ಟೆನು ಬಿ[3]ದಿ[3]ರೆಯ ಕೊಟ್ಟೆನು ಸಗರವ
ಕೊಟ್ಟೆನು ನಿಂಬಾಪುರವ
ಕೊಟ್ಟೆನು ಜಂಬು[4]ಖಂ[4]ಡಿ[5]ಯನು[5] ರಾಯಚೂರನು
ಕೊಟ್ಟೆನಿಕ್ಕಿಪುದು ತೋರಣವ ೬೬

ನಿನ್ನ ಮಗನಿಗೆಮ್ಮ [6]ಭಾಗ್ಯವ[6]ಲ್ಲವ ಕೊಟ್ಟು
ಚೆನ್ನಾಗಿ ನಡೆಯಿಸಿಕೊಂಬೆ
ಇನ್ನಿದಕೆಣಿಕೆ [7]ನಿನಗೆ ಬೇಡವೆಂದವ[7]
[8]ನುನ್ನೈ[8]ಸಿದನು ಕಾಗ[9]ಜ[9]ವನು ೬೭

ಕೇಳಿದನಾ ಲೇಖನಾರ್ಥವ ಕಂಪಭೂ
ಪಾಲನಿದೊಂದು ನೆವದೊಳು
ಆಳಾಗಿಸಿಕೊಂಬ ಬಗೆ ನಮ್ಮನೆಸುರನೆಂ
ದಾಳೋಚಿಸಿದನೆದೆಯೊ[10]ಳು[10] ೬೮

ರಾಯಸವನು ತಂದ ರಾಯಧಾರಿಗಳ[11]ಗೆ[11]
ರಾಯನಿತ್ತುಡುಗೊಱೆಗಳನು
ಶ್ರೀಯುತರನು ಮಾಡಿ ಮೊಗ ನೋ[12]ಡುತ[12]ವರೊಡ
[13]ನೋಯಾರ[13]ದಿಂದ ನುಡಿದನು ೬೯

ತರುಣ[14]ನಮ್ಮ[14]ನು ಬಿಟ್ಟು ಪರದೇಶದೊಳು ತರ
ಹರಿಸಬಲ್ಲನೆ ತಮ್ಮ ತಾಯ
ಹೊರೆಯನಗಲಿ ಹೊತ್ತುಗಳೆಯಬಲ್ಲನೆಯುದ
ಱಿರವ ನೀವೇನಱಿಯದುದೆ ೭೦

---

[1] ಳಿಪುದೆಮ್ಮ (ಎ) ಳುಪುದೆಮ್ಮ (ಅ) ಳುಪಿದೊಡೆಮ್ಮ (ಉ) [2] ವನಿ (ಅ ಐ) ನವ (ಆ ಇ) [3] ದು (ಉ ಕ) [4] ಕಂ (ಐ) [5] ಯ (ಅ ಐ ಕ) [6] ರಾಜ್ಯವೆ (ಅ ಉ) ರಾಜ್ಯವನೆ (ಎ) [7] ಬೇಡಾ ನಿನಗೆಂದವ (ಉ) [8] ಮನ್ನಿ (ಎ ಗ) [9] ದ (ಇ) [10] ಳಗೆ (ಉ) [11] ಗಾ (ಅ ಇ ಉ ಎ ಗ) [12] ಡಿಯ (ಐ) [13] ನೊಯ್ಯರ (ಉ) [14] ನೆಮ್ಮ (ಇ ಎ ಗ) ನೆನ್ನ (ಐ).

ಸುರಪತಿಸಮ ಸು[1]ರು[1]ತಾಳ[2]ಭಾಗ್ಯ[2]ವನಿತ್ತು
ಪೊರೆದಪೆನೆಂದು ಕುವರನ
ಕರೆಯಿಸ[3]ಲಾನಾ[3]ನುವೆನೆ ಕಳು[4]ಪದೆ[4] ರಾಮ
ತ[5]ರಳ[5]ನೆಂತಲ್ಲಿ ಜೀವಿಪನು ೭೧

ಎಂದು ನುಡಿದ ರಾಯನೊಡನೆ ನುಡಿದ[6]ರಿಂ[6]
ತೆಂದವರಿದಿರುತ್ತರವನು
ಮಂದರೊಡನೆ ನುಡಿವಂತೆ [7]ನಮ್ಮೊಳು[7] ಬಾಯ್ಗೆ
ಬಂದಂತೆ ನುಡಿವರೆ ರಾಯ ೭೨

ಕಿಱುಗೂಸಾದೊಡೆ ಬಲ್ಲಾಳ[8]ದೇವ[8]ನ
ಮುಱಿಯಲಿಱಿವನೆ ನಮ್ಮೊಡನೆ
ಮಱೆ ಬೇಡ ಕುವರನ ಕಳುಪಲ್ಲದೊಡೆ ನೀನು
ನೆಱೆ [9]ಸಂವ[9]ರಿಸು ದುರ್ಗವನು ೭೩

ಚಿಕ್ಕವನಾದೊಡೆ ಕಾಕತಿರುದ್ರನ
ಲೆಕ್ಕವಿಲ್ಲದ ಸೇನೆ[10]ಯನು[10]
ಹೊಕ್ಕು ತಿವಿದು ಕಲಕುವನೆ ಕುವರನನೀ
ನುಕ್ಕೆವವನು ಬಿಟ್ಟು ಕಳು[11]ಪು[11] ೭೪

ಸು[12]ರು[12]ತಾಳಕುವರಿಯನಿತ್ತಪೆನೆಂದಾ
ದರ[13]ದೊಳು[13] ಕರೆಯಲಟ್ಟಿ[14]ದೊಡೆ[14]
ಭರದಿಂದ ಕುವರನ ಕಳುಪಿ ಕುಲಾಗತ
ಧರೆಯೊಳಿಹುದು ರಾಜನೀತಿ ೭೫

ಬಹಳ[15]ಭಾಗ್ಯ[15]ವನಿತ್ತು ಸು[16]ರು[16]ತಾಳ ನಿ[17]ಮ್ಮ[17]ನು
ವಹಿಸಿಕೊಂಬನು ಕುವರನನು
ವಹಿಲದಿಂ ಕಳುಪಸುರೇಂದ್ರ ಮು[18]ಳಿದೊಡೆ[18]ನಿ
ರ್ವಹಿಸ[19]ಬಹುದೆ[19] ದುರ್ಗ[20]ದೊಳು[20] ೭೬

---

[1] ರಿ (ಉ ಎ ಕ) [2] ರಾಜ್ಯ (ಐ) [3] ಲಾ (ಉ ಐ ಕ) [4] ಹಲೆ (ಐ) [5] ರುಣ (ಅ ಇ ಉ ಎ ಕ ಗ) [6] ರುಯಿಂ (ಅ ಉ) [7] ಮ್ಮೊಡನೆ (ಅ ಇ ಉ ಎ ಗ ಕ) [8] ರಾಯ (ಉ) [9] ಸಾ (ಅ ಇ) ಸವು (ಎ ಗ) [10] ಯೊಡನೆ (ಐ) [11] ಹು (ಐ) [12] ರಿ (ಉ ಕ) [13] ದಿಂದ (ಅ) [14] ದರೆ (ಇ ಉ ಕ) [15] ರಾಜ್ಯ (ಅ ಇ ಉ ಎ ಗ) [16] ರಿ (ಉ) [17] ನ್ನ (ಐ) [18] ನಿದರೆ (ಅ ಇ) ಳಿವಡೆ (ಎ) [19] ಬಾರದು (ಉ) [20] ದೊಳಗೆ (ಇ ಎ ಉ ಐ ಗ).

ಗೋವರ್ಧನಾದ್ರಿ ವಿಂಧ್ಯಾಚಲ ಚಿತ್ರಕೂ
ಟಾವನೀಧರ ಮಹೇಂದ್ರಗಳ
ಮೂವಳಸಾಗಿ ಮುತ್ತಿದ ನರದೇವೇಂದ್ರ
ಗಾವ ದುರ್ಗಗಳಾಂತಪವು ೭೭

ಸುಂಕದ ಠಾ[1]ಣಯ[1]ವಿಕ್ಕಿಸಿಂಗ[2]ರ[2]ದೊಳು
ಲಂಕೆಗೆ ನಡೆಯಬೇಕೆಂಬ
ಶಂ[3]ಕಾರ[3]ಹಿತ ಸು[4]ರುತ್ರಾಣ[4]ಗೆ [5]ಮಲೆವ ಮಾ[5]
ಱಂಕದ ದುರ್ಗಗಳುಂಟೆ ೭೮

ಎನೆ ನಸುನಗುತ ಕುಂತ[6]ಣ[6]ದೇಶಾಧಿಪ
ನನುನಯದಿಂ [7]ಕರೆದವರ[7]
ಇನಿತೇತಕೆ [8]ನಮ್ಮೊ[8]ಡನೆ ನಿಮ[9]ಗೆಂದತಿ[9]
ವಿನಯೋಕ್ತಿಯಿಂ ಕ[10]ಳುಪಿ[10]ದನು ೭೯

ಕಳುಹಿಸಿಕೊಂಡಾ ರಾಯಭಾರಿಗಳು ತ
ಮ್ಮೊಳಗೆ ಕಂಪಿಲನ ಗುಣವನು
ಸಲೆ ಪೊಗಳುತ ನಾನಾದೇಶಂಗಳ
ಕಳೆದು ಡಿಳ್ಳಿಯನೆಯ್ದಿದರು ೮೦

ಬಂದು ಕಂಡರು ನರಚಕ್ರವರ್ತಿಯ ಮೆ
[11]ಯ್ಗೊಂ[11]ದಿಸಿ ಭೂತಳಾಗ್ರ[12]ದೊಳು[12]
ನಿಂದು ಕೈಮುಗಿದು ಕಂಪಿಲದೇವನೆಂದುದ
ನೊಂದುಳಿಯದೆ ಪೇಳಿದರು ೮೧

ಕೇಳಿ ಸು[13]ರು[13]ತ್ರಾಣ [14]ಮನದೊಳು ದುಗುಡವ[14]
ತಾಳಿ ತನಗೆ ತಕ್ಕುದನು
[15]ಹೇ[15]ಳಿಸುವೆನು ಬೇಗದೊ[16]ಳೆನುತವನಂ[16]
[17]ದಾ[17]ಳೋಚಿಸಿ[18]ದನೆದೆಯೊಳು[18] ೮೨

---

[1] ಣೆಯ (ಇ ಐ ಕ) ಣವ (ಉ) [2] ಳ (ಅ ಇ ಉ ಎ ಗ) [3] ಕರಾ (ಅ) ಕರ (ಇ ಕ ಉ) ಕೆರ (ಎ ಗ) [4] ರಿತಾಳ (ಕ) [5] ಮಾ(ಅ ಉ ಐ ಕ) [6] ಳ (ಐ ಕ [7] ಕರೆದವನ (ಇ) ದವರೊಡನೆ (ಐ) [8] ವ್ಮೊ(ಎ ಗ) ನನ್ನೊ (ಐ) [9] ಗೆ ಎಂದು (ಉ ಕ) [10] ಳುಹಿ (ಕ) ಳಿಪಿ (ಗ) [11] ಯ್ಯೊಂ (ಉ ಎ ಗ) [12] ದಲಿ (ಉ) ವನು (ಇ ಎ ಗ) [13] ರ (ಉ) [14] ನಾಗ ದುಗುಡವನು (ಐ) [15] ಪೇ (ಉ) [16] ಳೆನುತವನಂದು (ಅ ಇ ಉ ಎ ಗ) ಳಂಡವನಂ (ಕ) [17] ಆ (ಅ ಇ ಉ ಎ ಗ) [18] ಮನದೊಳಗೆ (ಇ).

ಮಾಡಿಸಿ ಕಾಕತಿರುದ್ರನ ಕಾರ್ಯವ
ಕೂ[1]ಡಿ[1] ತೆರಳಿಸಿ ಸೇನೆಯನು
ನಾ[2]ಡೆ[2]ಲ್ಲವನಿಱಿದೋಡಿಸಿ [3]ಬೆಟ್ಟ[3]ದ
ಬೀಡ ಬಿಡಿಸುವೆ[4]ನು[4] ತನ್ನ　　೮೩

ಬೆಟ್ಟದ ಬಲ್ಮೆಯಿಂ[5]ದೆ[5]ಮ್ಮ ರಾಯಸವನು
ದಟ್ಟಿಸಿ ಕ[6]ಳೆ[6]ದ ಕಂಪಿಲನ
ಕಟ್ಟಿ ತರಿಸುವೆನೆಂದನಾ ಸು[7]ರು[7]ತಾಳನು
ತೊಟ್ಟನವನ ಮೇ[8]ಲಂದು[8]　　೮೪

ಬಳಿಕ ವಿಚಾರಿಸಿದನು ಕುವರಿಯ ಮುಖ
ನಳಿನ[9]ಕೆ[9] ತರಣಿಯೆನಿಸುವ
ಲಲಿತ [10]ಲಾವಣ್ಯ ವಿಲಾಸ[10] ಸೌಂದರ್ಯಮು
ಳ್ಳಲಘುವಿಕ್ರಮ[11]ನನೊ[11]ರ್ವನನು　　೮೫

ನಾ ಪೊಪ್ಪಿದವನಿಂದೇನು ಕುವರಿ ತನ್ನ
ಭಾವಕೆ ಬಂದ ಪುರುಷನ
ಜೀವೇಶ್ವರನನೊಸೆದು ಮಾಡಿಕೊ[12]ಳಲಿ ಯೆಂ[12]
ದಾ ವಸುಧಾ[13]ಧಿಪ[13]ಬಗೆ[14]ದು[14]　　೮೬

ವರಮಣಿ ಖಚಿತ ಸ್ವಯಂವರಶಾಲೆಯ
ವಿರಚನೆ[15]ಗೆಯ್ಸಿ[15] ಬೇಗ[16]ದೊಳು[16]
ನೆರ[17]ಹಿ[17]ದನಾ ಸು[18]ರು[18]ತಾಳನವನಿಯ ಭೂ
ವರಸುಕುಮಾರಸಂಕುಳವ　　೮೭

ಮಾಳವ ಮಗಧ ಕಳಿಂಗ ಕಾಶ್ಮೀರ ನೇ
ಪಾಳ ಬರ್ಬರ ದೇ[19]ಶ[19]ಗಳ
ಆಳುವರಸುಗಳ ಸುತರ ಬರಿಸಿದನಂ
ದಾಳ ಮೇಲಾಳ ಬಿಟ್ಟೊ[20]ಸೆ[20]ದು　　೮೮

---

[1] ಡೆ (ಇ ಎ ಐ)　[2] ಡನೆ (ಉ ಗ)　[3] ಬಿಟ್ಟು (ಅ)　[4] ನಾ (ಎ ಗ)
[5] ನ (ಐ ಕ)　[6] ಳಿ (ಉ ಐ)　[7] ರಿ (ಉ ಕ)　[8] ಲೆ ಕಾರ್ಯ (ಐ)　[9] ಗೆ (ಐ)
ಕ್ಕೆ (ಗ)　[10] ವಿಲಾಸವಿಭ್ರಮ (ಉ)　[11] ನೊ (ಎ ಗ)　[12] ಳ್ಳಲಿ ಯೆಂ (ಅ ಇ)
ಳ್ಳೆಂ (ಉ)　[13] ಧೀಶ (ಅ)　[14] ದನು (ಅ ಉ)　[15] ಗೆಯಿಸಿ (ಎ ಐ)　[16] ದಲಿ (ಐ)
[17] ಪಿ (ಉ ಎ)　[18] ರಿ (ಉ)　[19] ಶಾದಿ (ಉ)　[20] ಲಿ (ಎ ಗ).

ಗೌಳ ಘುರ್ಜರ ಕಾಂಭೋಜ ಖರ್ಪರ ಸಿಂಧು
ಲಾಳದೇಶಾಧೀಶ್ವರರ
ಬಾಲಕರನು ಬರಿಸಿದನಂದೋಲೆಯು
ಮೇಲೋಲೆ[1]ಯು[1]ನೊಸೆದಟ್ಟಿ ೮೯

ವಸುಧೆಯೊ[2]ಳುಳ್ಳೈ[2]ವತ್ತಾಱು ದೇಶದ
ಹೊಸಹರೆಯದ ರಾಜಸುತರ
ರಸಿಕ ವಿದೂಷಕ ಜನ[3]ಗಳಿಂ[3] ಬರಿಸಿದ
ನಸಮವಿಕ್ರಮ ಸು[4]ರು[4]ತಾಳ ೯೦

ಮುಂದೆ ಬಿ[5]ರು[5]ದ[6]ನೊ[6]ದಱುವ ವಂದಿಜನಗಳ
ಸಂದಣಿಯಿಂದರಸುಗಳು
ಬಂದ[7]ರಾ[7] ದೇಶದೇಶ[8]ಗಳ[8] ಶೃಂಗಾರಗ
ಳಂದು ಮೆಱೆಯೆ ಮಂಟಪಕೆ ೯೧

ನಿಲ್ಲದಾಳಿಯರಂದಣಗಳ ನಡುವೆ ಪೊಂ
ಬಲ್ಲಕ್ಕಿ[9]ಯೇಱಿ[9] ಲೀಲೆಯೊಳು
ಮೆಲ್ಲನೆಯ್ತಂದ[10]ಳಾ[10] ಸುರುತಾಳಸುತೆ ನನೆ
ವಿಲ್ಲನ ವಲ್ಲಭೆಯಂತೆ ೯೨

ಎಡಬಲದೊಳು ಮೆಯಿಗಾವಲ ಪಟುಭಟ
ರಿ[11]ಡು[11]ಕಿಱಿದೈತರ[12]ಲಂದು[12]
ಬಿಡದೆ ವಿವಾಹಮಂಟಪ[13]ಕೈತಂ[13]ದಳು
ಕಡುಗಾಡಿ ಕೈಮಿಱಿಲವಳು ೯೩

ಅಲ್ಲಿರ್ದ ನಾನಾದೇಶದ ನೃಪಸುತ
ರೆಲ್ಲರಾ ಚ[14]ಲ್ಲಗಾರ್ತಿ[14]ಯನು
ನಿಲ್ಲದೆ ನೋಡಿ ತಲ್ಲಣಗೊಳಲಂಗಜ
ನಲ್ಲಿ [15]ನಲಿ[15]ದನೆದೆಯೊಳಗೆ ೯೪

---

[1] ಗಳ (ಐ) [2] ಳ್ಳೈ (ಅ ಇ ಉ ಐ) [3] ರಿಂದ (ಅ ಇ ಉ ಎ ಗ) [4] ರಿ (ಉ ಎ) [5] ರಿ (ಅ ಉ ಎ ಗ) [6] ವೊ (ಐ) [7] ರು (ಐ) [8] ದ (ಉ ಎ ಗ) [9] ಯೊಳು (ಐ) [10] ಳು (ಅ ಇ ಉ ಎ ಗ) [11] ಡಿ (ಇ ಎ ಐ ಗ) [12] ಲವರು (ಅ) [13] ಕೆಳ್ತಂ (ಅ ಇ ಉ ಎ ಗ) [14] ಲ್ಲಕಾತಿ (ಎ ಗ) ಲ್ಲಗಾಡಿ (ಉ ಐ) ಲ್ಲೆಗಾರ್ತಿ (ಉ ಐ) [15] ನೆನ (ಐ).

ಕಬ್ಬಿನ ಬಿ[1]ಲ್ಲಗಂ[1]ಗಜನೆಳೆದುಂಬಿಯ
ತೆಬ್ಬನೇಱಿಸಿ ಜೇವಡೆದು
ಹಬ್ಬವಾಯ್ತುಲರಂಬುಗಳಿಗೆನುತೆದೆಯೊಳು
ಬೊಬ್ಬಿಱಿದೆಚ್ಚನವರನು  ೯೫

ಬಿಟ್ಟ ಕ[2]ಣ್ಬಿದಱುವ[2] ಹೃದಯ ಪುಟ್ಟುವ ಬೆಮ
ರಿಟ್ಟಣಿ[3]ಸುವ[3] ಪುಳಕಗಳು
ನೆಟ್ಟನೆ ಕಾಣಿಸುತಿರಲಂದವರು ನಾ
ಣ್ಗೆಟ್ಟಿರ್ದರೇನ [4]ಬಣ್ಣಿಪೆ[4]ನು  ೯೬

ಇತ್ತುದವಳ ಚೆಲ್ವವಳಿಗ[5]ವಳವರನು[5]
ಚಿತ್ತಜ[6]ನ್ಮಗೆ[6] ಮಾಱಿದಳು
ಒತ್ತರಿಸಿದ[7]ವ[7]ಲರ್ಗಣೆಗ[8]ಳು ಮು[8]ಮ್ಮಾಱಿ
ದೊತ್ತಾದ[9]ರವರಂದಲ್ಲಿ[9]  ೯೭

ಅಂದಿವಳಿರ್ದೊಡಾ ಬೂದಿಗ ನೊಸಲಕ
ಣ್ಣಿಂದ ಕೇಳೆನ್ನ ಸುಡುವನೆ
ಇಂದವನಿರ್ದೆಡೆ[10]ಗಾ[10]ನೆಯ್ದಿ ಸೂಡ [11]ಕೊ
ಡೆಂ[11]ದು[12]ಪಿಡಿ[12]ವೆನು ನಾನವನ  ೯೮

ಎಂದು ವಸಂತನೊಡನೆ ಮನಸಿಜ ರಾಗ
ದಿಂದ ನುಡಿದನೆನಲವಳ
ಸಂದ ಸೊಬಗ ಕಂ[13]ಡವ[13]ರು ಪರವಶತೆಯೊ
ಳೊಂದಿದರೆಂಬುದಚ್ಚರಿಯೆ  ೯೯

*ನೋಟದಿಂದವರೊಡಲ್ಗಳ ಮಱೆದೀ ಲೋಕ
ದಾಟವ ಬಿಟ್ಟು ನಾಣ್ಗೆಟ್ಟು
ಮಾಟದ ಮನುಜರಂತಿರಲವರ[14]ಲ್ಲಿ [14]ಕ
ಣ್ಬೇಟವ ಮಾಡದಾ ಕುವರಿ  ೧೦೦

---

[1] ಲ್ಲನಂ (ಇ ಎ ಗ)  [2] ಣ್ಬೋಟದ (ಐ)  [3] ಸಿದ (ಇ ಉ ಐ ಗ)
[4] ಪೇಳುವೆ (ಐ ಇ ಎ ಗ)  [5] ಳವರ (ಅ)  [6] ನಿಗೆ (ಉ)  [7] ಳ (ಅ)
[8] ವಮು (ಅ ಇ ಎ ಗ) ವರ್ಮು (ಉ)  [9] ರವರಂತಲ್ಲಿ (ಅ) ಳಂದು ರಾಮನಿಗೆ (ಎ)  [10] ನಾ (ಐ)  [11] ಕೊಂಡಿಂದು (ಎ)  [12] ಕೇಳು (ಐ)  [13] ಡ (ಅ)
[14] ಲಿ (ಎ ಗ)  * (ಉ) ಪ್ರತಿಯಲ್ಲಿಲ್ಲ.

ಚೆಲುವರ ಗಂಡ ಚೆನ್ನಿಗರಾಮನ ರೂ[1]ವು[1]
ನೆಲಸಿರಲವಳೆ[2]ದೆ[2]ಯೊಳಗೆ
ಒಲಿವಳೆಂತವಳವರಿಗೆ ಮೋಹಿಸಿ[3]ದನ[3] ಬಿ
ಟ್ಟೆಳಸುವರೆ ಪೆಣ್ಗ[4]ಳಿದಿ[4]ರ್ಗೆ ೧೦೧

ಮಾಲೆಯನಿಕ್ಕಿ ಮನದೊಳಿರ್ದ ರಾಮನ
ಮೇಲವಳವನೊಡಗೂಡಿ
ಆಲಯಕೈದಿದಳಿತ್ತ ಪೋದುದು ನೃಪ
ಜಾಲ ತಮ್ತಮ್ಮ ನಗರಿಗೆ ೧೦೨

ಬೆಟ್ಟವ ಕಿತ್ತೀಡಾಡಿಸಿ ರಾಮನ
ಕಟ್ಟಿ ತರಿಸಿ ನಿನಗಾನು
ಕೊಟ್ಟಪೆನಿದಕೇಕೆ ಚಿಂತೆಯೆನುತ ಸಂತ
ವಿಟ್ಟನಾ ರಾಯ ಮಗಳನು ೧೦೩

ಚಿಂತೆ ಬೇಡ[5]ವ್ಮಿ[5] ನಿನಗೆ ಮನದೊಳಗಂ
ತಿಂತಾಗಬೇಡ ರಾಮನನು
ಅಂತರವಿಲ್ಲದೆ ಪಿಡಿದು ತರಿಸಿ ನಿನ್ನ
ಮುಂತೆ ನಿ[6]ಲ್ಲಿ[6]ಸುವೆ ನಿನ್ನಾಣೆ ೧೦೪

ಎಂದು ಕುವರಿಯ ಚಿತ್ತಕ್ಕೊಡಬಡಿಕೆಯ
ನಂದಿತ್ತು ದಾನವೇಶ್ವರನು
ಬಂದು ಮಂಡಿಸಿದನು ರಾಜಿನ ಬಾಗಿಲ
ಮುಂದಣ ಮೊಗಶಾಲೆಯೊಳು* ೧೦೫

---

[1] ಪ (ಐ) [2] ರ್ದೆ (ಐ) [3] ದ (ಐ) [4] ಳವ (ಋ) [5] ಮ್ಮ (ಅ)
(ಇ ಎ) * ಈ ತರುವಾಯ (ಉ) ಪ್ರತಿಯಲ್ಲಿ,

ಕರಸಿದ ಶಚಿವ ಸಾಮಂತ ರಾವುತರನು
ನೆರಪಿದ ಕರಿತುರಗಗಳ
ಚರರ ಲೆಕ್ಕಿಸಲಗಣಿತವೆನೆ ಸುರಿತಾಳ
ಧರದಿಂದಾ ಸಂಗರಕ್ಕೆ

—ಎಂದಿದೆ.

ಬರಿಸಿದ ನೇಮಿಖಾನನ ವೀರರುದ್ರನ
ಪುರಕೆ ಬೇಗದೊಳು ಧಾಳಿಯನು
ತೆರಳಿಸಿದನು ಕರಿ ತುರಗ ಕಾಲಾಳ ಮೋ
ಹರ ಮೊಗಗೆಡಿ[1]ಸೆ[1] ಲೋಕವನು* ೧೦೬

†ಮೂಱುಲಕ್ಕದ ಮೇಲಱುವತ್ತು ಸಾವಿರ
ಮೀಱಿದ ಮನದ [2]ತುರಂಗ[2]
ಆಱುಸಾವಿರ ಕರಿವೆರಸಾ ನೇಮಿ ಮೆ
ಯ್ದೋಱಿದನಹಿತ ಭೂಮಿಯೊಳು ೧೦೭

†ಗ್ರಾಮ ನಗರ ಖೇಡ ಖರ್ವಡ ದುರ್ಗ ದ್ರೋ
ಣಾಮುಖ[3]ವೆಂ[3]ಬಿವಱನುವ
ನೇಮಿ ನೋಡುತ ಬಂದು ಪೊಕ್ಕನೊಯ್ಯನೆ ವೈರಿ
ಭೂಮಿಪತಿಯ [4]ಭೂಮಿ[4]ಯನು ೧೦೮

†ನಾನಾವಿಧ ದೇಶಭಾಷಾ [5]ಪ್ರೌಢಿ[5]ಯ
ನಾನಾದೇಶ ರೀತಿಗಳ
ಆ ನೇಮಿಖಾನ ನೋಡುತ ಬಂದನು ತನ್ನ
ಸೇನಾಚಕ್ರಮಧ್ಯ[6]ದೊಳು[6] ೧೦೯

ಮೆಲ್ಲಮೆಲ್ಲನೆ ಬಂದು ವೀರರುದ್ರನ ಪುರ
ದಲ್ಲಿ ಬಿಟ್ಟನು ಪಾ[7]ಳೆ[7]ಯವ
ನಿಲ್ಲದೆ ಕೋಪದಿಂ ಕಾಕತಿರುದ್ರ ಭೂ
ವಲ್ಲಭನವನ ತಾಗಿದನು ೧೧೦

---

[1] ಸಿ (ಉ) [2] ವಾಜಿಗಳ (ಉ) [3] ವೆಂ (ಇ) [4] ಸೀಮೆ (ಇ) [5] ಪ್ರಹುಡಿ (ಇ)
[6] ದಲಿ (ಇ ಉ ಎ ಐ ಗ) [7] ಳ (ಐ) * ಈ ತರುವಾಯ (ಉ) ಪ್ರತಿಯಲ್ಲಿ,

ಆಯಿತು ದಶದೆಶೆಗಿಂದು ವಿಲಯಕಾಲ
ಹೋಯಿತು ಕುಮ್ಮಟದುರ್ಗ
ವಾಯಕಂದಿನೊಳೆನಲಾ ಜನ ಸುರಿತಾಳ
ರಾಯನ ಕೋಪದೇಳ್ಗೆಯಲಿ
ಕೂಡಿ ಬಂದನಿತು ಬಲವನು ನೇಮಿಯ ಕೂಡೆ
ಕೂಡಿಸಿ ಸರ್ವಸನ್ನಾಹ
ಗೂಡಿತೆರಳಿಸಿದ ನೇಮಿಯ ಕುಂತಣ
ನಾಡನಱುವ ತವಕದೊಳು

—ಈ ಎರಡು ಪದಗಳಿವೆ.

† ಇವು (ಉ) ಪ್ರತಿಯಲ್ಲಿ ವಿಪರೀತ ಕ್ರಮದಲ್ಲಿವೆ.

ಪಾ[1]ಳೆ[1]ಯವನು ಬಿಡಲೀಯದೆ ರುದ್ರಭೂ
ಪಾಲ ಕೋಪಾಟೋಪದಿಂದ
ಕಾ[2]ಳೆ[2]ಗವನು ಮಾಡಿ ನೇಮಿಯ ಬಲವನು
ಕೋಲಾಹ[3]ಲ[3]ವ ಮಾಡಿದನು ೧೧೧

ಖಾನಖಾನರ ಮೊದಲ[4]ಸುತ[4] ಕರೆದು ನೇಮಿ
ಖಾನನಾ ಕಾಕತೀಶ್ವರನ
ಸೇನೆಯೆಲ್ಲವ [5]ಬಱಿಕೆಯ್ದು[5]ಪಿಡಿದನಂ
ದಾ ನರನಾಥಚಂದ್ರನನು ೧೧೨

ಸಕಲಕಲಾಪರಿಪೂ[6]ರ್ಣ[6] [7]ಚಂದ್ರನ[7]ನಾ
ವಿಕಟವಿಧುಂತುದ ಬಂದು
ಸುಕರತೆಯಿಂ ಪಿಡಿವಂತೆ ಪಿಡಿದ ನೇಮಿ
ಸು[8]ಕಲ[8]ರುದ್ರಾವನೀಶ್ವರನ ೧೧೩

ಕೆದಱಿಸಿ ಹಿಂ[9]ಡ[9] ಕೇಸರಿ ಗಜರಾಜನ
ನೊದವಿ ಪಿಡಿವವೊ[10]ಲಾ[10] ನೇಮಿ
ಸದೆದು ಬಲವನೋಡಿಸಿ ವೀರರುದ್ರನ
ಕದನಭೂಮಿಯೊಳು ಪಿಡಿದನು ೧೧೪

ಕಲಿತನವಿಲ್ಲದಿರ್ದೊಡೆ ನೃಪರಿಗೆ ಬ[11]ಹು[11]
ಬಲದಿ[12]ಂದೇನಾ ರಾಯ[12]
ಕಲಹದೊಳಗೆ ಸಿಲುಕಿದನದಱಿಂ ಭುಜ
ಬಲವೆ ಮುಖ್ಯಾಂಗ ನೃಪರಿಗೆ ೧೧೫

ಓರುಗಲ್ಲಿಗೆ ಠಾಣಯವನಿರಿಸಿ ನೇಮಿ
ವೀರರುದ್ರನ ಪಿಡಿ ಕೊಂಡು
ಓರಂತೆ ಬಂದು ಡಿಳ್ಳಿಯ ಪೊಕ್ಕು ಸುರುತಾಳ
ಭೂರಮಣನ ಕಂಡನಂದು ೧೧೬

---

1 ೞ (ಐ) 2 ೞ (ಐ) 3 ೞ (ಇ ಎ ಗ) 4 ಸಿ (ಅ ಉ ಐ) 5 ಬಱಿಕಯ್ದು (ಉ ಕ) ಮುಱಿಕೆಯ್ದು (ಎ ಗ) 6 ರ್ನ (ಐ) 7 ಚಂದಿರ (ಅ) 8 ಕುಲ (ಐ) 9 ದಕೆ (ಅ ಎ ಗ) 10 ಲು (ಅ) 11 ಲು (ಐ) 12 ಕಾದಿದೊಡೇನಾರಾಯ (ಎ ಗ).

ಕಾಕತಿರುದ್ರನ ಕಾಣಿಕೆಯಿತ್ತು ಭೂ
ಲೋಕಪತಿಯ ಪಾದವನು
ಜೋಕೆ[1]ದ[1]ಪ್ಪದೆ ಬಂದು ಕಂಡ[2]ನಾ[2] ರಾಯನ
ನೇಕ [3]ಹರುಷವನೆಯ್ದಿದನು[3] ೧೧೭

ಬಿಡದುಪಚರಿಸಿ ನೇಮಿಯ [4]ಕುಂಬಳಕಾಯ[4]
ನೊಡೆದು ಹುಟ್ಟಿದ ರಾಯನನು
ತ[5]ಡೆ[5]ಹನಿಕ್ಕಿ[6]ಸಿದನು[6] ಬಂದಿ[7]ಖಾನ[7]ದೊಳಾ
ಪೊಡವೀಶ್ವರ ಸುರುತಾಳ ೧೧೮

ನಳನ ನಾಣ್ಗೆಡಿಸಿ ಹರಿಶ್ಚಂದ್ರರಾಯನ
ಹೊಲೆಯಗಾಳಾಗಿಸಿದತ್ತು
ಗೆಲುವರುಂಟೇ ವಿಧಿಯನು ನರಪತಿಗೆ ಸಂ
ಕಲೆಯಾದುದನ್ಯದೇಶದೊಳು ೧೧೯

ಮಂಡೆಯ ಹೋಗಾಡಿಸಿತು ಬೊಮ್ಮನ ನ
ಲ್ವೆಂಡಿರ ಬಿಡಿಸಿ ರಾಮನನು
ಬಂಡು ಮಾಡಿಸಿತು ವಿಧಿ ಸಿತವಾಹನನ ಶಿ
ಖಂಡಿಯ ಮಾಡಿ ಕೆಡಿಸಿತು ೧೨೦

*ತಿರಿದುಣಿಸಿತು ತಿಸುಳಿಯ ಹತ್ತುಭವದೊಳು
ತಿರುಗಿಸಿದತ್ತು ಹರಿಯನು
ತರಣೀಂದುಗಳ ತುತ್ತುಮಾಡಿತು ರಾಹುವಿ
ಗೊರೆಯಬಹುದೆ ವಿಧಿಯಿರವ ೧೨೧

[8]ಹೂಂ[8]ಕರಿಸುವ ಭಟರೊಂಬತ್ತುಲಕ್ಕದಿಂ
ಬಿಂಕವಡೆದ ನರಪತಿಗೆ
ಸಂಕಲೆಯಾದುದು ಕರ್ಮದಿಂದದಟಿಾ
ತಂಕ ಬಿಡದು ದೇವರನು ೧೨೨

---

[1] ತ (ಅ ಎ ಗ) [2] ನು (ಅ ಇ ಉ ಎ ಗ) [3] ವಿಭವ ತಾಳಿದನು (ಐ)
[4] ನುಕೂಷ್ಮಾಂಡಮ (ಉ) [5] ಡ (ಐ) [6] ದ (ಅ) [7] ಖಾನನ (ಅ ಐ) ಕಾನನ
(ಇ) [8] ಹುಂ (ಅ ಇ ಉ) * (ಐ) ಪ್ರತಿಯಲ್ಲಿಲ್ಲ.

ಸುಡುಗಾಡ ಕಾ[1]ದು[1] ಹೆಣದ ಬಾಯಕ್ಕಿಯ
ಕೊಡಹಿ ತೆಗೆದುಕೊಂಡಂತ್ಯಜನ
ಅಡಿಯ ಪಿಡಿದ ರಾಯನ ದುಃಖವನೊಡ
ನೊಡನೆ ನೆ[2]ನೆ[2]ವುತಿರ್ದನಲ್ಲಿ ೧೨೩

[3]ಕಡುಗು[3]ವ ಕರಣಂಗಳನೆಲ್ಲವ ಕಟ್ಟಿ
ಮೃಡನಡಿಯೊಳು ಚಿತ್ತವನು
ಮಡಗಿ ಪಂಚಾಕ್ಷರಿಯನು ನಾ[4]ಲ[4]ಗೆಯೊಳು
ತೊಡ[5]ಚಿ[5] ಶಿವಧ್ಯಾನದೊ[6]ಳು[6] ೧೨೪

ಕುಳಿ[7]ತನಾ[7]ಸನವಿಧಿ[8]ಯಿಂದ[8]ಕಾಕತಿರುದ್ರ
[9]ನು[9]ಳಿದು ದೇಹ[10]ವ[10]ನೀಶ್ವರನ
ಬಳಿಗೆಯ್ದಿದ ಶಿವಭಕ್ತ ಭಕ್ತರ ಮುಕ್ತಿ
ನಿಳಯಕೆಯ್ದಿಸದೆ ಮಾಣ್ಬುದೆ ೧೨೫

*ಇದು ಪರದಾರಸೋದರ ರಾಮನಾಥನ
ಪದಕೃತಿಯೊಳಗೈದನೆಯ
ವಿದಿತಾಶ್ವಾಸದೊಳೊಂದನೆಯದು ಸಂಧಿ
ಮೃದುಪದಚಯಸಂಬಂಧಿ ೧೨೬

---

[1] ಯ್ದು (ಉ ಐ) [2] ನ (ಐ) [3] ಕೆಡು (ಐ) [4] ಲ (ಉ) [5] ಗಿ (ಗ)
[6] ಳಗೆ (ಎ ಗ) [7] ತಾ (ಐ ಗ) [8] ಯಿಂ (ಇ ಉ ಐ) [9] ನ (ಅ) [10] ಮ (ಐ)
* (ಇ ಉ) ಪ್ರತಿಗಳಲ್ಲಿ ಮಾತ್ರ.

## ಹದಿನೆಂಟನೆಯ ಸಂಧಿ

### ಪಾವುಡ ಪ್ರಸಂಗ

ಶರಧಿ ಹಿಮಾಚಲವೆರಡಱ ಮಧ್ಯದ
ಧರಣಿಯ ಖೇಡವೆಸರಿನ
ಪುರವನಾಳುವ ತೆಱದಿಂದಾಳುತಿ[1]ತ್ತ[1]ಲಾ
ಸುರುತಾಳನಿರಲು ಮತ್ತತ್ತ ೧

ಪಾ[2]ವು[2]ದಗಳ[3]ನ[3]ಟ್ಟುವ ಕಾಲ ಬಂದಿತು
ಭೂವರ ಸುರುತಾ[4]ಳನಿ[4]ಗೆ
ಈವುದುಚಿತವೆಂದು ಸಚಿವರು ಮುಂಗುಲಿ
[5]ದೇವ[5]ಗೆ ಬಿನ್ನವಿಸಿದರು ೨

ಒ[6]ಡಬ[6]ಡಿಕೆಯ ಕಾಲ ಬಂದಿತು ಕಪ್ಪವ
ಕೊಡಬೇಕು ಸುರುತಾಳನಿಗೆ
ತಡೆವುದು ನೀತಿಯಲ್ಲೆಂದು ಮುಂಗುಲಿದೇಶ
ದೊಡೆಯಗಮಾತ್ಯರೊರೆದರು ೩

ನುಡಿದುದ ಕೊಡದ ಕಾರಣ ಸುರುತಾಳನು
ನಡೆದು ಬಂದನು ದಂಡೆಂಬ
ನುಡಿ ಬೇಡ ನಮಗೆ ನುಡಿದುದನಟ್ಟಿದ ಬಳಿ
ಕಡಿಯಿಡ[7]ನೆ[7]ಮ್ಮಲ್ಲಿಗಸುರ ೪

*ತನಗೆ ತ[8]ಕ್ಕುದ[8] ಮಾಡದಿ[9]ರೆ[9] ತಪ್ಪುವುದೀಗ
ಳನುನಯ[10]ದಿಂದ[10] ಕಪ್ಪವನು
ಜನಪ ಕೇಳೀವುದುಚಿತವೆಂದು ನೃಪತಿಯ
ಮನವನಾಪ್ತರು ತಿಳುಪಿದರು ೫

---

[1] ರ (ಅ ಉ) [2] ವಾ (ಅ) ವ (ಉ) [3] ಕ (ಅ) [4] ಳಂ (ಅ)
[5] ರಾಯ (ಅ) [6] ಡಂಬ (ಗ) [7] ಲೆ (ಅ ಇ) ರೆ (ಉ ಎ ಗ) [8] ಪ್ಪದೆ (ಅ)
[9] ರೆವು (ಅ ಇ ಐ) [10] ವಲ್ಲ (ಅ ಇ ಎ ಗ) *(ಉ) ಪ್ರತಿಯಲ್ಲಿಲ್ಲ.

ತಪ್ಪಬಾರದು ರಾಯ[1]ರಾ[1]ಡಿದ ಭಾಷೆಗೆ
ಕಪ್ಪವ ಸುರುತಾಳನಿಗೆ
ತಪ್ಪುಕರಾಗದೀವುದು ಕಜ್ಜವೆಂದವ
ರೊಪ್ಪಿಸಿದರು [2]ರಾಯನ[2]ನು ೬

ಕೃತಿಮತಿಶಾಲಿ ವಂಶಾಗತ ಸಚಿವರ
ಹಿತಮಿತೋಕ್ತಿಯನಾಲಿಸುವ
ಕ್ಷಿತಿಪತಿಗಳಿಗಿಂಗಡಲಮಗಳು ಪತಿ
ವ್ರತೆಯಾಗದೆ ಪಾಣ್ಬೆಯಹಳೆ ೭

ಆನೆ ಕುದುರೆ ಪೆಣ್ಮಾಣಿಕ ಮೇಲ್ಕಟ್ಟು
ಜೀನವೆಸದ ತೆಜಿ ಝುಲ್ಲ
ಚೀನಾಂಬರ ಚಿತ್ರಾವಳಿಗಳು ಬಂದ
ವೇನೆಂಬೆ ಕಪ್ಪಕಸುರನ ೮

ಸಿಂಗಾಡಿ ತರಕಸ ಲೋಹವಕ್ಕ[3]ರೆ[3] ದಾಬೆ
ಹೊಂಗೆಲಸದ ಜೋಡು ಸವಗ
ಸಿಂಗರ[4]ಲೇ[4]ವೆ ಸೀಸಕಗಳೆಂಬಿವು ಪಾವು
ಡಂಗಳಿಗಿರದೆಯ್ದಿದವು ೯

ಖಾನರ ಭಂಗಿಸಲೆಂದಸುರೇಂದ್ರನ
ಮಾನವ ಮುಱಿಯಲೆಂದರಸ
ಏನೆಂಬೆನಿಪ್ಪತ್ತುನಾಲ್ಕು ಟಾಕಿನ ಘನ
ಮಾನಶಾರ್ಙ್ಗವ ತರಿಸಿದನು ೧೦

ಒರೆದು ಬುದ್ಧಿಯ ರಾಯಭಾರಿಗಳಿಗೆ ರಾಯ
ತೆರಳಿಸಲಂದು ಕಪ್ಪವನು
ಭರದೊಳವರು ಬಂದು [5]ಪೊಕ್ಕರು ಡಿಳ್ಳಿಯ
ನಿರದೆ[5] ಪಯಣಗತಿಯಿಂದ ೧೧

ಪೋಗಿ ಕಂಡರು ರಾಯಭಾರಿಗಳ್ಗಾ ಜಿನ
ಬಾಗಿಲೊಳಗಿಹ ಮಲ್ಲುಕರನು
ಆಗಳವರು ಪಡಿ ಬೀ[6]ಡಾ[6]ರದಿಂದನು
ರಾಗವೆಯ್ದಿಸಿದರವರನು ೧೨

---

[1] ನಾ (ಅ ಇ ಐ) [2] ನೃಪತಿಯ (ಐ) [3] ರಿಕೆ (ಎ ಗ) [4] ಲೋ (ಎ ಗ) [5] ಡಿಳ್ಳಿಯ ಪೊಕ್ಕರಿರದೆ (ಎ ಗ) [6] ಡಹಾ (ಎ ಗ).

ನರಲೋಕಸಾರ್ವಭೌಮಗೆ ಸು[1]ರು[1]ತಾಳಗೆ
ಶಿರಗಳ ಬಾಗಿ ಮ್ಲುಕರು
ಭರದಿಂದ ಬಿ[2]ನ್ನವಿ[2]ಸಿದರು ಮುಂಗು[3]ಲಿ[3]ದೇಶ
ದರಸಿನ ಕಪ್ಪ ಬಂದುದನು ೧೩

ಮಱುದಿವಸದೊಳು ಮನುಜಲೋಕಪಾಲಕ
ರೆಱೆಯ ಡಿಳ್ಳೀಶ್ವರನೊಸೆದು
ಪೊಱಮಟ್ಟನಾಸ್ಥಾನಮಂಟಪಕೊಳಿಗ
ದೞಿಕೆಯ ಪೆಣ್ಗಳೊಗ್ಗಿ[4]ನೊಳು[4] ೧೪

ಜೀನಗಹಳೆ ಶಂಖವಾಸರ ಬಾ[5]ದಿ[5]ನ
ಮಾನಿನಿಯರ ಮೋಹರದೊಳು
ದಾನವಚಕ್ರೇಶ್ವರ ಸು[6]ರು[6]ತಾಳನಾ
ಸ್ಥಾನಮಂಟಪಕ್ಕೈದಿದನು ೧೫

ನೆಲನನುಗ್ಘಡಿ[7]ಸುವ[7] ವೇತ್ರಧಾರಿಣಿಯರ
ಕಲಕಲರವ ದಿಕ್ತಟ[8]ಗಳ[8]
[9]ಅ[9]ಲೆಯಲೆಯ್ದಿದನೋಲಗಕಬ್ಧಿವೇಲಾ
ವ[10]ಲಯಿ[10]ತ ಧರಣೀಶನಸುರ ೧೬

ಜೆಡೆ [11]ಕಾ[11]ಲ್ಕುಪ್ಪಸ ಮೊಲೆಕಟ್ಟು ಕಯ್ಯೊಳು
ಪಿಡಿದ ಸಿಂಗಾಡಿ ತರಕಸ
ಕಡಿದಾಬೆ ಖೇಡೆಯವೆಸೆಯಲಸುರನ ಮುಂ
ಗಡೆ[12]ಯೊಳೆ[12]ಯ್ದಿದರಂಗನೆಯರು ೧೭

*ಸುರಗಿ ಸಬಳ ಸೆಲ್ಲೆ[13]ಹ[13] ಕೊಂತ ಕಕ್ಕಡೆ
ಪರ[14]ಶು[14] ಪ[15]ಟ್ಟೆ[15]ಯ [16]ಪಿಂಡಿವಾಳ[16]
ಕರದೊಳೆಸೆ[17]ಯಲು[17] ಡೇಸಿ[18]ಯ[18] ಶೃಂಗಾರದ
ತರುಣಿಯರೊಡನೆಯ್ದಿದರು ೧೮

---

[1] ರಿ (ಉ) [2] ನ್ನೈತ್ರೆ (ಐ) [3] ಲ (ಐ) [4] ನಲಿ (ಇ ಉ ಎ ಗ) [5] ವಿ (ಅ ಇ ಉ ಎ ಗ) [6] ರಿ (ಉ ಎ) [7] ಪ (ಐ) [8] ವ (ಅ) [9] ನ (ಐ) [10] ಠೆಯು (ಅ) ಲಯು (ಎ ಐ ಗ) [11] ಗಾ (ಎ ಐ ಗ) [12] ಯಲೆ (ಐ) [13] ಯ (ಎ ಗ) [14] ಸು (ಎ ಗ) [15] ಕ್ಕೆ (ಅ ಎ ಗ) [16] ಗಳನಾಂತು (ಐ) [17] ಯೆ (ಐ) [18] ಯರ (ಐ) * (ಉ) ಪ್ರತಿಯಲ್ಲಿಲ್ಲ.

ಮುತ್ತಿನ ಮೊಲೆಕಟ್ಟು ಜೆಡೆಯ ಗೊಂಡೆಯ ಬಿಗಿ
ದೊತ್ತಿಕಟ್ಟಿದ ಜವದಾಡೆ
ಚಿತ್ತಕೆಳಸಿ ಬಿಂಕ[1]ಕಾರ್ತಿ[1] ಬಿಬ್ಬಿಯರವ
ನೊತ್ತಿನೊಳೆಯ್ತಂದರಂದು ೧೯

ಒಳ[2]ಲಾಯದವೇಳು[2] ಸಾವಿರ ಕುದುರೆಯ
ತಳುವಿಲ್ಲದೇಱಿ ಬಿಬ್ಬಿಯರು
ಬಳಸಿ ಬರಲು ಬಲವೈರಿ[3]ವಿ[3]ಭವ[4]ದಿಂದ[4]
ತಳರ್ದನೋಲಗಶಾಲೆಗಸುರ ೨೦

ಗಿಂಡಿ ಕರಗ ಕನ್ನಡಿಯ ಘನಸಾರಕ
ರಂಡದ ಹಡಪದೂಳಿಗದ
ಪುಂಡರೀಕಾಕ್ಷಿಯರೊಡವರೆ ಬಂದನಾ
ಖಂಡಲವಿಭವದೊಳವನು ೨೧

ಲೆಕ್ಕಕೆ ನಿಲುಕದೂಳಿಗದವರೆಡಬಲ
ವಕ್ಕದೊಳೆಯ್ತರಲಂದು
[5]ಹೊ[5]ಕ್ಕನೋಲಗಶಾಲೆಯ[6]ನೊ[6]ಯ್ಯನೆ ಬಂ[7]ದು[7]
ರಕ್ಕಸರಾಯನಳ್ತಿಯೊಳು ೨೨

ಪಾಯವಧಾರೆಂದು ನೆಲನನುಗ್ಘಡಿಪ ವಿ
ಡಾಯಕಾರ್ತಿಯರು ಮುಂಬರಲು
ವಾಯಾರದಿಂ ಬಂದು ಪೊಕ್ಕನು ರಕ್ಕಸ
ರಾಯನೋಲಗಶಾಲೆಯನು ೨೩

ಲಹರಿಯಿಂದ[8]ವನತ[8] ಶತ್ರುರಾಯರ ಗಹ
ಗಹಿಸಿ ನಗುವ ತೆಱದಿಂದ
ರಹಿಸುವ ನವರತ್ನದುರುಹರಿಪೀಠದೊ
ಳಹಿತಮರ್ದನನು ಮೆಱೆದನು ೨೪

ಸರ್ವಾವಸರವೆಂಬೋಲಗಶಾಲೆಯೊ
ಳುರ್ವೀ[9]ಶ್ವರನು ಕುಳ್ಳಿ[9]ರಲು
ಕೊರ್ವಿದ ಖಾನ ವಜೀರ ಮಲ್ಲುಕರುಗ
ಳುರ್ವಿನಿಂ ಬಂದರೋಲಗಕೆ ೨೫

---

[1] ಗಾತಿ (ಉ) [2] ರಾಣುವೆಯೊಳು (ಐ) [3] ವೈ (ಎ ಐ ಗ) [4] ದೊಳು (ಐ) [5] ಪೊ (ಉ) [6] ನಂದೊ (ಅ) [7] ದಾ (ಐ) [8] ನವನ (ಐ) [9] ಶ ಕುಳ್ಳಿ (ಎ ಗ) ಶ್ವರ ಕುಳಿತಿ (ಐ).

*ತೊಟ್ಟ [1]ಪೈರಣಿಯ[1] ಕಟ್ಟಿದ ಜವದಾಡೆಯ
[2]ಮೆ[2]ಟ್ಟಿದ ಕಾಸೆ[3]ವೊಚ್ಚೆ[3]ಯುದ
ಬಿಟ್ಟ [4]ಜೆ[4]ಡೆಯ ಗೊಂಡೆಯುದ ಖಾನ ಮಲ್ಲುಕ
ರಿಟ್ಟಣಿಸಿದರೋಲಗದೊಳು  ೧೬

ಕಾಲಕುಪ್ಪಸದ ಕಬಾಯಿಯ ಕಟ್ಟಿದ
ಮೇಲುರನ್ನದ ದಶರಥಿಯ
ಬಾಲಗುಲಾಮರು ಮೆಱೆದರು ಸು[5]ರು[5]ತಾಳ
ನೋಲಗದೊಳಗೆ[6]ಡ[6]ವಿಡದೆ  ೧೭

ಅಂಗ ಕಳಿಂಗ ಮಗಧ ಮಾಳವ ಕುರು
ಜಾಂಗಣ ಕೀರ ಕಾಶ್ಮೀರ
ವಂಗ ಬರ್ಬರ ಕಾಂಭೋಜ [7]ಕೌ[7]ಸಲದೇ
ಶಂಗಳರಸುಗಳೆಯ್ದಿದರು  ೧೮

ಗೌಳ ಗುರ್ಜರ ಸಿಂಧು ಸಿಂಹಳ [8]ಬೋ[8]ಟ ನೇ
ಪಾಳ ಖರ್ಪರ ಲಾಳ ಹೂಣ
ಚೋಳ ಕೇರಳ ಪಾಂಡ್ಯ ಕೊಂಕಣ [9]ಭೂಮಿ[9]
ಪಾಲರೆಯ್ದಿ[10]ದರೋಲಗಕೆ[10]  ೧೯

ಕುಳಿರ್ವೆಟ್ಟು ಮುನ್ನೀರ್ಗಟ್ಟೆಯ ನಡುವಣ
ಇಳೆಯಾ[11]ಣ್ಮ[11]ರು ಬೇಗದಿಂದ
ತಳರ್ದರೋಲಗಕೆ ಗಾಜಿನ ಬಾಗಿಲ ಬಲು
ಪಳಿಯುಱಿರನುಮ[12]ತಿಯಿಂ[12]ದ  ೨೦

ನಿಲ್ಲೆಂ[13]ದ[13] ಪಡಿಯಱಿಗೆ ಪಿಡಿ[14]ಪೊನ್ನ[14]ಳ
ಚೆಲ್ಲುತ ಚ[15]ತು[15]ರಭೂಮಿಪರು
ನಿಲ್ಲದೆಯ್ತಂದರಂಬುಧಿಪರಿ[16]ವೃ[16]ತಭೂ
ವಲ್ಲಭನೋಲಗದೆಡೆಗೆ  ೨೧

---

[1] ಪೈರಣಿಯ (ಅ) ಪೈರಣದ (ಇ) ಪೇರಣದ (ಐ) [2] ಕ (ಐ) [3] ವೋಚ (ಎ ಗ) ವೋಛೆ (ಐ) [4] ಜ (ಅ ಉ) [5] ರಿ (ಉ) [6] ಡೆ (ಉ ಐ) [7] ಕೋ (ಉ ಗ) [8] ಭೋ (ಇ ಉ ಐ) [9] ಭೂಮಿಯ (ಅ) ದವನೀ (ಐ) [10] ರಾಯುಡೆಗೆ (ಐ) [11] ಳ್ಮ (ಇ ಐ) ಧಿಪ (ಅ) [12] ತದಿಂ (ಉ) [13] ಬ (ಐ) [14] ಪೊಂಗ (ಎ ಐ ಗ) ಹೊನ್ನ (ಇ) [15] ಡು (ಉ ಎ ಐ) [16] ವೇಷ್ಟಿ (ಎ ಗ) * (ಉ) ಪ್ರತಿಯಲ್ಲಿಲ್ಲ.

*ಕಡಿದಾಬೆ ಕಟ್ಟಿದ ಜವದಾಡೆ ಕಯ್ಯೊಳು
ಪಿಡಿದ ಸಿಂಗಾಡಿ ತರಕಸ
ನಡುವಿನ ದಶರಥಿ ಮೆಱೆಯೆ ಖಾನರು ಬಂದ
ರೆಡವಿಡದಸುರನೋಲಗಕೆ ೩೨

*ದುಗುಲದ ಪೈ[1]ಠ[1]ಣಿ ಸುಕ್ಕುಗುಪ್ಪಸ ಮಿಗೆ
ಸೊಗ[2]ಯಿಸುವೆ[2]ಕತಾಯಿ ಮೆಱೆಯೆ
ಬಗೆಬಗೆಯಂಬು ಸಿಂಗಾಡಿವಿಡಿದು ಖಾನ
ರಗಣಿತರಲ್ಲಿಗೈದಿದರು ೩೩

*ಸಿಂಗಾಡಿ[3]ವಿಡಿದೆಡಬಲದೋಲಗ[3]ದೊಳು
ಸಂಗಡಿಸಿರ್ದ ಮಲ್ಲುಕರ
ವಂಗಡವನು ಲೆಕ್ಕಿ[4]ಸುವೊ[4]ಡುರಗಾಧೀ
ಶಂಗಲ್ಲದಳವೆ ಮಿಕ್ಕರಿಗೆ ೩೪

ತಿಳಿಜೊನ್ನದೆಱಕದ ಪುರುಷರೊ ಬೆಳ್ಳಿಯ
ಥಳಥಳಿಸುವ ಬಲ್ಗರುಗಳ
ಪೊಳಪೊಯೆಂದೆನೆ ಧವಳಾಂಬರದಿಂ ಖಾನ
ರೆಳಸಿದರೇನ ಬಣ್ಣಿಪೆನು ೩೫

ಅಂಗದ ಕೆಂ[5]ಪಿನಂ[5]ಬರದ [6]ಬ[6]ಳ್ಪಿನ ಕಯ್ಯ
ಸಿಂಗಾಡಿಯ ರಾಪುತರ
ಜಂಗುಳಿಯಲ್ಲದಿಲ್ಲಸುರನೋಲಗದ ಬೆ
ಡಂಗನದೇನ [7]ಬಣ್ಣಿಪೆ[7]ನು ೩೬

ಎರಡು ಗಾವುದ ಪರಿಯಂತರ ಸಾಲಟ್ಟು
ಸು[8]ರು[8]ತಾಳ[9]ನೆಡಬಲ[9]ದೊಳಗೆ
ಕರಮೆಸೆದರು ಖಾನಮಲ್ಲುಕರೆಂದೆನೆ
ಸಿರಿಯ[10]ನೇ[10]ನಂ[11]ಬೆ ನಾ[11]ನವನ ೩೭

---

[1] ರ (ಆ ಉ ಐ) [2] ಯಿಪವೇ (ಅ) ಯಿಪಯೋ (ಐ) [3] ಗಳನುವಿಡಿದು ಎಡಬಲ (ಐ) [4] ಪೊ (ಐ) [5] ಪು ಅಂ (ಅ ಇ) [6] ಬೆ (ಇ ಐ) [7] ಪೇಳುವೆ (ಇ ಎ ಐ ಗ) [8] ರಿ (ಉ ಎ) [9] ನೋಲಗ (ಐ) [10] ನಾ (ಅ) [11] ಬೆ (ಅ)
* (ಉ) ಪ್ರತಿಯಲ್ಲಿಲ್ಲ.

ಏನೆಂಬೆನೈಗಾವುದ ಪರಿಯಂತರ
ದಾನವನೋಲಗದೊಳಗೆ
ಆನೆ ಕುದುರೆಯೆಸೆದವು ದಳಪತಿ ನೇಮಿ
ಖಾನನ [1]ಕಯ್ಯ ಸನ್ನೆಯಲಿ[1] ೩೮

ಮೃಗ ಮಂದ[2]ಭ[2]ದ್ರ ಸಂಕೀರ್ಣ ಜಾತಿಗಳೆಂಬ
ಬಗೆಬಗೆಯಾನೆಯ ಪೌಜು
ಮಿಗೆ ಸೊಗಯಿಸಿದವಾ ಸು[3]ರ[3]ತಾಳನೊಡ್ಡೋ
ಲಗದೊಳಗೇನ ಬಣ್ಣಿಪೆನು ೩೯

ವರ ಬಾಹ್ಲೀಕ ಕಾಂಭೋಜ [4]ವಾ[4]ನಾಯುಜ
ತುರಗ ಸಿಂಧುಜ ಪಾರಸಿಕ
ಸುರುಚಿರ ದಾನೆಯುವೆನಿಪ ವಾಜಿಗಳಾ
ಸುರುತಾಳ ಸಭೆಯೊಳೊಪ್ಪಿಹವು ೪೦

ಒಂಬತ್ತು ಲಕ್ಕ ಕುದುರೆಯನಾಳುವನವ
ನಂಬುಧಿ ಪರಿವೃತಾವನಿಯ
ಇಂಬನಾಳುವನೆನಲವನೈಶ್ವರ್ಯದಾ
ಡಂಬರವನು ಪೇಳ್ವೆನೇನ ೪೧

*ಹಿರಿಯುಬ್ಬಣದ ಖಂಡೆಯುದ ಕಠಾರಿಯ
ಸು[5]ರಗಿ[5]ಯ ಲೌಡಿಯ ಗದೆಯ
ಪರಶು ಪಠ್ಠಿಯುದ ರಾವುತರು ಮೆಱೆದರಾ
ಸು[6]ರು[6]ತಾಳನೊಡ್ಡೋಲಗದೊಳು ೪೨

*ಒಡ್ಡಿದ ಪೌಜಿಗೆ ಸೆಲವನಿಕ್ಕಿಸಿಕೊಂಬ
[7]ದೊಡ್ಡಿಹ[7] ರಾವುತರುಗಳ
ಒಡ್ಡಣದಿಂದಾ ರಾಯನೋಲಗ ಕ
ಣ್ಗಿಡ್ಡಮಾಯ್ತೇನ ಬಣ್ಣಿಪೆನು ೪೩

ಚಿಕ್ಕ ಕಠಾರಿಯ ಮೇಲೆ ಹೂವಿನ ಮಾಲೆ
ಯಿಕ್ಕಿ ರಾವುತ ಪಾಯುಕರ
ಲೆಕ್ಕಿಸದೆಕ್ಕಲ ಖನ್ನೋಜಿಗಳಾ
ರಕ್ಕಸನಿದಿರೊಳೊಪ್ಪಿದರು ೪೪

---

[1] ಕೈಯ್ಯಸನ್ನೆಯೊಳು (ಎ ಗ) ಕೈಯ್ಯಸನ್ನೆಯನು (ಇ) ಕೈಸನ್ನೆಯೊಳು (ಉ) [2] ಮಂ (ಐ) [3] ರ (ಎ) [4] ವ (ಇ ಐ ಗ) [5] ರಿಗೆ (ಉ ಗ) [6] ರಿ (ಉ) ರ (ಎಗ) [7] ಪೊಡ್ಡಿಹ (ಇ) ಪೊಡ್ಡಿಯ (ಎ ಗ) * (ಉ) ಪ್ರತಿಯಲ್ಲಿಲ್ಲ.

*ಬಿರಿದಿಕ್ಕಿ ಜವದಾಡೆಗೆ ಮಲೆವರ ಕಂಡು
ಕರೆವುತ [1]ಬಿಡಿ[1]ಗಾಳಗಕೆ
ಪರಿವುತ ಗಲಭೆಯೆಡೆಗೆ ಬಂದರೊಯ್ಯನೆ
ತುರುಕ ರಾವುತರೋಲಗಕೆ ೪೫

*ತೆಲುಗ [2]ತಿಗುಳ[2] ಲಾಟಾರ್ಯ ಕ[3]ರ್ನಾಟಕ[3]
ಬಲುರಾವುತ ಪಾಯುಕರ
ಕಲಕಲರವ ಕಿವಿಗೆಸೆದುದಾ ದಾನವ
ಕುಲಪತಿಯಾಸ್ಥಾನದೊಳು ೪೬

ಘಳಿಗೆ ಘಳಿಗೆ ಜಾವ ಜಾವ ದಿನಕೆ ದಿನ
ತಳುವದೆ ಜೀವಿತಗೊಂಬ
ತುಳಿಲಾಳ್ಗಳು ಸುರುತಾಳನೋಲಗದೊಳ
ಗೆಳಸಿ[4]ಹ[4]ರೇನ ಬಣ್ಣಿಪೆನು ೪೭

ಪೂಸಿದ ಗಂಧ ಪೂಮಾಲೆ ಕಪ್ಪಿನ ಬೊಟ್ಟು
ಕಾಸೆ ಕಕ್ಕಡೆ ಸರಕಯ್ಯ
ಮಾಸ[5]ದಲಗು[5] ಮಱೆಯದ ಪಂಥವಾತಿನ
ಮಾಸಾಳೆಸೆದುದಂದಲ್ಲಿ ೪೮

ಆನೆ ನೀರಾನೆ ಕುದುರೆ ನೆಗಳ್ನರಜಾಲ
ಮೀನಸಿಕಾಂತಿ ನೀರಾಗೆ
ತಾನೆಸೆದತ್ತಾ ಸಭೆ ಕಣ್ಗೆ ನೀರ್ಗ ನಿ
ಧಾನದಂತೇನ ಬಣ್ಣಿಪೆನು ೪೯

ಇಂತೊಡ್ಡೋಲಗದೊಳಗೆ ಚತುಃಸಮು
ದ್ರಾಂತವೆನಿಪ ಭೂತಳಕೆ
ಕಾಂತನಮಲಮೂರ್ತಿ ದಿವ್ಯದುಕೂಲ ವಿ
ಕ್ರಾಂತನಿರಲು ಸು[6]ರು[6]ತಾಳ ೫೦

---

[1] ಬಿದಿ (ಅ) [2] ತೆವುಳ (ಇ ಎ ಐ ಗ) [3] ನ್ನಾರ್ಟದ (ಎ ಗೆ) [4] ದ (ಉ ಎ ಐ ಗ) [5] ದಗಲು (ಏ) [6] ರಿ (ಉ) ರ (ಎ ಗ) *(ಉ) ಪ್ರತಿಯಲ್ಲಿಲ್ಲ.

ಆ ವೇಳೆಯೊಳಃ ಮುಂಗು[1]ಲಿ[1]ದೇವನಟ್ಟಿದ
ಪಾ[2]ವು[2]ಡಗಳನು ಮಂತ್ರಿಗಳು
ಭೂವನಿತಾಕಾಂತನ ಸು[3]ರುತಾಳ[3]ನ
ಭಾವವಱಿದು ಕಾಣಿಸಿದ[4]ರು[4]    ೫೧

ಆವ ವಸ್ತುವಿಗಾವ ಗುಣವುಂಟ[5]ದನು[5]
ದ್ಭಾವಿಸಿ ರಾಯಧಾರಿಗ[6]ಳಾ[6]
ಪಾ[7]ವು[7]ಡಗಳನೊಪ್ಪಿಸಿದರು ರಾಯರ
ದೇವಗೆ ಸುರುತಾ[8]ಳನಿ[8]ಗೆ    ೫೨

ಉದರ ನನೆಯದುದಕದ ಮೇಲೋಡುವ
ಕುದುರೆಗಳನು ದಿನದಿನಕೆ
ಮದ[9]ವಳಿಯದ[9] ಕೂರಾನೆಗಳನು ತಂದು
ಮುದ[10]ದಿಂದೊ[10]ಪ್ಪಿಸಿದರಸುರಗೆ    ೫೩

ದಿವಿಜಕಾಂತೆಯರ ಲಾವಣ್ಯ[11]ದಿಂದೇ[11]ಳಿಪ
ನವ[12]ಪಾ[12]ತ್ರ ನಳಿನನೇತ್ರೆಯರ
ಅವನೀಶ್ವರಗಂಗಜಾವತಾರಗೆ ತಂ
ದವರೊಪ್ಪಿಸಿದರು ಲೀಲೆಯೊಳು    ೫೪

ಛಪ್ಪನ್ನದೇಶದ ಚಾಪಧರರ ಮೊಗ
ದೊಪ್ಪವ[13]ನ[13]ಳಿದು [14]ಕಂದಿಸುವ[14]
ಇಪ್ಪತ್ತುನಾಲ್ಕು ಟಾ[15]ಕಿ[15]ನ ಸಿಂಗಾಡಿಯ
ನೊಪ್ಪಿಸಿದರು ರಾಯನಿಗೆ    ೫೫

ನೋಡಿದನಾ ಸಿಂಗಾಡಿಯ ಬಲ್ಮೆಯ
ನಾಡಾಡಿಯಲ್ಲೀ ಬಿಲ್ಲು
[16]ಖೋ[16]ಡಿ ಬಂದಿತು ನಮ್ಮ ಕೋದಂಡಧರರ್ಗೆಂದು
ಮಾಡಿದನಸುರನೆಣಿಕೆಯ    ೫೬

---

[1] ಲ (ಐ) [2] ವ (ಅ ಉ) [3] ರಿತಾಳ (ಉ) ರತಾಳ (ಎ) ರುತ್ರಾಣ (ಐ) [4] ನು (ಐ) [5] ದಸ (ಎ ಗ) ವನು (ಐ) [6] ಳು (ಅ ಇ ಉ ಐ) [7] ವ (ಎ) [8] ಳಂ (ಅ ಇ) [9] ವಿಳಿದಿಹ (ಅ) ವಿಳಿಯುದ (ಇ ಎ ಗ) [10] ದೊಳು (ಉ) [11] ವನೇ (ಐ) [12] ಪ (ಉ) [13] ಕ (ಇ) [14] ತಂದೀವ (ಇ ಐ) [15] ವಿ (ಅ) [16] ಕೋ (ಇ).

ನಮ್ಮ ರಾಣುವೆಯ ಧನ್ವಿಗಳ ಭಂಗಿಸಲೆಂ
ದುಮ್ಮಹದಿಂದ ಹಿಂದುವನು
ನಮ್ಮಲ್ಲಗೀ ಬಿಲ್ಲನಟ್ಟಿದನೆಂದುಱೆ
ದುಮ್ಮಾನವ ತಾಳಿದನು ೫೭

ಧನುವನಿದನು ಗೊಲೆ[1]ಗೆ[1]ತ್ತಿ ತೆಗೆದು ಗುಱಿ
ಗನುಗೆಯ್ದು ಶರವನಾರ್ದೆ[2]ಸೆ[2]ವ
ಘನಭುಜರುಂಟೆ ನಿಮ್ಮಲ್ಲಿಯೆಂದವರನಾ
ದನುಜೇಶ್ವರ [3]ಬೆಸಗೊಳಲು[3] ೫೮

ಬಿಲ್ಲನಿದನು ತೆಗೆದೇಳುಕೊಪ್ಪರಿ[4]ಗೆ[4]ಯು
ನಿಲ್ಲದೆ ತಟ್ಟುರ್ಚಲೆ[5]ಸೆ[5]ವ
ಬಲ್ಲದರುಂಟು ಮುಂಗುಲಿದೇವನೊಳಗೆಂದು
ಸೊಲ್ಲಿದರವರಸುರನಿಗೆ ೫೯

ತಿರುವನೇಱಿಸಿ ತೆಗೆದೆಸೆವೀ ಚಾಪದ
ಶರವೇಳು ಕೊಪ್ಪರಿ[6]ಗೆ[6]ಯನು
ಇರದೆ ತಟ್ಟುರ್ಚುವುದಿದಕೆ ಕಟ್ಟ[7]ಳೆ[7]ಯೆಂದು
ಸು[8]ರು[8]ತಾಳಗವರು [9]ಪೇಳಿದರು[9] ೬೦

ಆ ನುಡಿಗೇಳುತಲಾ[10]ನದಿವ[10]ನು ನೇಮಿ
ಖಾನನ ಮೊಗ ನೋಡಲವನು
ತಾನಿರದೆದ್ದು ಕರೆದು ಕರೆದಾ ಬಿಲ್ಲ
ಖಾನಖಾನರಿಗೆ ತೋಱಿದನು ೬೧

ಗೊಲೆಗೆತ್ತಿ ತೆಗೆದವರುಂಟೆಯಿಾಬಿಲ್ಲನು
ನೆಲೆಯಲ್ಲ ಮಾತಿದು ಮೊಲದ
ತಲೆಯು ಕೋಡಿವರು ತೆಗೆದರೆಲುವಿಲ್ಲದ
ಬಲುನಾಲಗೆ[11]ಗೈ[11]ಯಿಂದ ೬೨

---

[1] ಗೊ (ಇ) [2] ಸು (ಎ ಐ ಗ) [3] ಕೇಳಿದನು (ಐ) [4] ಕೆ (ಅ ಇ) [5] ಸು (ಇ ಎ ಐ ಗ) [6] ಕೆ (ಅ) [7] ಣೆ (ಅ ಇ ಎ ಗ) [8] ರಿ (ಉ) [9] ಸುರಿದರು (ಐ) [10] ವದೀನ (ಅ ಇ ಎ ಗ) [11] ಯ ಕೈ (ಎ).

ಏಳು ಕೊಪ್ಪರಿಗೆಯನುಗಿಯಲೆ[1]ಸೆ[1]ವ ಬಿ
ಲ್ಲಾಳುಂಟೆ ರಾಯ ಚಿತ್ತೈಸು
[2]ಹೇ[2]ಳಲೇನಿ[3]ವರು[3] ನಾಲಗೆಗಣೆಯಿಂದೆಚ್ಚ
ರೇಳೆಂಟು ಕೊಪ್ಪರಿಗೆಯನು　　　　೭೩

ಎಂದು ಬಿಲ್ಗಾಳಿ ಖಾನರು ಪರಿಹಾಸಕ
ದಿಂದ ನುಡಿಯೆ ಮಾತುಗಳನು
ನಿಂದು ಕೈಮುಗಿದು ಮೆಲ್ಲನೆ ರಾಯಭಾರಿಗ
ಳೆಂದರು ಸು[4]ರು[4]ತಾಳನಿಗೆ　　　　೭೪

ತಡೆಯದೆ ರಾಯ ಚಿತ್ತೈಸು ನಿ[5]ಮ್ಮ[5]ವರ[6]ನೆ[6]
ಮ್ಮೊಡನೆ ಸಿಂಗಾಡಿಯನಿದನು
ಕುಡಿವೆರಲಿಂ ತೆಗೆಯಿಸಿ ಕೊಪ್ಪರಿಗೆಯೇಳ
ತಡಹಾಯಲೆ[7]ಸ[7]ಸಿ ತೋಱುವೆ[8]ವು[8]　　　　೭೫

ಆ ನುಡಿಗೇಳಿ ವಜೀರ ಮಲ್ಲುಕ ಖಾನ
ರಾನನವಿರದೆ ಕಂದಿದವು
ಏನೆಂಬೆನಾ ಸಭೆ ಚಿತ್ರದ ಸಭೆಯಂತೆ
ಮೌನಮುದ್ರಿತ ಮುಖವಾಯ್ತು　　　　೭೬

ನೆಗೆವ ಮೀಸೆಯ ನೆಱೆ ಕೆಂಪೇಳ್ವ ಕಣ್ಗಳ
[9]ಹೊ[9]ಗೆವ ಮೈನವಿರ ಬೆಮರುವ
ಮೊಗದ ಚಿಂತಿಸುವ ಚಿತ್ತದ ಸುರುತಾಳನ
ದುಗುಡವಂಜಿಸಿತು ಖಾನರನು　　　　೭೭

ನುಡಿಯಲಮ್ಮರು ನೋಡಲಮ್ಮರು ಕೈಮೈ
ಮಿಡುಕಲಮ್ಮರು ಬಿಲ್ಲನದನು
ಪಿಡಿಯಲಮ್ಮರು ಬಿಲುಗಾಱರು ಪಾವಿನ
ಮುಡಿಗೆಯಂತಿರ್ದುದಂದಲ್ಲಿ　　　　೭೮

---

[1] ಸು (ಇ ಉ ಎ ಐ ಗ)　[2] ಹೇ (ಉ)　[3] ದ (ಉ)　[4] ರಿ (ಉ) ರ (ಎ)
[5] ನ್ನ (ಅ ಇ ಎ ಗ)　[6] ನ (ಉ ಐ)　[7] ಸಿ (ಎ ಗ)　[8] ನು (ಅ ಇ ಎ ಗ)
[9] ಪೊ (ಉ).

*ಬಿಲ್ಲ ನೋಡುತ ಬಲುಬಿಲುಗಾಱ ಖಾನರು
ಬಿಲ್ಲಂಬೆಱಗಾಗಿ ನಿಂದು
ತಲ್ಲಣಿಸುತ ಸುರುತಾಳನ ಸಮ್ಮುಖ
ದಲ್ಲಿರ್ದರುಲಿಯ[1]ದೊಲೆ[1]ಯದೆ ೬೯

ಅಂದು ದ್ರುಪದನಂದನೆಯ [2]ವಿ[2]ವಾಹದ
ಮಂದಿರದೊಳು ಮಂಡಳಿಕರ
ಮುಂದುಗೆಡಿಸಿದ ಗಾಂಡೀವವೆಂಬಂತದು
ಬಂದುದು ಬಗೆಗೆ ಬಲ್ಲವರ ೭೦

ಇದು ನರಲೋಕದ ಶಾರ್ಙ್ಗವಲ್ಲದು ಕೃಷ್ಣ
ನೊದವಿ ಪಿಡಿದ ಶಾರ್ಙ್ಗವೆಂದು
ಬೆದಱಿದರಳವಳಿದರು ಶಾರ್ಙ್ಗಧನ್ವಿಗ
ಳೆದೆಗೆಟ್ಟು ನಿಂದಿರ್ದರಲ್ಲಿ ೭೧

ಚಾಪವ [3]ನಿಟ್ಟಿ[3]ಸುತೆಡಬಲ[4]ದೊಳು[4] ಶಾರ್ಙ್ಗ
ಚಾಪಧರರ ಮೊಗಗಳನು
ಕೋಪಾಟೋಪದಿಂ ನೋಡುತ ದಾನವ
ಭೂಪನಿರಲು ದುಗುಡದಲಿ ೭೨

†[5]ಹಿಂ[5]ದಕೆ [6]ಸರಿವ[6] ಸಿಂಗಾಡಿಯ ಮ[7]ಱ[7]ಸುವ
ಸಂದಣಿ[8]ಯೊ[8]ಗುವ ಮಲ್ಲುಕರ
ವೃಂದದಿಂ ಮೈದೋಱಿದನು ಬಾದುರವೆಸ
ರಿಂದ ಮೆಱೆವ ಖಾನನೊರ್ವ ೭೩

‡ಬೆಱಗುವಟ್ಟಂಗದ ಬೆದಱುವೆದೆಯ ಬೆವ
ರೊಱೆವ ಮೊಗದ ಮಲ್ಲುಕರ
ಮಱೆಯಿಂದ ಮೊಗದೋಱಿದನು ಬಾದುರನೆಂ
ಬಱಿಕೆವೆಸರ ಖಾನನೊರ್ವ ೭೪

---

[1] ದುಲಿ (ಇ) [2] ವೈ (ಉ) [3] ನೀಕ್ಷಿ (ಇ ಎ ಉ ಐ ಗ) [4] ದುರು (ಅ ಇ ಉ ಎ ಗ) [5] ಪಿಂ (ಉ) [6] ಸಾರಿದ (ಇ) [7] ಱ (ಅ) [8] ಪೊ (ಇ ಗ) * (ಉ) ಪ್ರತಿಯಲ್ಲಿಲ್ಲ † (ಎ) ಪ್ರತಿಯಲ್ಲಿಲ್ಲ ‡ ಈ ಪದ್ಯ (ಉ ಎ) ಪ್ರತಿಗಳಲ್ಲಿಲ್ಲ.

ಗಾಂಡೀವಕಮರೇಂದ್ರನಂದನನಾ ವಿಪ್ರ
ಮಂಡಳಿ[1]ಯಿಂದ[1] ಬರ್ಪಂತೆ
ಕೊಂಡಾಡೆ ಸಭೆ ಮೆಲ್ಲನೆಯ್ತಂದನಾ ಕೋ
ದಂಡವಿರ್ದೆಡೆಗಾ ಖಾನ    ೭೫

*ತೋರ ಮುಡುಹು ನಿಡುಗಯ್ಯತಿದೀರ್ಘ ಶ
ರೀರ ಪೇರುರ ಪೆ[2]ರ್ಚ[2] ಬೆಳೆದ
ಚಾರುಬಾಹಾಯುಗವೆಸೆಯೆ ಬಾದುರನಂದು
ಸಾರಿದನಾ ಶಾರ್ಙ್ಗವನು    ೭೬

†ಮುತ್ತಿನ ಜೆಡೆ ರನ್ನದ ದಶರಥಿ ವಜ್ರ
ಕೆತ್ತಿದೊಱೆಯ ಕಡಿದಾಬೆ
ಒತ್ತಿ ಕಟ್ಟಿದ ಜವ[3]ದಾ[3]ಡೆ ಮೆಱೆಯೆ [4]ಬಿ[4]
[5]ಲ್ಲೊ[5]ತ್ತಿಗೆ ಬಂದನಾ ಖಾನ    ೭೭

ಜೀನಗೆಲಸದ ಕಬಾಯಿ ಪೈ[6]ಠ[6]ಣಿ ಸುತ್ತು
ತಾನೆಸೆದಿರೆ ಬಾದುರನು
ದಾನವಪತಿಗೆ ಸಲಾಮನೊಲಿದುಮಾಡು
ತಾನದೆ ನುಡಿದನಿಂತೆಂದು    ೭೮

ತಿರುವನೇಱಿಸಿ ಮಿಡಿದಂಬುಗೊಳಿಸಿ ಕಿವಿ
ವರೆಗೆ ತೆಗೆವೆನೀ ಬಿಲ್ಲ
ಇರದೇಳುಕೊಪ್ಪರಿಗೆಯ ನೊಡೆ[7]ಯೆಸೆ[7]ವೆನು
ತರಿಸು ದಾನವಚಕ್ರವರ್ತಿ    ೭೯

ಜೀಯ ದುಮ್ಮಾನವೇತಕೆ ಬಿಡು ಬಿಲ್ಲಿದ
[8]ನೋಯಾ[8]ರದಿಂ ತೆಗೆದಾನು
[9]ಖೋ[9]ಯೆನೆ ಸಭೆ ಕೊಪ್ಪರಿಗೆಗಳೇಳನು ತ[10]ಡ[10]
ಹಾಯಲೆಸು[11]ವೆನು[11] ಚಿತ್ತೈಸು    ೮೦

---

[1] ಯಿಂ (ಅ ಇ ಎ ಗ) [2] ಚ್ಚಿ (ಎ ಗ) [3] ಜಾ (ಅ) [4] ಬಿಲ್ಲಿ (ಉ) [5] ನೊ (ಉ) [6] ಠ (ಅ ಇ ಉ ಐ) [7] ಯೆಸು (ಇ) ದೆಸು (ಉ) [8] ನೊಯ್ಯಾ (ಇ ಉ) [9] ಕೋ (ಅ ಉ) [10] ಟ (ಅ) [11] ವೆ (ಎ ಐ ಗ) *(ಉ) ಪ್ರ. ೬೦. ೨೯೯ (ಐ) ಪ್ರ. ೬೧. ೭೮೮

ಆ ನುಡಿಗೇಳುತ ದಾನವಪತಿ ನೇಮಿ
ಖಾನಗೆ [1]ನೇ[1]ಪಿಸಲವನು
ಆನದೆ ಕೊಪ್ಪರಿ[2]ಗೆ[2]ಗಳೇಳನೊಸೆದಾ
ಸ್ಥಾನದೆಡೆಗೆ ತರಿಸಿದನು ೮೧

ಬಂದ ಕೊಪ್ಪರಿ[3]ಗೆ[3]ಗಳೇಳನೊಂದಱ ಮುಂ
ದೊಂದ[4]ನಿ[4]ರಿಸಿ ಬಾದುರನ
ಸಂದ[5]ಶ[5]ರಕೆ ಗುಱಿಮಾ[6]ಡೆ[6] ಖಾನರ [7]ಮೊಗ[7]
ಕಂದಿತು ಬಿಲ್ಲ ಬಿಸುಟರು ೮೨

ಸು[8]ರು[8]ತಾಳನ [9]ನೇ[9]ಮದೊ[10]ಳಾ[10] ಬಿಲ್ಲಿಗೆ
ತಿರುವನೇಱಿಸಿ ಬಾದುರನು
ಬೆರಲಿಂದ ಜೇವಡೆದನು ಬಿಲುಗಾಱರ
ನೆರವಿ ಕಯ್ಯೆತ್ತಿ ಕೊಂಡಾಡೆ ೮೩

ಕರಗಳನೆತ್ತಿ ಕರ್ತಾರಗೆ ವಂದಿಸಿ
ಸರಲ ಸಂಗಡಿಸಿ ತಿರುವಿಗೆ
ಸರಿಸದೊಳಿರ್ದ ಕೊಪ್ಪರಿಗೆಗಳೇಳನಂ
ದಿರದೆ ನೋಡಿದನು ಬಾದುರನು ೮೪

ನೋಡಿ ಕೊಪ್ಪರಿಗೆಗಳೇಳನು ಮೊಗ ನೀ
ರೋಡಿತೆ ಬಿಲ್ಲಾಳುತನದ
ಪಾಡು ಪಲ್ಲಟಿಸಿತೆ ಗುಱಿಯುನೆಸುವ ಕಡು
ಗಾಡಿಯೊಳಿರ್ದನಾ ಖಾನ ೮೫

ತೆಗೆಯಬಾರದು ಬಿಲ್ಲನಿದನೆಂದು ಮನದೊಳು
ಬಗೆದನೆ ಬಿದ್ದ ಬೆಟ್ಟವನು
ನಗುವ ಗುಱಿಯ ನೆಸಬಾರದೆಂದೆದೆಯೊಳ
ಗಗಿದನೆ ಬಾದುರಖಾನ ೮೬

---

[1] ನಿಯ (ಇ ಎ ಗ) [2] ಕೆ (ಎ) [3] ಕೆ (ಅ ಇ ಉ ಗ) [4] ಸೇ (ಅ ಇ ಎ ಗ ಚ ಟ) [5] ಸ (ಅ ಉ) [6] ಡ (ಎ ಗ) [7] ಮೋಱೆ (ಐ) [8] ರಿ (ಉ) [9] ನಿಯ (ಇ ಉ ಎ ಐ) [10] ಳು (ಉ).

ಒಲ[1]ದೆಡ[1] ಗಾ[2]ಲುಂಗುಟದಿಂದವನಿಯ
ಬಲದೊತ್ತಿ ಮೆಟ್ಟಿತಿರುವನು[2]
ತಲೆವಿಲ್ಲುಗೊಂಡು ಬೆರಳ್ಗಳಿಂ ತೆಗೆದನು
ಬಲುಗಾಱಿರು ಬೆಱಗಾಗೆ ೮೭

ಅರುಣಜಲದ ಧಾರೆ ಪೊಱಸೂಸೆ ಕೈ[3]ಕಾಲ[3]
[4]ಬೆರಳ್ಗಳಿಂ[4] ಕೊಪ್ಪರಿ[5]ಗೆ[5]ಗಳ
[6]ನಿರದಾರ್ದೆ[6]ಚ್ಚನು ಹೊಗೆಯ ಹೊಂ[7]ಗಿ[7]ಡಿಗಳಾ
ವರಿಸಲಾಸ್ಥಾನಮಂಟಪವ ೮೮

ಕೊಪ್ಪರಿಗೆಗಳೇಳನೊಡಹಾಯ್ದಾ ಕಣ್
ಯುಪ್ಪಲಿಳಾಕಾಂತೆಯನು
ಕಪ್ಪಾದುದು ಬಾನರ ಮೊಗ ಸುರುತಾಳ
ನೊಪ್ಪಿದನವನ ಬಲ್ಮೆಯನು ೮೯

ಅಚ್ಚರಿ ಪುಟ್ಟೆ ನೋಟಕರ ಮನಕೆ ಬಲು
ಮಚ್ಚರ ಪುಟ್ಟೆ ಬಾನರಿಗೆ
ಎಚ್ಚನಂದೊಲದು ಕೊಪ್ಪರಿಗೆಗಳೇಳನಂ
ಬುಚ್ಚಳಿಸಲು ಬಾದುರನು ೯೦

[8]ಆ[8]ಹಾಯೆಂದು ಕೊಂಡಾಡಿದರರೆಬರು
ಹೋಹೋಯೆಂದು ಕೆಲಬರು
ಕಾಹುರ[9]ವಾ[9]ತಿನಿಂ ಪೊಗಳ್ದರು ಸಪ್ತಕ
ಟಾಹವನ[10]ವ[10]ನಾರ್ದೆಸಲು ೯೧

ಪೂತು ಪಾಯಕು ಮರ್ಖು ಭಾಪು ಭಲರೆಯೆಂದು
ಸೂತಸುತರು ಕೊಂಡಾಡೆ
ಶಾತಶರದೊಳೇಳು ಕೊಪ್ಪರಿ[11]ಗೆ[11]ಯನೆಚ್ಚ
ನಾತುರದಿಂದ ಬಾದುರನು ೯೨

---

[1] ದೆಳೆ (ಅ) [2] ಲಂದಲವನಿಯ ಬಲದೆತ್ತಿ ನಿಲುಕಡೆಯಿಂದ ತಿರುವನು (ಐ) [3] ಕಾ (ಅ) [4] ಲ್ಬೆರಳ್ಗಳಿಂ (ಅ) ಬೆರಳಿಂದ (ಐ) [5] ಕೆ (ಇ ಎ ಗ) [6] ಇರದಾರ್ದೆ (ಅ ಇ ಉ) [7] ಕಿ (ಇ ಎ ಐ) [8] ಹಾ (ಉ ಎ ಐ ಗ) [9] ಮಾ (ಉ) [10] ದ (ಅ) [11] ಕೆ (ಇ).

ಸಪ್ತಕಟಾಹವನವನಾರ್ದೆ[1]ಸ[1]ಲು
ದ್ದೃಪ್ತ[2]ಬಾಹಾ[2]ಬಲದಿಂದ
ಆಪ್ತರು ಕೊಂಡಾಡಿದರವನನು[3]ಸಮ[3]
ಸಪ್ತಕರೊಳಗೊರ್ವನೆಂದು ೬೩

*ತಿರುಗುವ ಮೀನ[4]ನಲ್ಲದೆ[4] ಕೊಪ್ಪರಿ[5]ಗೆ[5]ಯುನಾ
ನರನೆ[6]ಚ್ಚು[6]ದಿಲ್ಲ ಬಾದುರನ
ಪರಿ [7]ಹೊ[7]ಸತೇಳುಕೊಪ್ಪರಿ[8]ಗೆ[8]ಯುನೆಚ್ಚನೆಂ
ದಿರದೆ ಭಟರು ಪೊಗಳಿದರು ೬೪

ಅಂದಿನ ಪಾರ್ಥನಂದಿನ ಕರ್ಣನಂದಿನ
ಸಂದ ಸಾತ್ಯಕಿಯಲ್ಲದಿವಗೆ
ಇಂದಿನ ಬಿಲ್ಲಾಳೆಣೆ[9]ಯು[9]ಲ್ಲವೆಂದಾ
ವಂದಿ[10]ಗಳುಜು[10] ಪೊಗಳಿದರು ೬೫

ಬಿಟ್ಟನು ಬಹುವಾಡವ[11]ನಾ[11]ಸ್ಥಾನವ
ಕೊಟ್ಟನಂದುಡುಗೊಱೆಗಳನು
ಕಟ್ಟಿದನವನಿಗೆ ಮಲ್ಲುಕಪದವಿಯು
ಪಟ್ಟವನಾ ಸು[12]ರು[12]ತಾಳ ೬೬

ಬೆಳ್ಳಿಯ ಬೆಟ್ಟದಂತೆಸೆವ ಕಪ್ಪದ ಪಾರು
ವೀ[13]ಳ್ಯ[13]ಗಳನು ಬಾದುರಗೆ
ಡಿಳ್ಳೀಶ್ವರನೀ[14]ಯೆ[14] ಮಲ್ಲುಕ ಖಾನರು
ತ[15]ಳ್ಳಂಕ[15]ಗೊಂಡರೆದೆಯೊಳು ೬೭

ಎತ್ತಿ ಬರೆಯಿಸಿ ಖಾನರ ರಾಜ್ಯಂಗಳ
ತತ್ತುಮಾಡಿಸಿ ಬಾದುರಗೆ
ಇತ್ತನು ಬಹಳ ವಳಿತ[16]ವ[16] ಖಾನರ ಪೋಱೆ
ಹೊತ್ತೆ ಕೋಪಾನಲ[17]ನಿಂ[17]ದ ೬೮

---

[1] ಚ್ಚ (ಉ) ಸೆಯ (ಐ) [2] ಬಲಾ (ಅ) [3] ಸಂ (ಇ ಐ) [4] ನದೇ (ಅ)
[5] ಕೆ (ಇ ಗ) [6] ಚ್ಚ (ಅ ಗ) [7] ಹಾ (ಐ) [8] ಕೆ (ಇ) [9] ಯಿ (ಐ) ಯೆ (ಗ)
[10] ಜನರು (ಐ) [11] ನ (ಅ ಉ ಗ) [12] ರಿ (ಉ) ರ (ಎ) [13] ಳೆಯ (ಇ)
[14] ಯಲು (ಅ ಇ) [15] ಲ್ಲಣ (ಎ ಗ) [16] ವಾ (ಅ) ದ (ಇ) [17] ದಿಂ (ಎ ಐ ಗ)
*(ಉ) ಪ್ರತಿಯಲ್ಲಿಲ್ಲ.

ಕಂದಿದ ಮೊಗದ ಕುಂದಿದ ಬಾಹಾಬಲ
ದೊಂದಿದ ಚಿಂತಾತುರದ
ನಂದಿದ ಕೋಪಾಗ್ನಿಯ ಖಾನರಿ[1]ರ್ದ[1]ರು
ನೊಂದಾ ಖಾನನ ಮೇಲೆ ೯೯

ತಂತಮ್ಮ ರಾಜ್ಯದೊಳರ್ಧಾರ್ಧವ[2]ನೋ[2]
ರಂತೆ ಬಾದುರಗಸುರೇಂದ್ರ
ಅಂತರ[3]ವಿಲ್ಲದೀಯ[3]ಲು ಖಾನ ಮಲ್ಲುಕ
ರಂತಿಂತಾದರೆದೆಯೊಳು ೧೦೦

ಕೊಟ್ಟನು ರಾಯಭಾರಿಗಳಿಗೆ ಚಿನ್ನದ
[4]ರೊ[4]ಟ್ಟಿಗಳನು ಚೀನಾಂಬರದ
ಪೆಟ್ಟಿಗೆಗಳನುಡುಗೊಱೆ[5]ಯನು[5] ಬಳಿಕ ಬೀ
ಳ್ಕೊಟ್ಟನು ಸು[6]ರು[6]ತಾಳನವರ ೧೦೧

ಹರೆದುದೋಲಗ ಖಾನಮಲ್ಲುಕರೊಯ್ಯನೆ
ಸರಿ[7]ದರೊಂದೆಡೆಗೆ[7] ಸನ್ನೆಯೊಳು
ಭರದಿಂದ ಮಾತನಾಡಿದರು ಬಾದುರನಿರ
ಲರವಿಲ್ಲ [8]ತಮಗಿನ್ನೆಂದು[8] ೧೦೨

ಬಿಲ್ಲ ತೆಗೆದನೆಚ್ಚನೇಳು ಕೊಪ್ಪರಿಗೆಯ
ಮಲ್ಲುಕಪದವ ಪಡೆದನು
ಬಲ್ಲದನಾದನು ಬಾದುರ ನಮ[9]ಗಿ[9]
[10]ನ್ನಿ[10]ಲ್ಲ ಸಲಿಗೆ ರಾಯನೊಳು ೧೦೩

ನಮ್ಮನೆಲ್ಲ[11]ರ[11] ಸು[12]ರುತಾಳ[12]ನಾ ಖಾನನ
ನೆಮ್ಮುಗೆಯನು ಮಾಡದಿರನು
ನಿಮ್ಮಣೆಕೆಯ ಪೇ[13]ಳಿಯೆಂ[13]ದು ಮಧುರಖಾನ
ತಮ್ಮವರನು [14]ಬೆಸಗೊಳಲು[14] ೧೦೪

---

[1] ದ (ಐ) [2] ನಿರದೋ (ಉ) [3] ಮಿಲ್ಲದೀಯ (ಇ) ಮಿಾಯದೀರ (ಎ) ಮಿಾಯದೀಯ (ಗ) [4] ಱೊ (ಅ ಉ ಎ ಐ ಗ) [5] ಯಿತ್ತು (ಉ) [6] ರಿ (ಉ) [7] ದುದೊಂದೆಡೆಗೆ (ಅ) ದರೊಯ್ಯನೆ (ಐ) [8] ನಮಗಿಲ್ಲೆಂದು (ಅ) ತಮಗೆಂದೆನುತ (ಉ) ನಮಗಿನ್ನೆಂದು (ಎ ಗ) [9] ಗಿನ್ನು (ಅ) [10] ಇ (ಅ) [11] ರನು (ಉ) ವ (ಐ) [12] ರಿತಾಳ (ಉ) ರುತ್ರಾಣ (ಐ) [13] ಳಿಂ (ಉ) ಳಿಮೆಂ (ಎ ಗ) [14] ಕೇಳಿದನು (ಉ).

ಕಲಹವ ತೆಗೆದು ಡೊಂಬಿಯಲಿ ಬಾದುರ[1]ನನು[1]
ಕೊಲಬೇಕಲ್ಲದೊಡೆಮಗೆ
ಸ[2]ಲಿ[2]ಗೆ ಸನ್ಮಾನಗಳಿಲ್ಲ ರಾಯನೊಳೆಂದು
ಜಲಹ[3]ರಿ[3]ಖಾನ ನುಡಿದನು ೧೦೫

ಅಬ್ಬರಖಾನ ಕದಿರಖಾನ ಜಂ[4]ಭಾ[4]ರಿ
ಬಬ್ಬರಖಾನ ದೇವಾಂಕ
[5]ಡ[5]ಬ್ಬರಖಾನ ಮಾ[6]ಮುದ[6]ಖಾನರೆಂಬಿವ
ರು[7]ಬ್ಬಿ[7] ನಲಿದರಾ ನುಡಿಗೆ ೧೦೬

[8]ಮುಮ್ಮ[8] ರಖಾನ[9]ಮಚ್ಚಿ[9]ದನಾ ನುಡಿಗೆ[10]ಮ[10]
[11]ಹಮ್ಮು[11]ದಖಾನನೊಪ್ಪಿದನು
ಉಮ್ಮಹವಡೆದ[12]ನ[12]ಬುಧಿಖಾನ ಮನದೊಳು
ಸುಮ್ಮಾನವಡೆದ ಸಾಳುವನು ೧೦೭

ಕುದುಬಿ[13]ದಿ[13]ಖಾನ ಕೈರವಖಾನ ತುಂಬುರ
[14]ಸದಿರಿದಿಖಾನ ಮಾನಿಯನು[14]
ಅದ[15]ಟ[15]ನಂಬರಖಾನ [16]ಜಂಗು ಜ[16]ಲ್ಲಾಳ[17]ರು[17]
ಮುದವನ್ನೈದಿದರಾ ನುಡಿಗೆ ೧೦೮

ಎಕುಬಿ[18]ಲ್ಲಿ[18]ನತ್ತರಿ [19]ತತ್ತ[19]ರಿ ದುಮ್ಮಾ[20]ರ[20]
[21]ಮೊಖದು[21]ಮಖಾನರೆಂದೆಂಬ
ಸಕಲರಾ ನುಡಿಗೆ [22]ಮ[22]ಚ್ಚಿದರು ಮಧುರನದ
ಸುಕರ[23]ವಲ್ಲೆಂದು ನುಡಿ[23]ದನು ೧೦೯

ಬೀದಿ[24]ಜಗಳ[24]ದೊಳು ನಾವೆಲ್ಲ[25]ರೊಂ[25]ದಾಗಿ
ಬಾದುರಖಾನನ ಕೊಲಲು
ಆದರಿಪನೆ ಸು[26]ರುತಾಳ[26] ಕುಟುಂಬವಿ
ಚ್ಛೇದನವನು ಮಾಡದಿಹನೆ ೧೧೦

---

[1] ನ (ಐ) [2] ಲು (ಐ) [3] ರ (ಐ) [4] ಬಾ (ಐ) [5] ದ (ಐ) [6] ಧವ (ಇ ಉ ಎ ಗ) ದುವ (ಐ) [7] ಬ್ಬಿನಿಂ (ಉ) [8] ಮುಮ್ಮೊ (ಇ ಐ) ಮಮ್ಮಾ (ಎ) [9] ವೆಚ್ಚಿ (ಉ ಎ) [10] ಮಾ (ಐ) [11] ಹಮ್ಮ (ಇ ಉ) ಹಾಮ್ಮ (ಐ) [12] ನಂ (ಉ ಎ ಗ) [13] ದ (ಐ) [14] ಮಿನಿಯನು (ಅ) ಮಿನಿಯರು (ಎ) ಮಾಯನನು (ಐ) ಮಾನಿಯರು (ಗ) [15] ಟಿ (ಅ) [16] ಗಂಗುಬ (ಉ ಎ ಗ) [17] ನು (ಅ ಇ ಉ ಎ ಗ) [18] ಲ್ಲು (ಅ) ಲ್ಲ (ಇ ಉ ಎ ಗ) [19] ರತತ್ತಾ (ಅ) ರಕತ್ತಾ (ಇ) [20] ನ (ಐ) [21] ಮುಖಧೂ (ಐ) ಮೊಕದು (ಗ) [22] ಮೆ (ಇ ಉ ಎ ಗ) [23] ದಲೆಂದು ಮಚ್ಚಿ (ಅ) [24] ಗಲಹ (ಉ) [25] ವೊಂ (ಎ ಗ) [26] ರಿತಾಳ (ಉ) ರತಾಳ (ಎ) ರುತ್ರಾಣ (ಐ).

ಬಿಲ್ಲ ತೆಗೆಯಲಾಱದೆ ಖಾನವಲ್ಲುಕ
ರೆಲ್ಲರೊ[1]ಗ್ಗಾ[1]ಗಿ ಬಾದುರನ
ನಿಲ್ಲದೆ ಕೊಂದರೆಂದ[2]ಸುರ[2]ನೆಮಗೆ ಮುನಿ
ದಲ್ಲದೆ ಬಿಡನೆಂದನವನು ೧೧೧

ಆದರೆ ಪೇಳು ಮಧುರಖಾನ ನಾವಿನ್ನು
ಬಾದುರನನು [3]ಘಂಗಿ[3]ಸುವ
ಭೇದವನೆನೆ ಖಾನರಿಗೆ ಮಧುರನದ
ನಾದರದಿಂದ [4]ಪೇಳಿ[4]ದನು ೧೧೨

ಇದು [5]ತಂ[5]ತ್ರೋಪಾಯವಹುದೆಂದು ಖಾನರು
ಮುದದಿಂದ[6]ಲವ[6]ನ ಕೊಂಡಾಡಿ
ಚದುರನೊರ್ವನ ಕರೆದೊರೆದು ಬುದ್ಧಿಯನಾಗ
ಕೊದವಿ ಕಳು[7]ಪಿದರ[7]ವನನು ೧೧೩

ಸಂದಣಿಯೊಳಗವನೊಯ್ಯನಾ ಖಾನನ
ಮಂದಿರವನು ಬಂದು ಪೊಕ್ಕು
ಅಂದೇಕಾಂತದೊಳಗೆ ಬಾದುರ[8]ಗಿಂ[8]
ತೆಂದು ಪೇಳಿದನಾಪ್ತನಂತೆ ೧೧೪

ಏಳು ಕೊಪ್ಪರಿ[9]ಗೆ[9]ಯ ತ[10]ಡ[10]ಹಾಯಲೆಚ್ಚ ಕ
ಟ್ವಾಳು ಬಾದುರಖಾನನೆಮ್ಮ
ಆಳಲೀವನೆ ಡಿಳ್ಳಿಯನೆಂದು ಸು[11]ರು[11]ತಾಳ
ನಾಳೋಚಿಸಿದನಾಪ್ತರೊಳು ೧೧೫

ಕೊಲಿಸದಿರ್ದೊಡೆ ಬಾದುರಖಾನನೆಮ್ಮನು
ಕೊಲುವನು ಬಲುಗೈಯವ[12]ನ[12]
ಉಳುಹಿದೊಡುಳುವಿಲ್ಲ [13]ನ[13]ಮಗೆಂದು ಸುರುತಾಳ
ತಳುವದಾಡಿದನಾಪ್ತರೊಳು ೧೧೬

---

[1] ಂದಾ (ಉ) [2] ರಸ (ಐ) [3] ಬಾಧಿ (ಇ) [4] ನುಡಿ (ಐ)
[5] ಮಂ (ಎ ಗ) [6] ವ (ಇ ಎ ಐ ಗ) [7] ಪಿದನ (ಅ ಇ ಗ) ಹಿದನ (ಐ)
[8] ನಿಂ (ಅ) [9] ಕೆ (ಇ) [10] ಟ (ಅ ಉ ಐ) [11] ರಿ (ಉ) [12] ನು (ಅ ಉ)
[13] ವೆ (ಉ).

ಒಪ್ಪಿದರವರು ಬಂದಿತು ನಿನ್ನ ಜೀವಕೆ
ಮುಪ್ಪು [1]ಮೂ[1]ಸಾಪಿನ ಸಾಕ್ಷಿ
ತಪ್ಪದೀ ನುಡಿ ಪುಸಿಯಲ್ಲ ನಿನಗೆ ನಾನು
ತಪ್ಪುವು[2]ದ[2]ನು ಪೇಳಿದೆನು ೧೧೭

ಭರ್ತಾರಗೆ ಸು[3]ರು[3]ತಾಳಗೆ ನಿ[4]ನ್ನ[4] ಕೊ
ಲ್ವರ್ತಮಾನ[5]ವ[5]ನಲೆವು[6]ತ[6]ದೆ
ಕರ್ತಾರನಾಣೆ ಪುಸಿ[7]ದೊಡ[7]ರಸುಗಳಪ
ಕೀರ್ತಿಗಂಜರು ದುಶ್ಚರಿತರು ೧೧೮

ಒಡಹುಟ್ಟಿದ[8]ರ[8] ಕೊಲೆಗೊ[9]ಡ[9]ಬಡುವರು ತಂದೆ
ಮಡಿಯೆ ತನಗೆ ರಾಜ್ಯವೆಂದು
ಸಡಗರಿಸುವರರಸುಗಳಪಕೀರ್ತಿಯ
ನುಡಿಗೆದೆಯೊಳಗೆಣಿಸುವರೆ ೧೧೯

ನೀತಿರಹಿತರು ನಿರ್ಗುಣಿಗಳು ನಿಜವಂಶ
ಘಾತಕರರಸುಗಳವರ
ಪ್ರೀತಿ ವಿನಯ ವಿತರಣಗಳ ನೆಜೆ ನಂಬು
ವಾತನಲ್ಲವೆ ಗಾಂಪನಿಳೆಗೆ ೧೨೦

*ಅವನಿಗೆ ಗಾಂಪನಾರೆಂದೊಡಂಗನೆಯರ
ಸವಿನುಡಿಗಳಿಗರಸುಗಳ
ನವನಯೋಕ್ತಿಗಳನನೃತವೆನ್ನದೆದೆಯೊಳು
ತವೆ ಮಚ್ಚುವನೆ [10]ಭಾವಿಸಲು[10] ೧೨೧

ಎಂದತಿಹಿತನಂತೆ ನುಡಿದು ದುರ್ಮಂತ್ರಿಗ
ಳೊಂದಿದ ಪುಸಿನುಡಿಗಳನು
ಅಂದವನೆಯ್ದಿದನಿತ್ತ ಬಾದುರನೆದೆ
ಬಂದಿವಿಡಿದುದೆಣಿಕೆಯನು ೧೨೨

---

[1] ಮು (ಇ ಉ ಐ) [2] ದಿದ (ಎ ಗ) [3] ರಿ (ಉ) [4] ಮ್ಮ (ಅ ಉ)
[5] ವು (ಉ) [6] ತಿ (ಐ) [7] ದರ (ಅ) ದೊಡ (ಉ ಎ ಗ) [8] ನ (ಉ)
[9] ಡಂ (ಎ ಗ) [10] ಗಾಂಪನಿಳೆಗೆ (ಅ ಉ) * (ಉ) ಪ್ರತಿಯಲ್ಲಿಲ್ಲ.

ಪುಸಿಯಾಗದೀ ನುಡಿ ಕೊಪ್ಪರಿಗೆಗಳೇಳ
ನೆಸಲಂಜಿ ಸುರುತಾಳನೆನ್ನ
ಅಸುವಿಗೆ ಮುನಿ[1]ವನಿನ್ನಿರ್ದೊಡೆನಗೆ[1] ಕಾರ್ಯ
ಹಸನಲ್ಲವೆಂದು ಬಗೆದನು ೧೨೩

*ತರುಣಿಯರನು ಟೆಂಕೆಯ ಬಿಂದಿಗೆಗ[2]ಳನು[2]
ತೆರಳಿಸಿ ಮುಂದೆ ಬೇಗದೊಳು
ಭರದಿಂ[3]ದ್ವೈನೂಱು[3] ಸಂಜೋಗ[4]ದವರ[4]
ತುರಗವೆರ[5]ಸು[5] ತೆರಳಿದನು ೧೨೪

ಸು[6]ರು[6]ತಾಳನೆನಗೆ ಪಾಲಿಸಿದ ರಾಜ್ಯವ ನೋಡಿ
ಬ[7]ರಬೇಕೆನುತ[7] ಬಾದುರನು
ಭರದೊಳೊಯ್ಯನೆ ಪೊಱಮಟ್ಟನು ಡಿಳ್ಳಿಯ
ನರುಣೋದಯುದ ವೇಳೆಯೊಳು ೧೨೫

ಒಕ್ಕ[8]ಲ[8] ಕೊಂಡು ಬಾದುರಖಾನ ತೆಂಕಣ
ದಿಕ್ಕುವಿಡಿದು ದಾರಿಯನು
ಇಕ್ಕಿದನಸುರನ ಧಾಳಿ ಬಂದಡೆ ಮೇ
ಲಿಕ್ಕಿ[9]ಕೊಲು[9]ವೆನೆಂದೆನುತ ೧೨೬

ಅಱಿಯದಂತೊಕ್ಕಲ ಕೊಂಡು ಬಾದುರಖಾನ
ಪೊಱಮಟ್ಟು ಪೋದ ಗಡೆಂದು
ಮಱುದಿವಸಕೆ ಸುದ್ದಿ ಪುಟ್ಟಿತು ಡಿಳ್ಳಿಯೊ
ಳಱಿದರಲ್ಲಲ್ಲಿ ಮಲ್ಲುಕರು ೧೨೭

ಜೂದಿನ ಕಟ್ಟೆ ಮ್ಯಾಲಿಗೆ ಸಂತೆಯಂಗಡಿ
ಬೀದಿ [10]ಚವುವಟ್ಟೆ[10]ಗಳೊಳಗೆ
[11]ಬಾದುರನವರ[11] ಕಾಣದೆ ಬಾದುರನೋಡಿ
ಹೋದನೆಂದ[12]ಱಿದರಲ್ಲಲ್ಲಿ[12] ೧೨೮

---

[1] ವನಿಂತಿರ್ದೊಡೆನಗೆ (ಅ) ದನಿಂತಿರ್ದೊಡೆನಗೆ (ಇ ಎ ಗ) ವನಿಂತಿರ್ದೊಡೆನ್ನಯ (ಉ) [2] ಳ (ಇ ಉ ಐ) [3] ದ್ವೈನೂಱ (ಅ ಉ) ತಾನ್ವೈನೂಱು (ಐ) [4] ದಬಲು (ಇ ಉ) ದ (ಐ) [5] ಸಿ (ಐ) [6] ರಿ (ಉ) [7] ರಬೇಕು ಎಂದು (ಅ) ರುವೆನೆನುತ (ಉ) [8] ಲು (ಗ) [9] ತಿವಿ (ಅ ಇ) [10] ಚಾವ್ವಟ್ಟಿ (ಇ) ಚವ್ವಟ್ಟೆ (ಎ ಐ) [11] ಬಾದುರನವನ (ಅ) ಭೇದಿಸಿನೋಡಿ (ಎ ಗ) [12] ವರು ತಿಳಿದರು (ಐ) * (ಎ ಗ) ಪ್ರತಿಗಳಲ್ಲಿಲ್ಲ.

ಸುಳು[1]ಹ ಕಾ[1]ಣದೆ ಬಾದುರನ ಮಂದಿ ಕುದುರೆಯ
ತಳವಾಱಿರವನ[2]ರಮನೆಯ[2]
ಒಳ[3]ಹೊ[3]ಕ್ಕು ನೋಡಿ [4]ಬಾದುರ[4]ನೋಡಿಹೋದುದ
ತಿಳಿದು ನೇಮಿಗೆ [5]ಬಿನ್ನವಿಸಲು[5] ೧೨೯

ಕೇಳಿ ಮೆಲ್ಲನೆ ನೇಮಿಖಾನನಾ ಸುದ್ದಿಯ
[6]ಹೇ[6]ಳಲು ಸು[7]ರು[7]ತಾಳನಿಗೆ
ತಾಳಿ ಕೋಪವ [8]ಮನದೊ[8]ಳು ನೇಮಿಯ ಕೂಡೆ
ಹೇಳಿದನಸುರನಿಂತೆಂದು ೧೩೦

ಹೊಕ್ಕಲ್ಲಿ ಹೊಗಲಿ ಕ[9]ಳು[9]ಪು ಧಾಳಿಯನೊಂದು
ಲಕ್ಕಕುದುರೆಯ ಬೆಂಬಿಡದೆ
ಸಿಕ್ಕದಿನ್ನೆಲ್ಲಿಗೆ ಪೋದಪನವನ ಹಿಂ
ದಿಕ್ಕಿಕೊಂಬರಸುಗಳುಂಟೆ ೧೩೧

ಕೇತಾರ ಸೇತುವಿನೊಳಗಾದ ಭೂತಳ
ದಾತಗಳೆನ್ನ [10]ಸೇವಕ[10]ರು
ಏತ[11]ಕೆ[11] ಮಾತಿದಕೆನುತಸುರೇಂದ್ರ ಕೋ
ಪಾತುರ[12]ದಿಂದ[12] ಪೇಳಿದನು ೧೩೨

ಸುರುತಾಳನಾಜ್ಞೆಯನಾಂತು ಶಿರದೊಳತಿ
ಭರದಿಂದ ನೇಮಿಮಲ್ಲುಕ[13]ನು[13]
ಬರಿಸಿ ಖಾನರ [14]ಒಂ[14]ದುಲಕ್ಕಕುದುರೆಯನು
ಹರಿಯಬಿಟ್ಟನು ಧಾಳಿಯನು ೧೩೩

ಆದರಿಸುತ ಕುದುರೆಗಳನು ಖಾನರು
[15]ಹೋ[15]ದರೇಳೆಂಟು ಗಾವುದವ
ಬಾದುರನನು ಕಂಡರು ದೂರದೊಳನು
ವಾದ[16]ರು[16] ತಾಗ[17]ಲವನನು[17] ೧೩೪

---

[1] ಹುಗಾ (ಎ) [2] ಮನೆಯನು (ಇ ಎ ಗ) [3] ಪೊ (ಇ ಉ ಐ)
[4] ಬಂದವ (ಅ ಇ ಉ ಎ ಗ) [5] ಪೇಳಿದರು (ಅ ಇ ಉ ಎ ಗ) [6] ಪೇ (ಅ ಉ)
[7] ರಿ (ಉ) [8] ನೆದೆಯೊ (ಎ ಗ) [9] ಳಿ (ಗ) [10] ಕಿಂಕರ (ಐ) [11] ಕಾ (ಉ)
[12] ದಿ (ಇ) [13] ರ (ಎ ಗ) [14] ನೊಂ (ಇ ಉ ಎ ಗ) [15] ಪೋ (ಉ) [16] ದು (ಅ)
[17] ಲೆಂದವರು (ಐ).

ಲಕ್ಕಕುದುರೆಯ ಧಾಳಿಯ ಕಂಡು ಮನದೊಳು
ಹೊಕ್ಕಳಿಸಿದನೆ ಬಾದುರನು
ಒಕ್ಕಲ ತೆರಳಿಸಿ ಮುಂದಕೆ ಬೇಗದೊ
ಳಿಕ್ಕಿದ ಪೌಜನವ[1]ರ[1]ಗೆ ೧೩೫

ಲಕ್ಕಕುದುರೆಗೈನೂಱು ಕುದುರೆಯ ಪೌ
ಜಿಕ್ಕಿದ ಖಾನಗೇಣಿಯನು
ಇಕ್ಕಬಹುದು [2]ತುಱುವಿಡಿ[2]ದ ಕೌರ[3]ವನ[3] ಬ
ಲಕ್ಕಿದಿರಾದ ವೀರ[4]ನ[4]ನು ೧೩೬

ಕಾದಲೋಡಲಿ ಸಾಯಲಿ ನಮ್ಮ ಬಲಕಿದಿ
ರಾದ ಬಾದುರಖಾ[5]ನನಿ[5]ಗೆ
ಮೇದಿನಿಯೊಳಗೇಣಿಯಿಲ್ಲೆಂದು ಮಲ್ಲುಕ
ರಾದರದಿಂ ಪೊಗಳಿದರು ೧೩೭

ಗದೆ ಬಲ್ಲೆ[6]ಹ[6] ಕಕ್ಕಡೆ ಬಿಲ್ಲು ತರಕಸ
ಹೆದೆ ಹೊದೆಯೊಳಿಗದವರ
ಕುದುರೆಗಳಿಪ್ಪತ್ತು ಬಳಸಿರೆ ಬಾದುರ
ಕದನಕಾದನು ಕಟ್ಟಾಳು ೧೩೮

ಕೊಂಬು [7]ಕಹಳೆ[7] ಗಿಡಿಬಿಡಿ ಲಗ್ಗೆವಱೆ ಡೋಳು
ತಂಬಟಗಳ ಬಲು[8]ಧ್ವನಿಗೆ[8]
ಅಂಬುಧಿ ತುಳ್ಕಾಡೆ ಖಾನಮಲ್ಲುಕರಾ
ಡಂಬರ[9]ದಿಂದೇ[9]ಱಿದರು ೧೩೯

*ಧರಣಿ ತನ್ನುರುಸಾರವ ತೆಗೆದಿನನ ಮೇ
ಲಿರದೆ ಧಾಳಿಯನಟ್ಟುವಂತೆ
ಖುರಪುಟನಿರ್ಗತಧೂಳಿ ಗಗನಕೇಳೆ
ಭರದಿಂದ ಖಾನ[10]ರೇಱಿ[10]ದರು ೧೪೦

---

[1] ನಿ (ಐ) [2] ತಱುಬಿ (ಎ ಗ) [3] ವ (ಅ ಉ) [4] ರ (ಐ) [5] ನಂ (ಅ ಇ ಉ ಎ ಗ) [6] ಯಃ (ಇ ಎ ಗ) [7] ಕೊಳಲು (ಐ) [8] ಧನಿಗೆ (ಇ ಐ) ನಿನದ (ಎ ಗ) [9] ಮಿಗಲೇ (ಐ) [10] ರೈದಿ (ಎ ಐ) * (ಉ) ಪ್ರತಿಯಲ್ಲಿಲ್ಲ.

ಸಿಡಿಲ ಜಂಗುಳಿಯಂತೆ ಸಿಂಗಾಡಿ ಗಗನದೊ
ಳೆಡೆವಿಡದಿರಲೆಯ್ತಂದು
ಬಿಡದೆ ಕಱೆದ[1]ರಂಬಿ[1]ನ ಮಳೆ[2]ಯನು[2] ಕ
ಯ್ಯುಡುಗದೆ ಖಾನಮಲ್ಲುಕರು ೧೪೧

ಹಿಳುಕ ಕೆನ್ನೆಗೆ ಸೇದಿ ಬೊಬ್ಬೆಯಬ್ಬರ[3]ದಿಂದ[3]
ತಳುವದೆ ಖಾನಮಲ್ಲುಕರು
ನಿಲು ನಿಲು [4]ಹೋ[4]ಗದಿರೆನುತೆಚ್ಚು ತಮ್ಮ ಕ
ಯ್ಯಳವ ತೋಱಿದರು ಬಾದುರಗೆ ೧೪೨

ನಸುನಗುತಾ ಬಾದುರಖಾನನವರೆಚ್ಚ
ಹೊಸಮಸೆಪದ ಬಾಣಗಳನು
ಕುಸುರಿದಱಿದು ಸುಭಟರನಂಬುಗಳಿಂದ
ಮುಸುಕಿ ಮೂದಲಿಸಿ ಜಱೆದನು ೧೪೩

ಎಡಬಲದೊಳು ಬಂ[5]ದೆಸೆ[5]ವ ರಾವುತರನು
ಕೆಡಹಿದನಿದಿರಾದ[6]ರನು[6]
ತಡೆಗಡಿದನು ಹೊಗರೊಗುವ ಸರಳ್ಗಳ
ಗಡಣದಿಂದಾ ಬಾದುರನು ೧೪೪

*ಶಿರಗಳೊಡೆಯೆ ಸೀಸಕ ಪುಡಿಪುಡಿಯಾಗೆ
ತುರ[7]ಗದೊ[7]ಡಲನಂಬುಚ್ಚಳಿಸೆ
ಇರದೆ ಬಾದುರನೆ[8]ಚ್ಚು[8] ವೈರಿವೋಹರವನು
ಹೊರ[9]ಳೆ[9]ಯೊಡೆಯೆ ಕಲಕಿದನು ೧೪೫

*ಬೊಬ್ಬಿ[10]ಱಿ[10]ದೆಸಲು ಬಾದುರಖಾನ ಕಣೆಗಳು
ತೆಬ್ಬನೊ[11]ಡೆ[11]ದು ರಾವುತರ
ಕೊಬ್ಬಿದೊಡಲನುಗಿಬಗಿಮಾಡಿ ಗಗನವ
ಹಬ್ಬಿ[12]ದವೇ[12]ನ ಪೇಳುವೆನು ೧೪೬

---

[1] ರಲಗಂಬಿ (ಐ) [2] ಯು (ಐ) [3] ದಿಂ (ಐ) [4] ಪೋ (ಉ) [5] ದೆಸು (ಉ) ಡೆಸು (ಐ ಗ) [6] ವರ (ಇ ಉ ಎ ಗ) [7] ಕರೊ (ಎ) [8] ಚ್ಚ (ಅ) [9] ಳ (ಐ) [10] ಡ (ಅ) [11] ದೆ (ಐ) [12] ದುದೇ (ಎ ಗ) * (ಉ) ಪ್ರತಿಯಲ್ಲಿಲ್ಲ.

ಕರು[1]ಳು[1]ಗೆ ಕಾಳಿಜ ಕಱಿಯೆ ನೆತ್ತರ ಮಳೆ
ಸುರಿಯೆ ಮಿದುಳ ಮೆದೆ[2]ಯೇಳೆ[2]
ಧುರದೊಳು ಪರಿದಾಡಿ ಖಾನರೆಲ್ಲರ ಸಂ
ಹರಿಸಿದವವನಂಬುಗಳು ೧೪೭

ಖಂಡ ಕೆದಱಿ ಕೈ ಕಾಲು ತೊಡೆಗಳುಱಿ
ತುಂಡಿ[3]ಸೆ[3] ಖಾನಖಾನರನು
ದಿಂಡುಗೆಡಹಿ ಬಾದುರಖಾನ ರಣದೊಳು
ಗಂಡುತನವನು ಮೆಱೆದನು ೧೪೮

*[4]ಸ[4]ರಿಯೆ ಸವಗ ಜೋಡು ಜರಿಯೆ ಬಿರುದರ ಮೈ
ಬಿರಿಯೆ ಸುಭಟರಟ್ಟೆಗಳು
[5]ಪ[5]ರಿಯೆ ಪರಿದ[6]ವು[6] ಬಾದುರನಂಬುಗಳು ಧುರ
ಧರಣಿಯೊಳೇನ [7]ಬಣ್ಣಿಪೆ[7]ನು ೧೪೯

[8]ಹೊ[8]ಕ್ಕೆ[9]ಸು[9]ವಹಿತ ಮೋಹರವನೆಲ್ಲವ ಬಿಡ
ದೊಕ್ಕಲಿಕ್ಕಿದವು ಹಯಗಳ
ಹಕ್ಕರಿಕೆಯ ಹ[10]ಱಿ[10]ಗಡಿದವು ಬಾದುರ
ನುಕ್ಕಿನ ಬೋಳೆಯಂಬುಗಳು ೧೫೦

ಒಗ್ಗೊಡೆ[11]ದೋಡಿತು[11] ಖಾನರ ಮೋಹರ
[12]ವ[12]ಗ್ಗಿತು ಮಲೆತ ರಾವುತರ
ಮೊಗ್ಗರವೆಂದೆನಲಾ ಬಾದುರಖಾನ
ನಗ್ಗಳಿಕೆಯ[13]ನೇನ[13]ನೆಂಬೆ ೧೫೧

ಅಱಿಕೆಯ ಖಾನರೆಲ್ಲರ ಕೊಂದು ಧಾಳಿಯ
ಮುಱಿಯಲಿಱಿದು ಮುಂದುಗೆಡಿಸಿ
ನೆಱೆಗಲಿ ಬಾದುರನೊಕ್ಕಲ ಕೊಂಡು ಹೆ
ದ್ದೊಱೆಯ ದಾಂಟಿದನು ಬೇಗದೊಳು ೧೫೨

---

[1] ಳೊ (ಇ ಉ ಎ ಐ) [2] ಯೊಸೆಯೆ (ಉ) [3] ಸಿ (ಅ ಇ ಉ) [4] ಪ (ಐ) ಸು (ಉ) [5] ಸ (ಗ) [6] ರು (ಅ) [7] ಪೇಳುವೆ (ಅ) [8] ಫೊ (ಉ) [9] ಸ (ಉ ಐ) [10] ಱೆ (ಐ) [11] ದುದು (ಎ ಗ) [12] ಮು (ಎ ಗ) ನು (ಐ) [13] ನೇ (ಎ ಗ)
* (ಉ) ಪ್ರತಿಯಲ್ಲಿಲ್ಲ.

ಗಡಿಯ ಕಾ[1]ವ[1]ಲ ಮನ್ನೆಯರು ಬಾದುರನನು
ತಡೆದು ನಿಲಿಸಿ ರಾಯನೆಡೆಗೆ
ಒಡನೆ ಚರರನಟ್ಟಿದರು ಖಾನ[2]ನೊ[2]ರ್ವನ
ನುಡಿಯ ಬಲ್ಲನ ಕೂಡಿಕೊಟ್ಟು ೧೫೩

ತಳುವದವರು ಬಂದು ಕಂ[3]ಡು[3] ರಾಯನ ಪದ
ನಳಿನವ[4]ನಾ[4] ಬಾದುರನ -
ಒಳುನುಡಿಕಾಱನ ಕಾಣಿಸಲವ[5]ನಂದು[5]
[6]ಇ[6]ಳೆಗೆ ಮಯ್ಯಿಕ್ಕಿ ಬಿ[7]ದ್ದೆದ್ದು[7] ೧೫೪

ಬಿಲ್ಲು ಬಂದುದನದಱಿಂದ ಕೊಪ್ಪರಿಗೆಯು
ನಿಲ್ಲದೆಚ್ಚುದನು ಬಾದುರಗೆ
ಬಲ್ಲದ ಸುರುತಾಳ[8]ನೆಣಿಸಿ[8]ದ ಕಾರ್ಯವ
ನೆಲ್ಲವ ಬಿ[9]ನ್ನೈ[9]ಸಿದನು ೧೫೫

ಕೇಳಿ ನೃಪತಿ ಮಂತ್ರಿಯೊಡನೆ ರಾಮನ ಮುಂ
ದಾಳೋಚಿ[10]ಸಲು[10] ಕಾರ್ಯವನು
[11]ಪೇ[11]ಳಿದನಾ ಮಂತ್ರಿಚೂಡಾಮಣಿ ಸರ
ಸಾಳಾಪದಿಂದ ರಾಯನಿಗೆ ೧೫೬

ನವಲಕ್ಕ ತುರಗಾಧಿಪತಿ ಹಿಮಸೇತುವಿ
ನವನಿಗೊಡೆಯ ಸುರುತಾಳ
[12]ಅ[12]ವನ ಮಱವೆ ನಮ್ಮ ಬದುಕವನೆಚ್ಚಱು
ಜವನಗರಿಯ ದಾರಿ ನಮಗೆ ೧೫೭

ಆ ಸುರುತಾಳನ ಖಾನನ ಕರೆದುಕೊಂ
ಬಾಸುರಕೃತ್ಯ[13]ಬೇಡೆ[13]ಮಗೆ
ಪೈಸರಿಸುವುದದನೆಂದು ಮಂತ್ರೀಶ್ವರ
ನೋಸರಿಸದೆ ಪೇಳಿದನು ೧೫೮

---

[1] ವಿ (ಅ) [2] ನನೋ (ಐ) [3] ಡರು (ಎ ಗ) [4] ನು (ಗ) [5] ರಂದು (ಅ) ನಂ (ಐ) [6] ದಿ (ಐ) [7] ಳ್ದೆಳ್ದು (ಐ) [8] ನೊಲಿ (ಅ) [9] ನ್ನವಿ (ಎ ಗ) [10] ಸಿದ (ಐ) [11] ಹೇ (ಐ) [12] ನ (ಐ) [13] ವೇಕೆ (ಐ).

ಬಲಯುತ[1]ರೊ[1]ಡನೆ ಬವರವ ಬಯಸುವ ಗಾ
ವಿಲ ಮಲಗಿರ್ದ ಹುಲಿಯನು
ಸಲೆ ತಿವಿದೆಬ್ಬಿಸಿ ಸಮರಕೆ[2]ಳೆ[2]ಸುವನ
ಕುಲಗುರುವಾಗದೇನಿಹನೆ ೧೫೯

ಎಂದು ನುಡಿಯೆ ಮಂತ್ರಿ ನೃಪತಿ ರಾಮನ ವದ
[3]ನೇಂದುವ ನೋಡಲಂದ[3]ವನು
ಮಂದಹಾಸನದಿಂದ ಮಂತ್ರೀಶ್ವರ[4]ಗಿಂ[4]
ತೆಂ[5]ದು ನುಡಿದನು ಕಾರ್ಯ[5]ವನು ೧೬೦

ಅಹುದು ನೀನಾಡಿದ ನುಡಿ ರಾ[6]ಜ[6]ಕಾರ್ಯದ
ಗಹನಗಂಭೀರೋಕ್ತಿ ನಮ್ಮ
ಮಹಿಮೆಯ ಕೆಡಿಸಬೇಕೆಂಬುದಲ್ಲದೆ ಬೇಱೆ
[7]ವಹಣಿಯುಂಟೇ[7] ದಾನವಗೆ ೧೬೧

ಆರ ಕರೆದುಕೊಂಡನೆಂದು ಕೆಡಿಸಿದನು
ವೀರರುದ್ರನ ಸು[8]ರು[8]ತಾಳ
ಆರ ಹಿಂದಿಕ್ಕಿದನೆಂದು ಕೆಡಿಸಿದನಂ
ದಾ ರಾಮದೇವರಾಯನನು ೧೬೨

ಏನ ಮಾಡಿದನೆಂದು ರಣಹಮ್ಮೀರನ
[9]ದಾ[9]ನವಪತಿ ಕೆಡಿಸಿದನು
ಏನ ಮಾಡಿದನೆಂದು ದ್ವೋರಸಮುದ್ರದ
ಮಾನವಪತಿಯ [10]ಹಿ[10]ಡಿದನು ೧೬೩

ಹುಲಿಗೆ ಹರಿಗೆ ಬೆಕ್ಕಿಗುರಗಗೆ ಪಶು ಕರಿ
ಯಿಲಿ ಕಪ್ಪೆಯೆಂಬಿವೆಸಗಿದ
ಬಲುವೈರವಾವುದು ಬಡವನ ಬಲ್ಲಿದ
ಕೊಲುತಿಹನೀ ಯುಗದೊಳಗೆ ೧೬೪

---

1 ನೊ (ಐ) 2 ಣೆ(ಅ) 3 ನೇಂದುವ ನೋಡಲೆಂದ (ಇ ಐ) ನಾರವ ನಿಟ್ಟಿಸಲ (ಉ) 4 ನಿಂ (ಅ) 5 ದನಾ ಕಾರ್ಯದಿರ (ಐ) 6 ಜ್ಯ (ಅ) 7 ವಹಣಿವುಂಟೇ (ಅ) ವಿಹರಿಸಲುಂಟೆ (ಉ) ವಹಿಣಿಯುಂಟೇ (ಎ ಗ) 8 ರಿ (ಉ) ರ (ಎ) 9 ಮಾ (ಐ) 10 ಪಿ (ಉ).

ತರಳಾಕ್ಷಿಯರನುಳ್ಳವ ಭೂಮಿ[1]ಯುಳ್ಳ[1]ವ
ವರವಸ್ತು ವಾಹನಾದಿಗಳ
ಪಿರಿದನುಳ್ಳವನೆ ನೃಪಾಭಾಸರಿಗೆ ವೈರಿ
ವರಮಂತ್ರಿ ನೀನಱಿಯದುದೆ ೧೬೫

ಬಾದುರಖಾನನ ಕರೆದುಕೊಳ್ಳ[2]ದೊ[2]ಡೆಮ್ಮ
ನಾ ದನುಜೇಂದ್ರ ಬಿಟ್ಟಪನೆ
ಆದುದಾಗಲಿ ಮಱೆವೊಗೆ ಬಂದ ಖಾನನ
ನಾದರದಿಂ ಬರಿಸಾರ್ಯ್ರ ೧೬೬

ಮ[3]ಱೆಗೆ[3] ಬಂದವ ಮಡದಿಯುರಂತಲ್ಲದೆ
ಮಱೆಯೇನು ಬೇಱೊಂದಲ್ಲ
ಮಱೆ[4]ವೊ[4]ಕ್ಕವರ [5]ಕಾಯ್ವರೆಂದೆಂಬ ಬಿರಿದಿನ
ಹೊಱೆಗೆಯ್ದೀಗ ಕರೆಯಿಸಿ[5] ೧೬೭

ಭೀತಗಭಯವ ಕ[6]ಯ್ಯಾಂತು[6] ಬೇಡಿದ [7]ವಂ[7]ದಿ
ವ್ರಾತ[8]ಕೆ[8] ಕೊಡದೆ ಧನವನು
ಭೂತಳಾಧಿಪನೆಂದೆನಿಸಿಕೊಂಬುದಿದು ಬಲು
[9]ಬೂ[9]ತಾಟ[10]ವೆನೆ[10] ರಾಮನಾಥ ೧೬೮

ತಪ್ಪದು ರಾಮನಾಡಿದ ಮಾತಿದು ಬೈ
ಚಪ್ಪ ಬಾದುರಖಾನನನು
ಬಪ್ಪಂ[11]ತೆ[11] ಮಾಡು ನೀನೇಳೆಂದು [12]ರಾಯನಂ[12]
ದೊಪ್ಪಿ ಕರೆಯ ಕಳು[13]ಪಿ[13]ದನು ೧೬೯

---

[1] ಯನೆಲ್ಲ (ಇ ಎ ಗ) [2] ದ (ಅ ಗ) [3] ಱೆ (ಅ) ಱೆ ಯೊಗ (ಎ ಗ) [4] ಯೊ (ಉ) ಹೊ (ಗ) [5] ಕೊಡದೆ ಕಾವರೆಂದೆಂಬ। ಬಿರಿದಿನಹೋಱೆಗೆ ಕರೆಯಿಸು (ಐ) [6] ಯಾತು (ಇ) [7] ಮಂ (ಗ) [8] ಕ್ಕೆ (ಅ ಎ ಗ) [9] ಭೂ (ಅ ಎ ಗ) [10] ವೆ (ಐ) [11] ತು (ಗ) [12] ನೃಪತಿಯುಂ (ಐ) [13] ಹಿ (ಐ).

ಬಲುಮನ್ನೆಯರನಟ್ಟಿ ಬೈಚಪ್ಪ ಖಾನ[1]ನ[1]
ಬಲವೆರಸಂದು ಕರೆಯಿಸಿ
ಒಲಿದು ರಾಯನ [2]ಕಾಣಿ[2]ಸಿ ರಾಮನಾಡಿದ
ಬಲುಮಾತುಗ[3]ಳನು[3] ಪೇಳಿದ[4]ನು[4]　　೧೭೦

ಸಾವಿರ ಕುದುರೆಯ ವಳಿತವನಾ ಖಾ[5]ನ[5]
[6]ಗಾ[6]ವೇಳೆಯೊಳೊಸೆದಿತ್ತು
ಆವುದಕೆಣಿಕೆಬೇಡೆಂದಭಯವನಿತ್ತು
ಭೂವರ ಕ[7]ಳು[7]ಪಿದನವನ　　೧೭೧

*ಇದು ಪರದಾರ ಸೋದರ ರಾಮನಾಥನ
ಪದಕೃತಿಯೊಳಗೈದನೆಯ
ವಿದಿತಾಶ್ವಾಸದೊಳೆರಡನೆಯದು ಸಂಧಿ
ಮೃದುಪದಚಯಸಂಬಂಧಿ　　೧೭೨

---

[1] ರ (ಐ)　[2] ಕರೆಯಿ (ಉ)　[3] ಳ (ಐ)　[4] ರು (ಅ ಇ)　[5] ನಗೆ (ಅ)　[6] ಅ (ಅ)　[7] ಳಿ (ಎ ಗ)　* (ಇ ಉ) ಪ್ರತಿಗಳಲ್ಲಿ ಮಾತ್ರ ಇದೆ.

# ಹತ್ತೊಂಬತ್ತನೆಯ ಸಂಧಿ

---

## ನೇಮಿಯು ದಂಡೆತ್ತಿಬಂದುದು

ಅತ್ತ ಖಾನರು [1]ಬಾದುರಗೆ ತಾವೆಲ್ಲ[1] ಬೆ
ನ್ನಿತ್ತೋಡಿ ಬಂದ ಸುದ್ದಿಯನು
ಒತ್ತರಿಸಿಂತು ನುಡಿದರು ನೇಮಿಯ ಕೂಡೆ
ಹೊತ್ತಹೋಖಿಗೆಯಿದೆಂಬಂತೆ ೧

ಮುಂದಣ ಚೂಣಿಯ ಮುಖಿಯಲಿಖಿದು ಬೇಗ
ದಿಂದ ಬಾದುರ ಬಲವೆರ[2]ಸು[2]
ನಿಂದಲ್ಲಿ ನಿಲ್ಲದೆ ಕಾಣಿಸಿಕೊಳ್ಳ[3]ದೆ[3]
[4]ಬಂದು[4] ಹೊಕ್ಕನು ಕುಮ್ಮಟವನು ೨

ಹಿಂದಿಕ್ಕಿಕೊಂಡೆನು ಬಾದುರಖಾನನ
ನೆಂದು ನುಡಿಯೆ ಕಂಪಿಲನು
ಬಂದೆವು ನಾವದಖಿಂದೆಂದು ಮಲ್ಲುಕ
ರಂದು ನೇಮಿಗೆ ಬಿನ್ನವಿ[5]ಸಲು[5] ೩

ಸುರುತಾಳಗಾ ಸುದ್ದಿಯ ನೇಮಿ[6]ಖಾನನು[6]
ಭರದಿಂದ ಪೋಗಿ ಬಿ[7]ನ್ನವಿ[7]ಸೆ
ತೆರಳಿನ್ನೇಕೆ ಸಂದೇಹ ಕು[8]ಮ್ಮ[8]ಟಕೆಂ
ದೊರೆದನವನಿಗಸುರೇಂದ್ರ ೪

ಕುಮ್ಮಟವನು ಮುತ್ತಿ ಕಂಪಿಲದೇವನ
ಹಮ್ಮ ಮುಖಿದು ರಾಮನನು
ಘಮ್ಮನೆ [9]ಹಿಡಿ[9]ತಂದೆಮಗೊಪ್ಪಿಸೆಂದವ
ನುಮ್ಮಹ[10]ದಿಂದ ನುಡಿ[10]ದನು ೫

---

[1] ತಾವೆಲ್ಲ ಬಾದುರಗೆ (ಐ) [2] ಸಿ (ಉ ಐ) [3] ದೆಮ್ಮಕ್ಕೆ (ಅ ಐ)
[4] ಯಿಂದ (ಅ ಐ) [5] ಸಿದರು (ಎ) ಸೆ (ಗ) [6] ಮಲ್ಲುಕ (ಐ) [7] ನ್ನೈತ್ರ (ಐ)
[8] ಮ (ಉ) [9] ಹಿಡಿದು (ಇ ಎ) [10] ದಿಂ ಪೇಳಿ (ಉ ಎ ಗ) ದಿಂದ ಉಸುರಿ (ಐ).

ಕೊಲುವ ಹುಲಿಗೆ ಕೋಲುಗೊಂಡೆಗ್ಗನಂತೆ ಕಂ
ಪಿಲನೆನ್ನ ಬಂಟ ಬಾಮುರನ
ನೆಲದ ಗರ್ವ[1]ದಲಿ[1] ಹಿಂದಿಕ್ಕಿಕೊಂಡನೆ ಪೋಗಿ
ನೆಲೆಗೆಡಿಸೆಂದು ಪೇಳಿದನು　　೬

ಉಡುಗೊಱೆಯಿತ್ತು ಚಿತಾಳಾಪಗಳಿಂ
ದೊಡನೆ ನೇಮಿಯು [2]ತೆರಳಿಸ[2]ಲು
ನಡೆದನು ಚತುರಂಗಬ[3]ಲ[3]ಭಾರದಿಂ ತಲೆ
ಗೊಡ[4]ಹೆ[4] ದಿಶಾದಂತಿಗಳು　　೭

ತುರಗ[5]ಚಾ[5]ತುರ್ಲಕ್ಷ ಕರಿ[6]ಯಾ[6]ಱು ಸಾವಿರ
ಕರಭವಿಚ್ಛಾರ್ಬಸಿರವೆ[7]ರಸಿ[7]
ತೆರಳಿದನಂದತಿ[8]ಭರದಿಂದ[8] ಕರ್ನಾಟ
ಧರಣಿಗೆ ನೇಮಿಮಲ್ಲುಕನು　　೮

ಕೊಟ್ಟಿಗೆ ಕೊಲ್ಲಾರದ ಭಂಡಿ ಟೆಂಕೆಯು
ಪೆಟ್ಟಿಗೆ ಗುಡಿಗಳ ಹೊಱುವ
[9]ಒಟ್ಟೆ[9]ವೆರ[10]ಸಿ[10] ತೆರಳಿದನಂದು ರಾಮನ
ಮುಟ್ಟಿ ಪಿಡಿವ ತವಕ[11]ದೊಳು[11]　　೯

ಭಂಗಿಯ ಭಂಡಿಯ ಪಿನಿಯ ಕೊಟ್ಟಿಗೆಯುರಿ
ಸಿಂಗಿಯ ಹೊಱೆಯುಮ್ಮತದ
ಪೊಂಗಿದಿಟ್ಟಿಯ ಬೀಜದ ಹೇಱು ನಡೆದವಾ
ಭಂಗನೇಮಿಯ ದಂಡಿನೊ[12]ಡನೆ[12]　　೧೦

*ತಿತ್ತಿ ಸಿದ್ಧಿಗೆ ತೊ[13]ಗ[13]ಲ್ವೇಱಿನೊಳಗೆ ಬಂ
ದತ್ತು ಗಂಗಾಸಾಗರ[14]ವು[14]
ಎತ್ತಿ [15]ಬಾಹಂ[15]ತೆ ಗಂಗಾಸಾಗರ ಬೆಂ
ಬತ್ತಿ ಸೇನಾಶರ[16]ನಿಧಿಯ[16]　　೧೧

---

[1] ದೊಳು (ಇ ಉ ಐ ಗ)　[2] ಬೀಳ್ಕೊಡ (ಐ)　[3] ಲು (ಐ)　[4] ಹಿ (ಎ)
[5] ಚ (ಎ ಗ)　[6] ಮೂ (ಉ ಎ ಗ)　[7] ಸೆಯೆ (ಅ ಇ) ರಸು (ಉ)　[8] ವಿಭವದಿಂ
(ಅ ಇ ಉ ಐ ಗ)　[9] ಒಂಟೆ (ಎ ಗ)　[10] ಸು (ಇ ಎ ಗ)　[11] ದಲಿ (ಉ ಐ)
[12] ಳಗೆ (ಇ ಎ ಐ)　[13] ವ (ಇ ಎ ಗ)　[14] ವಿರದೆ (ಐ)　[15] ಬಂದಂ (ಐ)
[16] ನಿಧಿಯು (ಅ) ಧಿಯನು (ಐ) ನಿಧಿಯನು (ಗ)　*(ಉ) ಪ್ರತಿಯಲ್ಲಿಲ್ಲ.

ಮಾಳವ ಮಗಧ ನೇಪಾಳ ಗುರ್ಜರ ಗೌಳ
ಲಾಳದೇಶಗಳ ಹಿಂದಿಕ್ಕಿ
ಮೇಳದ ಖಾನರೊಡನೆ ಮಾತನಾಡುತ
ಲೀಲೆಯಿಂದೆಯ್ತಂದನಂದು ೧೨

ಬಂದು ಬಿದಿರೆಯೊಳು ಬಿಟ್ಟನದನು ಬೇಗ
ದಿಂದ ಬೇಹಿನವರೆಯ್ತಂದು
ಅಂದು ಬಿ[1]ನ್ನವಿ[1]ಸೆ ಕಂಪಿಲ[2]ನದ[2]ನವ ತನ್ನ
ನಂದನನೊಡನೆ ಪೇಳಿದನು ೧೩

ಬಳಿಕ ನುಡಿದನು ಕುಮಾರ ತಂದೆಗೆ [3]ತ[3]ಮ್ಮ
ಬಲವನೆಲ್ಲವ ಕೂಡಿಕೊಂಡು
ತಳುವದೆ ಕುಮ್ಮಟಕೆಯ್ದಿ ನೇಮಿಯು ಕೂಡೆ
ಕಲಹವ [4]ಮಾಡ[4]ಬೇಕೆಂದು ೧೪

ಒ[5]ಡ[5]ಬಟ್ಟನರಸನೊಪ್ಪಿದ ಮಂತ್ರಿ ಬಾದುರ
ನೊಡನಹುದೆಂದು [6]ಮ[6]ಚ್ಚಿದನು
ಸಡಗರಿಸಿದನು ಸಂಗಮದೇವ [7]ಕುವರ[7]ನ
ನುಡಿಗೆ ಕಾಟಣ್ಣ ನಲಿದನು ೧೫

ನಾಯಕರೆಕ್ಕಟಿಗರು ಬಲುರಾವುತ
ಪಾಯಕರವನೀಶ್ವರರು
ಓಯಾರದಿಂದೆಡಬಲದೊಳು ಬರೆ ದಂಡ
ನಾಯಕ ತೆರಳಿದನಂದು ೧೬

ಸವಗ ಸೀಸಕ ಜೋಡು ವಜ್ರಾಂಗಿ [8]ಮೊಚ್ಚೆ[8]ಯ
ಲವುಡಿ ಸಿಂಗಾಡಿ ತರಕಸ
ತಿವಿವ [9]ಕಕ್ಕಡೆ[9] [10]ಯಿಡು[10]ಗಟ್ಟಿಗೆ ಮೆಱೆಯಲಾ
ಹವಕೆಯ್ದಿದರು ರಾವುತರು ೧೭

ತಲೆಯ ಠವುಳಿ ಮೆಯ್ಜೋಡು ಚೂಡಾಯುತ
ತಳಪದ ಕತ್ತಿ ಹರಿಗೆಯ
ಬಲುಮುಂದಿ ಪೊಱಮಟ್ಟುದು ದಂಡನಾಥನ
ಕೆಲಬಲದೊಳ[11]ಗೆ[11] ಖೋಯೆನುತ ೧೮

---

[1] ನ್ನೈಠ (ಐ) [2] ಗದ (ಎ ಗ) [3] ನ (ಐ) [4] ನೆಸಗ (ಐ)) [5] ಡಂ (ಎ ಗ) [6] ಮೆ (ಎ ಉ ಗ) [7] ರಾಮ (ಇ) [8] ಭಲ್ಲೆ (ಉ) [9] ಕಟ್ಟಿಗೆ (ಐ) [10] ಇಡಿ (ಅ) [11] ಯ್ದ್ದ (ಇ).

*ಬಿಲ್ಲಂಬು ಬಿಗಿದ ಕೈಪೊಡೆ ಪಡಿವೆದೆಯುಡಿ
ಝುಲ್ಲಿ ಬತ್ತಳಿಕೆ ಕಯ್ಯಂಬು
ನಿಲ್ಲದೆ[1]ಸೆಯೆ[1] ಪೊಱಮಟ್ಟರು ರಾಯನ
ಬಿಲ್ಲವರಂದು ಬಿಂಕದೊಳು ೧೯

ಬಱುನುಂಡೆ ಬಳಿದ ಬಾವನ್ನ ಸುಲಿದ ಪಲ್ಲು
ಮಿಱುಪ ಸಬಳ ಕೈ[2]ಕ[2]ತ್ತಿ
ಮೆಱೆಯೆ ಸಬಳಿಗರೆಯ್ತಂದರು ತುರುಕರೊ
ಳೆಱೆದಾಡುವ ತವಕದೊಳು ೨೦

*ಇಡುಗುಂಡು ನಾಳಿವಿಲ್ಲಂಬು ಡೊಂಕಣಿ ಇಟ್ಟಿ
ಬಿಡದೆ ಬೀಱುವ ಪಾಶ ಲೌಡಿ
ಪೊಡೆವ ಪಟ್ಟೆಯ [3]ಪೊಯ್ಯ್ವ[3] ಕೊಡಲಿ ಕೈ[4]ಪಾ[4]ರೆಯ
ಕಡುಗಲಿ ಜೋಧರೆಯ್ದಿದರು ೨೧

ಒಕ್ಕಲಿಗರ ಪಡೆ [5]ಕೂಡಿ[5]ತು ಬೇಡರ
ಜೋಕೆಯ ಮಂದಿ ನೆರೆದುದು
ನೂಕಿ ನಡೆದನು ಬಿಡದೆ ದಂಡನಾಥನ
ನೇಕ ಬಲವ ಕೂಡಿಕೊಂಡು ೨೨

ಮೂಲಬಲ[6]ದ[6] ಕೂಟದ ಮನ್ನೆಯರನಂ
ದಾಲೋ[7]ಕಿಸುತ[7] ಬೈಚಪ್ಪ
ಲೀಲೆಯಿಂದೆಯ್ದಿ ಕುಮ್ಮಟದ ಮುಂಗಡೆಯೊಳು
ಪಾಳೆಯವನು ಮಾಡಿದನು ೨೩

ಬಳಿಕ ಬೈಚಪ್ಪ ಠಾ[8]ಣ[8]ಯದ ಮನ್ನೆಯರಿಗೆ
ಕೆ[9]ಳು[9]ಪಿದನಿರದೋಲೆ[10]ಗಳ[10]ನು
ಬಲ ಸಹ ಬಂದು ಬಿಟ್ಟ[11]ನು[11] ಕುಮ್ಮಟದೊಳು [12]ಕಂ
ಪಿಲನೃಪ ಸುತವೆರಸಂದು[12] ೨೪

---

1 ಸೆವ (ಅ) ಯ್ತರೆ (ಎ ಗ)  2 ಗ (ಉ)  3 ಕೈಯು (ಐ)  4 ಪೊ (ಎ ಗ)
5 ನೂಕಿ (ಐ)  6 ವ (ಅ ಎ)  7 ಚಿಸಿ (ಐ)  8 ಣೆ (ಇ ಎ ಐ ಗ)  9 ಳಿ (ಐ ಗ)
10 ಯು (ಉ ಐ)  11 ರು (ಉ)  12 ಕಡುಗಲಿ ನೃಪಮನ್ನೆಯರು (ಉ)
* (ಉ) ಪ್ರತಿಯಲ್ಲಿಲ್ಲ.

ಅಳುಕು ಬೇಡಗಳಾ[1]ಳ್ವ[1]ರಿಕೋಟೆಕೊತ್ತಳ
ಗಳ ಜತನವ ಮಾಡಿಸುವುದು
ಹೊಳೆಯ ದಾಟಿಸಿಕೊಂಡು ದಂಡ ಮುಖಿಯಲಿಖಿ
ದಳವ ತೋಱಿಸದಿ[2]ರ[2]ನರಸ ೧೫

ಎಂದು ದಂಡಾಧಿಪ ಮುದಿಗಲ್ಲು ಮೊದಲಾದ
ಸಂದ ದುರ್ಗಗಳಿಗೋಲೆಯನು
ಅಂದು ಕಳುಪಿ ಜತನವ ಮಾಡಿಸಿದನವ
ತಂದೆಯೊ ಮಂತ್ರಿಯೊ ನೃಪಗೆ ೧೬

ದಂಡು ಬಿಟ್ಟಿತು ಹೆದ್ದೊಱೆ[3]ಯ ತಡಿಯೊಳು[3]
ದ್ದಂಡ ಮಂಡಳಿಕ ಮನ್ನೆಯರ
ಗಂಡ ಕಂಪಿಲ[4]ನೆಂ[4]ದು ಬಿನ್ನವತ್ತಳೆಯನಾ
ದಂ[5]ಡಾಧೀಶ[5]ನಟ್ಟಿದನು ೧೭

ಓಲೆಯನೋದಿಸಿಕೊಳುತ ನೃಪತಿ ಬರ
ಹೇಳು ರಾಮನನೆಂದೆನುತ
ಲೀಲೆಯಿಂ ತೆರಳಿದನಿರದೆ ಕುಮ್ಮಟಕೆ ಕಾ
ಲಾ[6]ಳು[6]ಮೇಲಾಳೊಗ್ಗಿ[7]ನಲಿ[7] ೧೮

ತೋರ ಮುತ್ತಿನ ಹಾರ ತ್ರಿಸರರತ್ನದ ಬಾಹು
ಪೂರ ಕಂಕಣ ಕಟಿಸೂತ್ರ
ಚಾರು[8]ವಜ್ರ[8]ದ ಪೆಂಡೆಯ ಚಕಚಕಿಸ[9]ಲಂ
ದಾ ರಾಮ ರಣಕನುವಾದ[9] ೧೯

ಉಡಿದಾರ ವೈಡೂರ್ಯದುಂಗುರ ಮುತ್ತಿನ
ಕಡುಕು ರ[10]ನ್ನ[10]ದ ಕಂಠಮಾಲೆ
ತೊಡಕಿದವರ ಗಂಡನೆಂದೆಂಬೆಡ[11]ದ ಕಾ[11]ಲ
ತೊಡರೆಸೆದುದು ರಾಮನಿಗೆ ೨೦

---

[1] ಳ್ವೀ (ಏ ಗ) [2] ರೆ (ಇ ಎ) [3] ಯೊತ್ತಿನೊಳು (ಇ) ಯ ತಡಿಯೊಳಗು (ಉ) [4] ಯಂ (ಅ ಇ ಉ ಎ ಗ [5] ಡನಾಯಕ (ಐ) [6] ಳ (ಎ ಐ ಗ) [7] ನೊಳು (ಉ) [8] ರತ್ನ (ಐ) [9] ಲಾಲೀಲೆಯಿಂದಲಿ ತೆರಳಿದನು (ಗ) [10] ತ್ನ (ಐ) [11] ಗಾ (ಐ).

ಕರಿಪತಿ ನರಪತಿ ತುರಗಪತಿಗಳೆಂ
ಬರಸುಗಳಿಗೆ ಗಂಡ[1]ನೆನಿಪ[1]
ಬಿರಿದಿನ ರನ್ನದ [2]ಬಾವು[2]ಲಿ ರಾಮನ
ಚರಣದೊಳಗೆ ರಂಜಿಸಿದುದು ೩೧

ಸೂಳೆಯರಂತೆ ಸಿಂಗರವಡೆದೂರೊಳು
ಕಾ[3]ಳ[3]ಗದೊಳು ಕೈದೆಗೆವ
ಖೂಳನೃಪರ ಗಂಡನೆಂದೆಂಬ ಬಿ[4]ರಿ[4]ದಿನ
ಕಾಲಕಡೆ[5]ಯವನಿಕ್ಕಿದನು[5] ೩೨

ಚಾವಡಿಯೊಳು ಕೆಕ್ಕಸಗೆಲದಾಡಿ ರ
ಣಾವನಿಗಿರದೆಯ್ತಂದು
ಜೀವಕಾಸೆಯ ಮಾಡುವರ ಗಂಡನೆಂ[6]ದೆಂ[6]ಬ
ಬಾ[7]ವು[7]ಲಿ ಮೆಱೆದುದವನಿಗೆ ೩೩

ಅಣಕಿಗ ರಾಯರ ಗಂಡನಾಜಿಯು ಕಂ
ಡೆಣಿಪ ರಾಯರ ಗಂಡನೆನಿಪ
ಮಣಿದೊಡರೆಸೆದುದು ಕಲಿಕಾಲಪಾರ್ಥನ
ಕಣಕಾಲ ಮುಂದೆ ಕಯ್ಗೆಯ್ದು ೩೪

ಪರವೆಣ್ಣ ಪರಮಗುರುವಿನಂಗನೆ[8]ಯೆನ್ನ[8]
ದಿರದೆ ಮನದೊಳಾಸೆಗೆಯ್ವ
ನರಪತಿಗಳ ಗಂಡನೆಂದೆಂ[9]ಬ ಬಿರಿದಿನ[9]
[10]ಸ[10]ರಬೊಂಬೆ [11]ಮೆಱೆ[11]ದುದವನಿಗೆ ೩೫

ಕಟ್ಟಿದ ರನ್ನದ ಬಂಕು ಮೆಯ್ಯೊಳಗಂ
ಪಿಟ್ಟ ಬಾವನ್ನ ಕ[12]ತ್ತು[12]ರಿಯ
ಬೊಟ್ಟೆಸೆದಿರೆ ಹರಿಹರದೇವಿಯರಮನೆ
ಗಿಟ್ಟನಡಿಯನಾ ರಾಮ ೩೬

---

[1] ನೆಂಬ (ಅ) [2] ತೊಡಹು (ಇ) ಬಾಹು (ಎ ಗ) [3] ಳೆ (ಇ ಉ) [4] ರು (ಋ ಎ ಐ) [5] ಡಗವಧರಿಸಿದ (ಇ) [6] ತೆಂ (ಎ ಗ) [7] ಹು (ಎ ಗ) [8] ಯಂದು (ಉ) ಯಂ (ಐ) [9] ಬೆಡದಕಾಲ (ಐ) [10] ಶ (ಐ) [11] ಎಸೆ (ಐ) [12] ಸ್ತು (ಎ ಗ).

ಬಂದು ಜನನಿಯ ಚರಣಕೆ ಪಣೆಯ [1]ಚಾಚಿ[1]
ನಿಂದು ನುಡಿದನಿಂತೆಂದು
ಮುಂದೆ ತೆರಳಿದನು ರಾಯ ಬೇಗದೊಳೆ
ಯ್ದುಂದೆನಗಟ್ಟಿ ಚರರನು ೩೭

ಪರಸಿ ಬೀಳ್ಕೊಡು ಪರಮಾನಂದದಿಂದೆನ್ನ
ಹರಿಹರದೇವಿ ಬೇಗದೊಳು
ಭರದಿ ನೇಮಿಯ ದಂಡ ಮುಱಿಯಲಿಱಿದು ನಿನ್ನ
ಚರಣಕೆ ಬಂದೆಱಗುವೆನು ೩೮

ನಡೆ ಕಾ[2]ಳ[2]ಗಕೆನಬಾರದು ಮಗನಾತ್ಮ
ನೊಡಬಡದಾಜಿ[3]ಮಲ್ಲನನು[3]
ತಡೆವುದಕೊಪ್ಪದು ಮನ[4]ವೊಡ[4]ಬಟ್ಟ[5]ಳಾ[5]
ಮಡದಿಯುಭಯಸಂಕಟದೊಳು ೩೯

ನಡೆ ಜಯಶೀಲ ನೀನಾಗೆಂದು ಗಲ್ಲವ
[6]ಹಿ[6]ಡಿದು ಮುಂಡಾಡಿ ಮಗನನು
ಬಿಡದೆ ಬೀಳ್ಕೊಡಲು ನಿವಾಳಿಯ ಸೀರೆಗ
ಳೊಡನಾರತಿ[7]ಯನೆ[7]ತ್ತಿದ[8]ರು[8] ೪೦

ಪಟ್ಟೆದೇವಾಂಗ ದುಕೂಲ ವಸನಗಳ
ನಿಟ್ಟರು ನೈವಾಳಿ[9]ಗಳ[9]
ಮುಟ್ಟಿ ತಳಿದು ಮುತ್ತಿನಕ್ಷತೆಗಳ ಪಣೆ
ಗಿಟ್ಟರು ಮುತ್ತೈದೆಯರು ೪೧

ಕಾಲ ಉಳಿಯ ಕಟಿಸೂತ್ರದ ಮಾಣಿಕ
ದೋಲೆಯ ತೋರಮೂ[10]ಗು[10]ತಿಯ
ಬಾ[11]ಲಕಿ[11]ಯರು ಬಂದು ಪರಸಿ[12]ದರವ[12]ನಂಕ
ಮಾಲೆಯನೊಸೆದೋದಿದರು ೪೨

---

[1] ಸಾರ್ಚಿ (ಇ ಉ ಎ ಗ) ಚಾರ್ಚಿ (ಐ) [2] ಳಿ (ಇ ಗ) [3] ಮೇಲವನು (ಅ) [4] ವಡ (ಅ ಇ ಉ) ವೊಡಂ (ಎ ಗ) [5] ಳು (ಉ) [6] ಪಿ (ಉ ಐ) [7] ಗಳೆ (ಎ ಉ ಐ ಗ) [8] ವು (ಇ ಉ ಎ ಐ ಗ) [9] ಯನು (ಐ) [10] ಕು (ಇ ಉ ಐ) [11] ಲಿಕೆ (ಎ ಗ) [12] ಕುವರ (ಉ ಎ).

ಎತ್ತಿದವಾರತಿಗಳು ಶಂಖನಿನದಗ
ಳೊತ್ತರಿಸಿದವು ದೆಸೆಗಳ
ಹೆತ್ತ ಜನನಿ ಬೀಳ್ಕೊಡಲು ಕುಮಾರನ
ನುತ್ತಮ ಲಗ್ನೋದಯದೊಳು ೪೩

ಪಡೆದ ಜನನಿಯ ಕಯ್ಯಿಂ ಕಳುಹಿಸಿಕೊಂಡು
ಬಿಡದೆ ಬಾದುರ[1]ಗೂ[1]ಡಿ ತನ್ನ
ಪಡೆವೆರಸಾ ಕಲಿರಾಮ ಕುಮ್ಮಟವನಂ
ದೊಡನೆ ಪೊಕ್ಕನು[2]ರಾಗದೊ[2]ಳು ೪೪

ಮಂದಿ ಕುದುರೆಯನೆಣಿಕೆ[3]ಯ ಕೊಂ[3]ಡನು ಬೇಗ
ತಂದೆಗೆ ಬಿ[4]ನ್ನವಿ[4]ಸಿದನು
ಬಂದ ನೇಮಿಯ ದಂಡನೆಡೆಯೊ[5]ಳ[5] ತಾ[6]ಗ[6]ಬೇ
ಕೆಂದು ಶೌರ್ಯಾತಿರೇಕದೊಳು ೪೫

ಬರಲಿ ತಾನೇ ಬಂದ ಬಳಿಕ ನಮ್ಮಯ ಕಯ್ಯ
ಪರಿಯನವ[7]ನಿ[7]ಗೆ ಕಾಣಿಸದೆ
ಇರ[8]ದೀಗಳೇ[8]ಕವನೆಡೆಗಾವೆಯ್ದುವ
ಭರವಸವೆಂದು ನುಡಿದನು ೪೬

ನರಪತಿಯಾಡಿದ ರಾಜಕಾರ್ಯದ [9]ಧಾರೆ[9]
ಯಿರವನಾಲಿಸಿ ದಂಡನಾಥ
ಭರದಿಂದಾ ನುಡಿಯನು ಪೊಗಳಿದನಿಂ
ತಿರ[10]ವೇಡಾ[10] ಮಂತ್ರಿ ನೃಪ[11]ಗೆ[11] ೪೭

ತೊಱೆಗಲ್ಲು ಬಾದಾಮಿ ಮುದಿಗಲ್ಲು ಕೊಪ[12]ಣ[12]ದ
ತೆ[13]ಱಹಿನ[13] ರಾಜ್ಯವೆಲ್ಲವನು
ಇಱಿದು ಕೆಡಿ[14]ಸುತ[14] ಕುಮ್ಮಟದುರ್ಗದೊತ್ತಿನ
ತೆಱಪಿನೊಳಗೆ ಬಿಟ್ಟನೊ[15]ಸೆ[15]ದು ೪೮

---

[1] ಕೂ (ಅ) [2] ಬೇಗದೊ (ಅ ಇ ಎ ಗ) ಲೀಲೆಯೊ (ಉ) [3] ಗೊಂ (ಉ ಐ) [4] ನ್ನೈ ತ್ರ (ಇ ಐ) [5] ಳು (ಅ) [6] ಕ (ಅ) [7] ರಿ (ಐ) [8] ದಿರಲೇ (ಅ) ಲೀಗಳೇ (ಉ) ವೀಗಳೇ (ಎ ಗ) [9] ರೀತಿ (ಐ) [10] ಬೇಡ (ಐ) [11] ಗೆ (ಉ) ತಿಗೆ (ಐ) [12] ಳ (ಐ) [13] ಱಗೆಯ (ಅ ಇ ಉ ಎ ಗ ಟ) [14] ಸಿ (ಐ) [15] ಲ (ಇ ಉ ಎ ಐ ಗ).

ಮುತ್ತಿನ ಬೀದಿಯ ಗುಡಿಯ ಬಳಸಿ ಸುತ್ತ
ಲೆತ್ತಿದ[1]ಯಿ[1]ಂದ್ರಗೋಪಗಳ
ಮೊತ್ತದ ಗುಡಿಗ[2]ಳು[2] ನೇಮಿಖಾನನ ಸಂ
ಪತ್ತನದೇನ [3]ಪೇಳುವೆ[3]ನು ೪೯

ಭಾನುಮಂಡಲ ಹೊನ್ನಕಳಸದಂತಿ[4]ರಲು[4] ದು
ಮ್ಮಾನ ಹೊ[5]ಯ್ದುದು[5] ಬಯಲೊಳಗೆ
ನಾನಾಪರಿಯ ಪಟ್ಟೆಯ ಗುಡಿಗಳು ನೇಮಿ
ಖಾನಗಂದಿರ[6]ದೆತ್ತಿ[6]ದವು ೫೦

ವಾ[7]ರುವ[7]ಗಳಿಗೆ ಹೊಯ್ದವು ಗುಡಿಗಳು ಮದ
ವಾರಣಗಳಿಗೆ ಗುಡಿಗಳು
[8]ಓ[8]ರಣದಿಂದೆತ್ತಿದವು [9]ದಿಕ್ಕುದಿಕ್ಕಿನೊ
ಳಾ[9]ರದನಭಿವರ್ಣಿಸುವರು ೫೧

ಖಾನಖಾನರಿಗೆ ಹೊಯ್ದವು ಗುಡಿ ಸಾಗರ
ದಾನ[10]ವೆಂಟುಂ[10] ದೆಸೆಗಳೊಳು
ಭೂನುತ ಮಂದರದೊತ್ತಿನಪಾ[11]ರ ಸಂ[11]
ತಾನದಂತೇನ [12]ಬಣ್ಣಿಪೆ[12]ನು ೫೨

ಬಿಱುಗಾಳಿ ಬೀದಿವರಿದು ಬೀಸೆ ಮುಗಿಲ್ಗಳು
ಹಱಿದು ನೆಲಕೆ ಬಿದ್ದವೆನಲು
ಮೆಱೆದವು ಗುಡಿ ಕೋಟಾಕೋ[13]ಟಿ[13] ಭೂತಳ
ನೆಱೆಯದು ಬೀಡಿಗೆಂದೆನಲು ೫೩

[14]ಬೊಂ[14]ಬಾಳದೀವಿಗೆ ಬೆಳಗಿತು ಬಾಲಾರ್ಕ
ಬಿಂಬಗಳೆನೆ ವಾದ್ಯನಿನದ
ತುಂಬಿತು ಲೋಕವ ನೇಮಿ ಮಾಡಿಸಿದನಾ
ಡಂಬರದಿಂದ ಪಾಳೆಯವ ೫೪

---

[1] ವಿ (ಇ ಉ ಐ) [2] ಳ (ಅ ಇ ಉ ಗ) [3] ಬಣ್ಣಿಪೆ (ಇ ಉ ಎ ಗ) [4] ರೆ (ಐ) [5] ಯ್ದವು (ಐ) [6] ದೊಪ್ಪಿ (ಐ) [7] ರಣ (ಎ ಗ) [8] ವಾ (ಅ ಉ ಐ) [9] ದೆಸೆದೆಸೆಗಳಿಗಾ (ಐ) [10] ದೆಂಟು (ಗ) ವೆಂಟು (ಎ) [11] ದಸಂ (ಇ) ದಪದಸಂ (ಎ ಗ) [12] ಪೇಳುವೆ (ಐ) [13] ಟೆ (ಅ ಇ ಉ ಎ ಗ) [14] ಬಂ (ಅ ಇ ಉ ಎ ಗ).

ಎತ್ತಿದ ಕೈದೀವಿಗೆಯ ಬೆಳಗಿನೊ[1]ಳ[1]
ಪತ್ತುಸಾವಿರ ವಾಜಿ ಬಿಡದೆ
ಸುತ್ತಿ[2]ತ್ತುಪಾಳೆ[2]ಯವನು ನೇಮಿಯ ನೇಮ
ವೆತ್ತು ಪಾಳೆಯಗಟ್ಟ[3]ಣೆ[3]ಯೊಳು ೫೫

ಅತ್ತ [4]ಕು[4]ಮ್ಮಟದೊಳು ಕಂಪಿಲನೋಲಗ
ವಿತ್ತು ಕರೆಯಿಸಿ ಮನ್ನೆಯರ
ಉತ್ತಮ ತುರಗಾಭರಣಗಳನು ಕೊಟ್ಟು
ಮತ್ತೆ ಕೇಳಿದನು ಪಂ[5]ಥವನು[5] ೫೬

ಜೀಯ ಕೆ[6]ಳು[6]ಪು ಪಾಳೆಯವನೀಗಳೆ [7]ಹೊ[7]ಕ್ಕು
ಹುಯ್ಯಲೇಳಿಸಿ ತುರುಕರನು
ಕಯ್ಯಾರೆ ಕೊಂದು ಕಣ್ಗೆಡಿಸಿ ಖಾನರ ಬಱು
ಮೆಯ್ಯೊಳೋಡಿಸಿ ತೋಱಿದಪೆವು ೫೭

ನೇಮಿಯ ಸಾಗರದಾನದ ಮುಂದೆ ಸಂ
ಗ್ರಾಮವನೆಸಗಿ ಬೇಗದೊಳು
ಸಾಮಜ ತುರಗಗಳನು ತಂದೊಪ್ಪಿಸುವೆವು
ಭೂಮೀಶ್ವರ ಬಿಡು ನಮ್ಮ ೫೮

ಎಂದವರಾಡೆ ರಾವುತಪಾಯಕರೆದ್ದು
ನಿಂದು ಕೈಮುಗಿದು ರಾಯನಿಗೆ
ಎಂದರು ರಾವುತ ಪಾಯಿಕೆಯಂಗದ
ಸಂದ ಪಂಥದ ಮಾತುಗಳನು ೫೯

ನಡುಪಾಳೆಯವ [8]ಪೊ[8]ಗಿಸಿ ಕುದುರೆ[9]ಯು[9] ಬಂ
ದೊಡ[10]ನ[10]ಡ್ಡಲಾದ ರಾವುತರ
ಕೆಡಹಿ ಕುದುರೆಯ[11]ಪಿ[11]ಡಿದು ತಂದೊಪ್ಪಿಸುವೆವು
ಬಿಡು ರಾಯ ಸಂದೇಹವೇಕೆ ೬೦

---

1 ಳಿ (ಇ ಉ) 2 ದಪಾಳೆ (ಇ) 3 ಳೆ (ಉ) 4 ಗು (ಎ) 5 ತಗಳ (ಐ) 6 ಳಿ (ಅ ಗ) 7 ಪೊ (ಅ ಇ ಉ ಎ ಗ) 8 ಪು (ಇ) ನು ಪು (ಉ) 9 ಗಳ (ಎ ಐ) 10 ಲ (ಅ) 11 ಹಿ (ಇ ಎ ಐ).

ಎಂದೆನಲವರೆಕ್ಕಟಿಗರು ಬೇಗದೊಳೆದ್ದು
ನಿಂದು ನುಡಿದರವನಿಪಗೆ
ಬಂದ ನೇಮಿಯ ದಂಡ ತೆಗೆಯಿಸದಿರ್ದೊಡೆ
[1]ಇ[1]ಂದಿಕ್ಕಿಸೆಮಗಾಜ್ಞೆಯನು ೬೧

*ಮಿಕ್ಕ ಮನದ ಕುದುರೆಯ ಕೊಟ್ಟನು ಮೇ
ಲಿಕ್ಕಿ ತಿವಿವ ರಾವುತರಿಗೆ
ಎಕ್ಕಟಿಗರಿಗೆ ಪೊಂಬರಿಗೆಗಳನು ವೆಚ್ಚ
ವಿಕ್ಕಿದನಾ [2]ನರ[2]ನಾಥ ೬೨

ಹೊಕ್ಕು ತಿವಿವ ಬಲು ರಾವುತರಿಗೆ ಪೊಂ
ಬಕ್ಕರಿಕೆಯನಿತ್ತನೊಸೆದು
ಧಿಕ್ಕನೆ ತರಿಸಿಕೊಟ್ಟನು ವಾರುವಗಳನಂ
ದೆಕ್ಕಲ ಬಲುರಾವುತರಿಗೆ ೬೩

ಉಡುಗೊಱೆಯಿತ್ತುಚಿತಾಲಾಪಗಳಿಂ
ದೊಡನೆ ಕಳುಪಿ ಸುಭಟರನು
ನುಡಿದ[3]ನಾ ನೃಪತಿ ಮಂತ್ರಿಯ ಮುಂದೆ[3] ಮಗರಾಮ
ನೊಡನಿಂತೆಂದು [4]ಮಾತುಗಳ[4] ೬೪

*ನೆಲನೀದಂತೆ ನೇಮಿಯ ದಂಡು ಬಂದಿ[5]ದೆ[5]
ಕಲಹಕಿದಿರುಗೊಂಬರೆಮಗೆ
ಬಲವಿಲ್ಲ ದುರ್ಗವ ಬಿಟ್ಟು ಪೋಪುದು ಕಾರ್ಯ
ದೊಳಗಲ್ಲವೆಂದು ಪೇಳಿದನು ೬೫

ಕನ್ನ[6]ಕ[6]ಂಡಿಯ ಕಟ್ಟಿಕೊಂಡು ನೇಮಿಯ ದಂಡ
ಬನ್ನಬಡಿಸಬೇಕಲ್ಲದೊಡೆ
ಚೆನ್ನಾಗದು ರಾಜಕಾರ್ಯವೆಂದಾ ರಾಯ
ತನ್ನ ಕುವರಗೆ ಪೇಳಿದನು ೬೬

---

[1] ನಿ (ಅ) [2] ರಾಮು (ಐ) [3] ನು ಮಂತ್ರಿಯ ಮುಂದೆನೆ (ಅ) ನೃಪತಿ ಮಂತ್ರಿಯ ಮುಂದೆ (ಇ ಉ ಎ ಗ) ನಾನ್ನೃಪತಿ ಮಂತ್ರಿಯ (ಐ) [4] ದೇಗದೊಳು (ಎ ಗ) [5] ರೆ (ಎ ಗ) [6] ಗ (ಎ ಗ) * (ಉ) ಪ್ರತಿಯಲ್ಲಿಲ್ಲ.

ಬಲ್ಲಾಳ ಕಾಕತಿರುದ್ರರ ಬಲದಂ
ತಲ್ಲ ನೇಮಿಯ ದಂಡು ಬಹಳ
ಇಲ್ಲ ಕಾದುವುದಲ್ಲದೆ ಪೊಱಮಡುವು[1]ದ[1]
ದಲ್ಲ ಕಾರ್ಯಕೆ ಹಾನಿಬಹುದು   ೬೭

ಎನೆ ರಾಜಕಾರ್ಯಕೋವಿದ ಕಂಪ [2]ಭೂಮಿಪ[2]
ನನುನಯದಿಂ ಕೇಳಿ ರಾಮು
ಮನವೊಲಿದಿಂತೆಂದು ನುಡಿದನು ಕಾರ್ಯದ
ಮೊನೆ ಮುಱಿಯದ ಪಂ[3]ಥ[3]ವಾತ   ೬೮

*ಆವನ ಮೇಲಾವ ಬಂದಪನವನಾ
ಭೂವರಗಧಿಪನವನನು
ಆವನಾಜಿಯೊಳು ಗೆಲುವನವ [4]ವಿಶ್ವಧ[4]
ರಾವಲ್ಲಭ[5]ನನು ಜಯಸನೆ[5]   ೬೯

ನಾಸಿಕದಿಂದ ನಾಲ್ವೆರ[6]ಳ[6] ಮೀಱಿದ ನೀರ
ನೀಸ[7]ಬಲ್ಲಾತ[7] ಮಡುವಿಗೆ
ಪೈಸರಿಪನೆ ದಂಡನಿದನೋಡಿ[8]ಸುವೊ[8]ಡಾ
ಯಾಸವಿಲ್ಲೆನಗವನೀಶ   ೭೦

ಗೋ[9]ಗ್ರಹ[9]ಣದೊಳು ಕೌರವಬಲವನು ನರ
ನುಗ್ರಕೋಪದೊಳೆಯ್ತಂದು
ವಿಗ್ರಹದೊ[10]ಳಗೆ ಜಯಿಸಿದನು[10] ಶೌರ್ಯಸ
ಮಗ್ರತೆಯೇ ಬಲವಲ್ತೆ   ೭೧

ಏಕಾಂಗದೊಳು ಕುರುರಾಯನ ಬಲವ ನಿ
ರಾಕರಿಸಿದನನಿಲಜನು
ಲೋಕದ ಬಹುಜನದಿಂದೇನು ಶೌರ್ಯಾತಿ
ರೇಕಮುಳ್ಳವನೆ ದುರ್ಲಭನು   ೭೨

---

[1] ದಿ (ಉ ಎ ಗ)   [2] ರಾಯಭೂಪ (ಅ) ಭೂಪನ (ಎ ಗ)   [3] ತ (ಐ)
[4] ನೀಶ್ವರ (ಎ ಗ)   [5] ನವನ ಜಯಿಸಲಿ (ಐ) ರನು ಜಯಿಸನೆ (ಎ)   [6] ಲ (ಐ)
ಳು (ಉ)   [7] ಲಾತನು (ಎ ಗ) ಲ್ಲವನು (ಐ)   [8] ಸದೊ (ಅ ಎ ಗ)   [9] ಗ್ರಾ
(ಅ ಎ ಗ)   [10] ಳು ಕೊಂದುದಿಲ್ಲವೆ (ಐ)   * (ಉ) ಪ್ರತಿಯಲ್ಲಿಲ್ಲ

ಗಣನಾತೀತಬಲವಿದೆಂದು ಮನದೊಳ
ಗೆಣಿ[1]ಕೆ[1] ಬೇಡವನೀಶ ನಿನಗೆ
ರಣದೊಳು ನೇಮಿಯು ದಂಡ ಭೂತಂಗಳಿ
ಗುಣಬಡಿಸುವೆನು ಚಿತ್ತೈಸು ೭೩

ಎಂದೆನೆ ಬಲ್ಲಾಳ ಕಾಕತಿರುದ್ರರ
ಕೊಂದೋಡಿಸಿದ ಸುಭಟನ
ಸಂದ ವಚನ ರಾಯನ ಮನದೊಳಗಣ
ಸಂದೇಹವ ಬಿಡಿಸಿದುದು ೭೪

ಬಳಿಕ ನುಡಿದನು ಕಾಟಣ್ಣ [2]ರಾಯ[2]ಗೆ ತನ್ನ
ಕಲಿತನದಿರವನಿಂತೆಂದು
ಸಲಹಿದೆ ರಾಯ ನಿನ್ನಯ ರಾಣಿವಾಸದ
ಮೊಲೆವಾಲ[3]ನುಣಿಸಿ[3] ನೀನೆನ್ನ ೭೫

ಬೆ[4]ಳೆ[4]ದ ಬಳಿಕ ಬೇಡಿದ ರಾಜ್ಯವನಿತ್ತು
ಬಲುಮನ್ನೆಯನೆಂದೆನಿ[5]ಸಿದೆ[5]
ತಳುವದಿಂದಿನ ಕಾ[6]ಳೆ[6]ಗಕೆ ವೀ[7]ಳಯ[7]ವನೀ
ನೊಲಿದು ಪಾಲಿಸು ರಾಯ ನನಗೆ ೭೬

ಕಲಿಕಾಲಪಾರ್ಥ ಕುಮಾರರಾಮನ ಬೆಂ
ಬಳಿಯೊಳೆಯ್ದಿ[8]ದೊಡೆ[8] ಕೇಳೆ[9]ಮ್ಮ[9]
ಕಲಿತನ ಮೆಱೆಯದು ಕಮಲಸಖನ ಮುಂದೆ
ಬೆಳಗು ಮೆಱೆವುದೆ ತಾರೆಗಳ ೭೭

ನಳಿನಸಖನ ಮುಂದೆ [10]ಮಿಂಚುಬುಳುಗಳ ಮೈ[10]
ಬೆಳಗು ಕಾಣಿಪುದೆ [11]ಕಣ್ಗ[11]ಳಿಗೆ
ಕಲಹಲಂಪಟ ರಾಮನಿದಿರಿನೊಳಗೆ ಮಿಕ್ಕ
ರಳವು ಮೆಱೆವುದೆ ರಾಜೇಂದ್ರ ೭೮

---

[1] ಸ (ಎ ಗ) [2] ತಂದೆ (ಐ) [3] ನಿತ್ತು (ಐ) [4] ಳ (ಅ ಐ) [5] ಸಿ (ಎ ಐ ಗ) [6] ಳೆ (ಇ ಎ) [7] ಳ್ಯ (ಅ) ಳೆಯ (ಇ ಗ) [8] ದರೆ (ಅ) ದಡೆ (ಇ ಉ) [9] ನ್ನ (ಅ ಉ) [10] ಮಿಾಂಬುಳುಗಳ ಮೆಯ್ಯ (ಉ) ಮಿಂಬುಳುಗಳ ವ್ಮೈ (ಎ) [11] ಕಂಗ (ಐ).

ಅದಱಿಂದಿಂದಿನ ಕಾ[1]ಳ[1]ಗಕೆ ಪೇಳೆಯುವ ಭೂ
ಸುದತೀಶ್ವರ ಪಾಲಿಸೆನಗೆ
ಕದನದೊಳಗೆ ನೇಮಿಯ ದಂಡನೆಲ್ಲವ
ಕದಲಿಸಿ [2]ಕಣ್ಗೆ[2]ಡಿಸುವೆನು　　೭೯

ಹನುಮನನಟ್ಟಿದ ದಶರಥನಂದ[3]ನ[3]
ದನುಜಾಧೀಶ ರಾವಣನ
ಪೊನೆ[4]ಯ ಮುಱಿದು[4] ಮತ್ತವನ ಕೊಂದುದಿಲ್ಲವೆ
ಮನುಜೇ[5]ಶ ಕಳುಪು ನೀನೆನ್ನ[5]　　೮೦

ಎನೆ ಕಾಟಣ್ಣನರ[6]ಸ[6] ರಾಮನ ಮುಖ
[7]ವನಜ[7]ವ ನಿಟ್ಟಿಸಲವನು
ವಿನಯದಿಂ ಕೇಳಿದನಣ್ಣನ ನೀ[8]ವೆಂ[8]
ತನುವರವನು ಮಾ[9]ಳ್ಪಿರೆಂ[9]ದು　　೮೧

ಎಡಬಲದೊಳಗಡಗಿಪೆ ಮಂದಿ ಕುದುರೆಯ
ತಡೆಯು[10]ದಾ[10] ನೇಮಿಮಲ್ಲುಕನ
ಗುಡಿಯು ಮುಂದಾನೆ ಕುದುರೆಯು ಪಿಡಿದು ತಂ
ದೊಡನೆ [11]ಹಾಯ್ಕುವೆನು ಹುಯ್ಯಲನು[11]　　೮೨

ಅಡಗಿರ್ದ ಮಂದಿ ಕುದುರೆಯು ಕಯ್ಯಿಂ ತಡೆ
ಗಡಿಯಿಸುವೆನು ತುರುಕರನು
ಕೊಡಿಸು ಪೇಳೆಯುವನೆಂದೆನೆ ಕೊಡಿಸಿದನಂ
ದೊಡನೆ ರಾಮನ ಕಯ್ಯಿಂದ　　೮೩

ಕೊಟ್ಟನು ರನ್ನದೊಡಿಗೆಯ ವಾರುವಗಳ
ಕೊಟ್ಟನು ದಿವ್ಯಾಂಬರವ
ಕೊಟ್ಟನು ಬ[12]ಹು[12]ಮಂದಿ ಕುದುರೆಯೆಲ್ಲವ ರಾಯ
ದಿಟ್ಟ ಕಾಟಣ್ಣನಿಗಂದು　　೮೪

---

[1] ಳೆ (ಇ) [2] ಕಂಗೆ (ಐ) [3] ನನಾ (ಅ) [4] ಮುಱಿಯಿಸಿ (ಅ ಇ ಐ) [5] ಶ್ವರ ಕಳುಪೆನ್ನ (ಉ) [6] ಸು (ಅ) [7] ನಳಿನ (ಅ) [8] ನೆಂ (ಅ ಇ ಉ ಎ ಗ) [9] ಳ್ಪೆಯೆಂ (ಅ ಉ ಎ ಗ) ಳ್ಪೆವೆಂ (ಇ) [10] ದೆ (ಅ ಇ ಉ ಗ) [11] ಹುಯ್ಯಲ ಹಾಯ್ಕುವೆನು (ಐ) [12] ಲು (ಇ ಎ ಐ ಗ).

*ಎನ್ನ ಕ[1]ಳಿ[1]ಪು ತನ್ನ ಕ[1]ಳಿ[1]ಪು ನೃಪತಿಯೆಂ
ದೆನ್ನುತ ಬಲು[2]ರಾವುತ[2]ರು
ಪನ್ನಣಿವಡೆದು ರಾಜೇಂದ್ರನ [3]ಕಯ್ಯಿ[3]ಂದ
ಬೆನ್ನೊಳೆಯ್ದಿದರು [4]ಕಾಟಣ[4]ನ ೮೫

ಎಡಬಲದೊಳಗಡ್ಡಹುಯ್ಯಲ ತಾಗಲೆಂ
ದೊಡನೆ ತೆರಳದ ಸುಭಟರ
ಗಡಣದಂಕಿತನಾಮವನದನೊರೆವೆನು
ಕಡುಗಲಿಗಳು ಕೇಳ್ವುದೊಲಿದು ೮೬

ಹಡಪದ ಬಲ್ಲುಗ ಗಿಂಡಿಯ ಲಕ್ಕ ಮು
ಮ್ಮಡಿಸಿಂಗ ಸಾವಣ್ಣ ಸಂಗ
ಗಡಿಯ ಕಾವಲ ಕಂಪ ಮೊದಲಾದವರನಣ್ಣ
ನೊಡನೆ ಕಳುಪಿದನಾ ರಾಮ ೮೭

ನಲ್ಲಗಂಪುಗ ನರಸಿಂ[5]ಗು[5] ವಲ್ಲಭದೇವ
ಬಲ್ಲಿದ ವಿರುಪಣ್ಣ ಹನುಮ
ಕಲ್ಲಕೋಟೆಯ ಮಂಗ ಝಲ್ಲಿ ಪಿಲ್ಲಿಯ ನಾಗ
ಮಲ್ಲನೆಂಬಿವರ ಕಳುಪಿದ ೮೮

ಬೇಹಿನ ಸಿಂಗ ಬೇಡರ[6]ಪೆ[6]ಮ್ಮ [7]ಬೇಟೆಗ[7]
[8]ಜೋ[8]ಹದ ಹರಿಗೆಯ ಲಿಂಗ
ಸೋಹಿನ [9]ಪೆನ್ನ[9]ನವರ ಕಳುಪಿದನಂ
ದಾ ಹುಯ್ಯಲಿಗೆ ರಾಮನಾಥ ೮೯

ಹಕ್ಕಿಯ ಸಿಂಗ ಹನುಮನ ಬಾಲದ ಚೆನ್ನ
ಕಕ್ಕಡದಾಬಳದೇವ
ಹೊ[10]ಕ್ಕ[10] ದಳವ ಮುಱಿದೊಕ್ಕಲಿಕ್ಕುವ ತಿಮ್ಮ
ಚಿಕ್ಕನೆಂಬಿವರ ಕಳುಪಿದ ೯೦

---

[1] ಳು (ಎ ಐ) [2] ಮನ್ನೆಯ (ಐ) [3] ಕೈಯ್ಯ (ಐ) [4] ಸಂಗಮ (ಎ ಗ) [5] ಗ (ಎ ಗ) [6] ತಿ (ಎ ಗ) [7] ದೆಟ್ಟೆಗ (ಅ) ಬೇಟೆಯ (ಇ) [8] ದೋ (ಅ) [9] ಪೆನ್ನಮಾ (ಅ ಇ) ಪಿನ್ನಮಾ (ಐ) [10] ಕ್ಕ (ಅ ಇ ಉ ಎ ಗ) * (ಉ) ಪ್ರತಿಯಲ್ಲಿಲ್ಲ.

ಚಲದಂಕ ಕಾಟ ಕಬ್ಬಿಲ ನಾಗ ಬುಕ್ಕಣ್ಣ
ಬಲುಗಯ್ಯ ತಿಮ್ಮಣ್ಣ ವರದ
ಕೊಲೆಗೇಡಿ ಮಾದಿಗ ಹಂಪನೆಂದೆಂಬೀ
ಬಲುತರದವರೆಯ್ದಿದರು ೬೧

ಪರಬಲಸೂಱೆಗಾಱನು ಮು[1]ಪ್ಪಿ[1]ಡಿಯು ತಿಮ್ಮ
ಧುರಧೀರ ವಂಕಿಯು ಕನವ
ಕರಡಿಯು ಕಾಟ ಬಿ[2]ರಿ[2]ದಿನ ಸಂಗಮನೆಂಬ
ವರ ಸುಭಟರ ಕಳುಪಿದನು ೬೨

ಜಾಯಿಜಕ್ಕಿಯ [3]ಬೈಚ[3]ರಾಯ ಪೆಬ್ಬುಲಿ ಕಾಟ
ರಾಯನ [4]ಮ[4]ಚ್ಚಿನ ಹನುಮ
[5]ಸಾಯಿ[5]ದೇವ[6]ನ[6]ಸಂಗು ಮೊದಲಾದ [7]ರಾವುತ[7]
[8]ಪಾಯಕರನು[8] ಕಳುಪಿದನು ೬೩†

ಲಾಯಿದೇ[9]ವನು[9] ಮಾಯಿದೇವ [10]ಭೈರವದೇವ[10]
ಕಾಯಿದೇ[11]ವನು[11] ಕಾಲಾ[12]ಳುಗಳ[12]
ತಾಯೆನಿಸುವ ಬಿರಿದುಳ್ಳ ರಾವುತರನಾ
ರಾಯಕು[13]ವ[13]ರ ಕಳುಪಿದನು ೬೪

ಕುಂಚದಣ್ಣುಗ [14]ಗಂಟೆ[14]ಯ ನಾಗ [15]ರಂ[15]ಗುಗ
ಚುಂಚುದಲೆಯ ಲಕ್ಕ ಬೈರ
ಕಂಚುಗಾಱರ ತಿಪ್ಪ ಮುಕುತಿಯ ಗಂಗಣ್ಣ
ಮಿಂಚಿನ ಹರಿಗೆಯ ಕಾಮ ೬೫

---

1 ಪ್ಪು (ಎ ಗ)  2 ರು (ಉ ಐ)  3 ಭೈರ (ಐ)  4 ಮೆ (ಅ ಉ ಎ ಗ)
5 ಸೋಹಿ (ಅ ಇ ಐ ಗ) ಸೋಯಿ (ಉ)  6 ನು (ಉ ಐ)  7 ವರನಾ (ಐ)
8 ರಾಯಕುಮಾರ (ಐ)  9 ವ (ಅ ಎ ಗ)  10 ಸಾಯಿಗ ಭೈರ (ಐ)  11 ವ (ಅ)
ವನೆಂಬ (ಉ ಎ ಗ)  12 ಳ (ಅ ಇ ಉ ಎ ಗ)  13 ಮಾ (ಐ)  14 ಘುಟ್ಟಿ (ಐ)
15 ಗಂ (ಉ ಎ)

† ೬೩ನೆಯ ಪದ್ಯವಾದಮೇಲೆ (ಉ) ಪ್ರತಿಯಲ್ಲಿ ಈ ಪದ್ಯವಿದೆ :

ಬಲೆಯ ಸತ್ತಿಗೆಯ ಬೊಮ್ಮಗ ಬೋಳ ಜುಂಜೈಯ
ಸಲುಗೆಯ ಬೈಚ ಮಲ್ಲರಸ
ಕಲಹಲಂಪಟ ಕೆಂಚ ಬೊಮ್ಮ ಮಾಳಯ್ಯನೆಂ
ಬಲಘುವಿಕ್ರಮರ ಕಳುಪಿದ

[1]ಲಕ್ಕುಂದಿ[1]ಯು ಬೊಮ್ಮ ಬೊಕ್ಕಸದಾ೨ಬಳ
ಮಿಕ್ಕಮನದ ಚೆನ್ನ ಚಿಕ್ಕ
ಉಕ್ಕಡದಲ್ಲಿ ಹರಿದಿಱುವ ನಾಗಣನೆಂಬ
ಮಿಕ್ಕ ಭಟರ ಕಳು[2]ಪಿ[2]ದನು ೯೬

ನಾಕು ಸಾವಿರ ತೇಜಿ ನಾಲ್ವತ್ತುಸಾವಿರ
ಜೋಕೆಯಮಂದಿ ನೂಱಾನೆ
ನೂಕಿ ನಡೆದುದು ಕಾಟಣ್ಣನೊಡನೆ ರವಿ
ನೂಕಿದ ರಥವನಾಗಸಕೆ ೯೭

ಬಲವನೆರಡು ಪೌ[3]ಜ[3]ಮಾಡಿ ಬೇಗದೊಳೆಡ
ಬಲದೊಳಡಗಿಸಿ ಕಾಟಣ್ಣ
ಬಲುರಾವುತರೊಡನಯ್ವತ್ತೆಯ್ತರೆ
ಕಲಹ[4]ಕೆ[4] ನಡೆದನಳ್ತಿಯೊಳು ೯೮

ಬಿಡದೆ ಹರಿಯಬಿಟ್ಟನು [5]ಮೇಲೆ ನೇಮಿಯು[5]
ಗುಡಿಯ ಮುಂದಾನೆ ಕುದುರೆಯು
ಪಿಡಿದನು ಖೋಯೆಂದು ಹುಯ್ಯಲಾದುದು ಬಂದು
[6]ಬಡಗ[6]ಣದವರು ತಾಗಿದರು ೯೯

ತಾಗಿದವರ ತಾಗ ತಿವಿದು ಕೆಡಪಿದನು
ಸಾಗದೆ [7]ಮಲತ[7] ರಾವುತರ
ಸಾಗಿಸಿದನು ಯಮಪುರಿಗೆ ಪಾಳೆಯವನು
ಕೂಗಿಡಿಸಿದನು [8]ಬೇಗದೊಳು[8] ೧೦೦

ಕುಱಿಯ ಹಿಂಡನು ತೋಳ [9]ಪೊಕ್ಕಂ[9]ತೆ ಕಡಿದೊಟ್ಟಿ
ಬಿಱುವರಿವುತಿ[10]ರೆ[10] ಕಂಡದನು
ಅಱಿದು ಪಾಳೆಯವ ತಿರುಗುವ [11]ಕು[11]ದುರೆ ಬಂದು
ತಱುಬಿತವನ [12]ತವಕದೊಳು[12] ೧೦೧

---

[1] ಲೊಕ್ಕುಂಡಿ (ಇ ಎ) ಮುಕ್ಕುಂಡಿ (ಐ) [2] ಹಿ (ಐ) [3] ಜು (ಇ ಉ ಗ) [4] ಕ್ಕೆ (ಅ ಉ) [5] ನೇಮಿಯು ಮೇಲೆ (ಇ) [6] ಪಡಕ (ಅ ಇ ಉ ಗ) [7] ಮಲತು (ಅ ಗ) ಮಲೆವ (ಇ) [8] ಪಾಳೆಯುವ (ಅ) [9] ಹೊಗುವ (ಅ ಇ ಉ) [10] ರಲು (ಐ) [11] ಗು (ಅ ಉ) [12] ವೋಲಂದು (ಎ ಗ).

[1]ಕಾ[1]ವಲುಕುದುರೆಗಳೆಯ್ತಂ[2]ದು ಇ[2]ಪ್ಪತ್ತು
ಸಾವಿರ ಮುಸುಕಿ ಕವಿಯಲು
ಗಾವಳಿ[3]ಯನು ಬಿಟ್ಟು[3] ತಿವಿದು ಕೆಡ[4]ಹಿ[4]ದನು
ರಾವುತರನು ಬೇಗದೊಳು ೧೦೨

ತಱುಬಿದ ರಾವುತರನು ತ[5]ಱುಬಿದನಂದು[5]
ದುಱುಬುವ ಬಲುರಾವುತರನು
ಹೊಱಿಸಿ ತಿವಿದು ನೂಕಿದನು ಬಲ್ಲೆಯದಿಂದ
ನೆಱೆಗಲಿ ರಾಮಾಗ್ರಜನು ೧೦೩

ಎಲ್ಲಿಯ [6]ಜಗಳವೆನುತ ಮೆಲ್ಲನೆ[6] ನೇಮಿ
ಮಲ್ಲುಕ ಗುಡಿಯ ಬಾಗಿಲೊಳು
ನಿಲ್ಲ[7]ದ[7] ಮುನ್ನ ವಜೀರ ಮಲ್ಲುಕಖಾನ
ರೆಲ್ಲರಯ್ತಂದು ಕೂಡಿದರು ೧೦೪

ಕಂಡನು ಕಂಪಿಲಸುತನ ರಾವುತಿಕೆಯು
ದ್ದಂಡತೆಯನು ನೇಮಿಖಾನ
ಕೊಂಡಾಡಿದನೊಂದು ಲಕ್ಕಕುದುರೆಯ ಮುಂ
ಕೊಂಡು ಹರಿಯ ಬಿಟ್ಟನಾಗ ೧೦೫

ಒಬ್ಬನ ಮೇಲೊಂದು ಲಕ್ಕಕುದುರೆ ಬೊಬ್ಬೆ
ಯಬ್ಬರ ಮಿಗಿಲೇಱಿ[8]ದುದು[8]
ತಬ್ಬಿಬ್ಬಿಯಿಲ್ಲದೆ ಮಲೆ[9]ವುತ[9] ಸಾಗುತಂ
ದುಬ್ಬಿ ನಿಂದೆಳೆದ ಹುಯ್ಯಲನು ೧೦೬

ಮುಟ್ಟಿ ತಿವಿವ ರಾವುತರ ತಿವಿ[10]ವ[10]ನು [11]ಕೈ[11]
ಗೆಟ್ಟದೆ ಚಿಗಿ[12]ವ[12]ರಾವುತರ
ಬಿಟ್ಟು[13]ಸಾಗುವನು[13] ಬೀದಿಯ ಬಿಡಿಸುವನಡ್ಡ
ಗಟ್ಟಿದವರ ಹೊಕ್ಕು ತಿವಿ[14]ದು[14] ೧೦೭

---

1 ಆ (ಉ ಗ) ಅ (ಎ) 2 ದಿ (ಇ ಎ ಐ ಗ) 3 ಯಿಂದಟ್ಟಿ (ಎ ಗ) 4 ಪಿ (ಉ ಎ ಐ) 5 ಱಿದನು ಬಂ (ಇ ಎ ಐ) 6 ಜನಕಳಕಳವೆನುತಾ (ಉ) 7 ಲು (ಗ) 8 ದರು (ಅ ಎ ಗ) ದವು (ಐ) 9 ತವು (ಐ) 10 ದ (ಐ) 11 ಕೆಲ (ಐ) 12 ದ (ಅ ಎ ಗ) 13 ಸಾಗುವ (ಇ) ಹಿಂಗುವನು (ಐ) 14 ವ (ಅ ಇ ಎ).

ಸುತ್ತ ಬಳಸಿಕೊಂಡ ಖಾನಖಾನರ ಬಿಡ
ದೊತ್ತಿ ತಿವಿದು ನೂ[1]ಕುವ[1]ನು
ಹೊತ್ತು ಹೋರುವ ರಾವುತರ ಮೊಗದೊಳು ಬಿ[2]ಸು[2]
ನೆತ್ತರ ಮಳೆಗಱೆಯಿಪನು ೧೦೮

*ಎಡಬಲದೊಳು ಹಿಂ[3]ದು[3]ಮುಂದೆ ಕಾಟಣ್ಣನ
ಕಡಿವುತೆ[4]ಸುತ[4] ತಿವಿವು[5]ತ್ತ[5]-
ಬಿಡದೈತಪ್ಪರಿಬಲದ ಬೆನ್ನೊಳ[6]ಗಿದ್ದ[6]
ವಡಗಿರ್ದವೆರಡು ಪೌಜುಗಳು ೧೦೯

*ಅಡಗಿರ್ದ ಗಿಡುಗನ ಹಿಂಡು ಬೆಳ್ಳಕ್ಕಿಯು
ಪಡೆಯ ತಾಗುವ ತೆಱದಿಂದ
ಕಡುಗಲಿಗಳು ತಾಗಿದರು ತಿವಿದರು ಕೂಡೆ
ಕೆಡ[7]ಹಿ[7]ದರಾನೆಕುದುರೆಯ ೧೧೦

ಹುಲಿಯು ಜಂಗುಳಿ ಹುರಿಗಟ್ಟಿಕೊಂಡೇಣನ
ಬಲವ ಪಿಡಿವ ತೆಱದಿಂದ
ಬಲುರಾವುತರು ರಾವುತರ [8]ತಿವಿ[8]ದು ವಾಜಿ
ಕುಲವ ಪಿಡಿದರು ಸಾವಿರವ ೧೧೧

ಮೇಲವರನು ಹೊಯ್ದು ಕೆಡ[9]ಹಿ[9] ಕಾಲವರಾರ್ದು
ಮೇಲುಗುದುರೆಯ ಸಾವಿರವ
ಲೀಲೆಯಿಂ ಪಿಡಿದಾ ಸು[10]ರು[10]ತಾಳಬಲವನು
ಕಾಲನೆಡೆಗೆ ಕಳು[11]ಪಿ[11]ದ[12]ರು[12] ೧೧೨

ಏಳುಸಾವಿರ ತಲೆಯನು ಹೊಯ್ದುದು ಕಾ
ಲಾಳು ಕವಿದು ಕಾಟ[13]ಣ್ಣ[13]
ಡೋಳು ತಂಬಟ ಚೆಂಬಕವಱೆ ಬೊಂಬುಳಿ
ಕಾಳೆಗಳುಲಿಯೆ ಮರಳಿದ ೧೧೩

---

[1] ಕಿದ (ಐ) [2] ಸಿ (ಅ ಇ ಉ ಎ ಐ) [3] ದೆ (ಅ ಉ ಎ ಗ) [4] ಸೆವು (ಐ)
[5] ತ (ಎ ಐ ಗ) [6] ಗೆದ್ದ (ಅ ಉ ಎ ಗ) [7] ಪಿ (ಐ) [8] ಪಿಡಿ (ಅ) [9] ಪಿ (ಐ)
[10] ರಿ (ಉ) ರ (ಎ) [11] ಹಿ (ಉ) [12] ನು (ಅ) [13] ಣ್ಣನು (ಎ ಗ ಣ ಐ)
* (ಉ) ಪ್ರತಿಯಲ್ಲಿಲ್ಲ.

ಬಂದು ಕಂಡನು ರಾಯನಂಘ್ರಿಯ ಕಾಟಣ್ಣ
ನಂದು ಮೆಯ್ಯಿಕ್ಕಿ ಭೂತಳಕೆ
ನಿಂದೊಪ್ಪಿಸಿದನು ಪಿಡಿ[1]ದ[1] ಕುದುರೆ[2]ಯನಾ[3]
ನಂದದಿಂದೆರಡು ಸಾವಿರವ ೧೧೪

ಮೇದಿನೀಶ್ವರ ಮೆಚ್ಚಿದನು ಮನದೊಳು ಮಂತ್ರಿ
ಯಾದರದಿಂ ಪೊಗಳಿದನು
ಕಾದಿ ಖಾನರ ಕೊಂದು ಕಾಟಣ್ಣ ನೇಮಿಯ
ಮೂದಲಿಸಿ[3]ದನು[3] ವಿಕ್ರಮಕೆ ೧೧೫

ಕಂಡು ಕಾಟಣ್ಣನ ವಿಕ್ರಮವನು ಬಗೆ
ಗೊಂಡು ಸಮುದ್ರರಾಜನಿಗೆ
ಕೊಂಡಾಡಿ ಪೇಳಲೆಯ್ದಿದನೆಂಬಂತೆ ಮಾ
[4]ರ್ತಾ[4]ಂಡನೆಯ್ದಿದನಸ್ತಗಿರಿಯ ೧೧೬

*ಸೀಸಕ ವಜ್ರಾಂಗಿ ಸವಗ [5]ವೊಜ್ಜೆ[5]ಯುಗಳ
[6]ನೋಸರಿಸು[6]ವ ಕೈದುಗಳ
ಘಾಸಿಯಾಗದೆ ಮಸೆಯಿಪ [7]ಭ[7]ಟರಿಂದ ವಿ
ಲಾಸವಡೆದುದುಭಯ ಬಲ ೧೧೭

ಕರಿತುರಗ[8]ಗಳ[8]ನರ್ಚಿಸುವ ಕೈದುಗಳಿಗೆ
ಭರದಿಂದ ಕುಱಿಕೋಣಗಳ
ಅರಿದು ಬಲಿಯನೀವ ಭಟರಿಂದ ಪಾಳೆಯ
ವೆರಡಂದಿನಿರುಳು ಮೆಱೆದುದು ೧೧೮

ಮಾನಸದೊಳಗಂತಿಂತಾಗುತ ದು
ಮ್ಮಾನದಿಂದೂರಿಸು[9]ತಂದು[9]
ಮೌನದೊಳಿರ್ದರು ಸಕಲಖಾನರು ನೇಮಿ
ಖಾನನ [10]ಕೆಲ[10]ಬಲದೊಳಗೆ ೧೧೯

---

[1] ದುತಂದ (ಐ) [2] ಯಾ (ಐ) [3] ದ (ಅ ಇ ಎ ಗ) [4] ರ್ತ (ಅ)
[5] ವೋಜೆ (ಐ) [6] ನೊಸಯಿಸು (ಎ ಗ) ಲೇಸೆನಿಸು (ಐ) [7] ಬಂ (ಗ)
[8] ವ (ಐ) [9] ತಿಂತು (ಅ) [10] ಎಡ (ಅ)
* (ಉ) ಪ್ರತಿಯಲ್ಲಿಲ್ಲ.

ಹಿಂದುವರಿಗೆ ಹಿಂದುಮುಂದಾದ ಕೊಱತೆಯೊ
ಳೊಂದಿ ಮಲ್ಲುಕರೋಲಗದೊಳು
ನಿಂದಿರಲವರ[1]ನುಡಿದನಾ ನೇಮಿಯಿಂ[1]
ತೆಂದು ಕೋಪಾಟೋಪದಿಂದ ೧೨೦

ಹಿಂದುವ[2]ಗು[2]ದುರೆ[3]ಗಯ್ವತ್ತಕ್ಕೆ[3] ಮುಱಿದೋಡಿ
ಬಂದಿರಿ ಪೌಜೇಱಿದೊಡೆ
ಮುಂದುಗೆಡಿಸಿ ರಾಮನ ಪಿಡಿವುದ ಪೇಳಿ
ಯೆಂದು ಕೇಳಿದನು ಖಾನರನು ೧೨೧

ಮೋಸದೊಳಗೆ ಬಂದು ಹಿಂದುವರೆಮ್ಮನು
ಘಾಸಿಮಾಡಿದರು ಮಱೆಯೊಳು
ಏಸಱವನು ಕಂಪಿಲ ನಾಳೆ ಕೈಮೆಯ[6]
ಹೇಸ ಕೊಲು[4]ವೆವು[4] [5]ಹಿಂದುವರ[5] ೧೨೨

ನಾಳೆ ಪೌಜಿಕ್ಕಿದನಾದೊಡೆ ಕಂಪಿಲ
ನಾಳುಕುದುರೆ[6]ಯನೆ[6]ಲ್ಲವನು
ಕಾ[7]ಳ[7]ಗದೊಳು ಕಡಿದೊಟ್ಟಿ ರಾಮನ ಹಿಡಿ
ಯಾಳ ಹಿಡಿವೆವು ಚಿತ್ತೈಸು ೧೨೩

ಬಲವನೆಲ್ಲವನು ಮೂವಳಸಾಗಿ ಬಳಸಿಕೊಂ
ಡಳವುಗೆಡಿಸಿ ಹಿಂದುವರ
ಕಲಹದೊಳಗೆ ಕಣ್ಗೆಡಿಸಿ ರಾಮನ ಬಾ
[8]ಳ್ದ[8]ಲೆಯನೊಪ್ಪಿಸದೆ ಮಾಣ್ದಪೆವೆ ೧೨೪

*ಎಂದು ನುಡಿವುತಿರೆ ಖಾ[9]ನ[9]ರದನು ನೋಳ್ಪೆ
ನೆಂದೆಯ್ತಂದನೆಂಬಂತೆ
ಬಂದು [10]ಮೆಯ್ದೋಱ[10]ದನುದಯಾದ್ರಿಶಿಖರದೊ
ಳಂದರವಿಂದಬಾಂಧವನು ೧೨೫

---

[1] ನಾ ನೇಮಿ ನುಡಿದನಿಂ (ಉ) ನುಡಿಸಿದನಾ ನೇಮಿಯಿಂ (ಐ) [2] ಕು (ಇ) [3] ಗಯ್ಝೂರಕೆ (ಇ) ಗೀ ಹೊತ್ತೇಕೆ (ಎ ಗ) [4] ವೆ (ಅ ಇ ಐ) [5] ಚಿತ್ತೈಸು (ಉ) ನೆಂದರವರು (ಐ) [6] ಯೆ (ಅ ಎ ಗ) [7] ಳೆ (ಉ) [8] ಳಃದ (ಅ ಇ ಉ) ಳದ (ಗ) [9] ನರೆಲ್ಲಿ (ಅ) [10] ಮೆಯ್ಯಿಕ್ಕಿ (ಐ) * ೧೨೫, ೧೨೬ (ಎ ಗ) ಗಳಲ್ಲಿ ಹಿಂದು ಮುಂದಾಗಿವೆ.

ತುರುಕರನೋಡಿಸಲೀ ರಾಮುನವರೀ
ಧರಣಿಯೊಳಿರಲೆನಗರ್ಘ್ಯ
ದೊರೆಯದಾನಡಗಿ[1]ಪ್ಪು[1]ದನುಚಿತವೆಂಬಂ
ತಿರ[2]ಲಿ[2]ನ ಮೆಯ್ದೋಱಿದನು ೧೨೬

ಭೇರಿಗಳನು ಪೊಯ್ಸಿ ಬೇಗದಿಂದಾ ನೇಮಿ
ಭೂರಿಬಲವ ಕೂಡಿಕೊಂಡು
ಸೇರಿ ಕುಮ್ಮಟವನು ಪೌ[3]ಜು[3]ಮಾಡಿ[4]ದನಂ
ದಾರದನಭಿವರ್ಣಿಸುವ[4]ರು ೧೨೭

ಕರಿಯೇ[5]ಳು[5]ನೂಱೈವತ್ತು ಸಾವಿರ ವಾಜಿ
[6]ನರರೊಂದುಲಕ್ಕ ಕರಭವು[6]
ಪರಿಕಿಸಲಿನ್ನೂಱೈವ[7]ತ್ತೀ[7] ಲೆಕ್ಕದೊ
ಳಿರದೆದ್ದವೆಂಟು ಪೌಜುಗಳು ೧೨೮

ಕೈಲಾಸ ಮಂದರ ಮೇರು ಮಹೇಂದ್ರ ಹಿ
ಮಾಲಯ ವಿಂಧ್ಯ [8]ರೈ[8]ವತಕ
ನೀಲಾದ್ರಿಯೆನಲೆಂಟು ಪೌಜುಗಳೆ[9]ದ್ದವು[9]
ಸಾಲುವಿಡಿದು [10]ಸಮರ[10]ದೊಳು ೧೨೯

ಸಿಡಿಲ ಮೋಹರವೊ ಕಲ್ಪಾಂ[11]ತ[11]ವಹ್ನಿಯ ಬಲು
[12]ಗಿ[12]ಡಿಯ ಜಂಗುಳಿಯೊ ಗರಳದ
ಕಡಲೊ ಕಾಲನ ಪಾಳೆಯವೊ ಎಂದೆನಲಾ
ಪಡೆ ಮೆಱೆದುದು ಕಣ್ಗಳಿಗೆ ೧೩೦

---

[1] ಪುರ್ (ಇ ಗ) [2] ದಿ (ಐ) [3] ಜ (ಅ ಉ ಎ ಗ) [4] ದನಂ। ದಾರದ ನೊಲಿದು ಬಣ್ಣಿಪ (ಇ ಎ ಗ) ಸಿದನದ। ನಾರೊಲಿದಭಿವರ್ಣಿಸುವ (ಐ) [5] ಳ್ (ಐ) [6] ನರರಗಣಿತಕರಭಗಳು (ಇ) ಉರುತರ ಕರಭ ಕದಂಬ (ಉ) ಕರಭ ಕದಂಬ ಲೆಕ್ಕಿಸಲು (ಎ ಗ) ಕರಭಕದಂಬಕವೊಲಿದು (ಐ) [7] ತ್ತು (ಇ) ತ್ತ (ಉ ಐ) ತ್ತಿರೆ (ಎ ಗ) [8] ರೇ (ಐ) [9] ಸೆದವಾ (ಇ ಎ) ಸೆದವು (ಉ ಗ) [10] ಸಂಭ್ರಮ (ಐ) [11] ತರ (ಎ ಗ) [12] ಕಿ (ಅ ಎ ಗ).

*ಎಡಬಲದೊಳಗಿರದಡರ್ವ ಕುದುರೆಗಳ
ಗಡಣದಿಂ ಕಲ್ಮರವೊಳೆಯ
ಬಿಡದೆ ಕಿತ್ತೀಡಾಡುವ ಮದಗಜಗಳಿಂ
ದೊಡನಾ ಪಡೆ ರಂಜಿಸಿದುದು ೧೩೧

ತಳಮಳಲೇಳೆ ಮುನ್ನೀರು ತಾರಗೆಗಳು
ಕಳಕುಳವೆಯ್ದೆ ಗಗನ[1]ದ[1]
ಪೊಳೆ ತುಳುಕಾಡೆ ನೇಮಿಯು ಬಲದೊಳು ವಾದ್ಯ
ಮೊಳಗಿದ[2]ವಂದು ಮೋಹರಿಸಿ[2] ೧೩೨

ತಂಬಟ ಬೊಂಬುಳಿ ಕೊಂಬು ಕೊಳಲು ಚಿನ್ನ
ಚಂಬಕವಱೆ ತಿತ್ತಿರಿಗಳ
ಡೊಂಬಿ[3]ಯ[3] [4]ಧ್ವ[4]ನಿಯಾಗಸದೊಳು ಮೇಘಾ
ಡಂಬರವೆನೆ ಮೊಳಗಿ[5]ದುದು[5] ೧೩೩

†ಇದು ಪರದಾರಸೋದರರಾಮನಾಥನ
ಪದಕೃತಿಯೊಳಗೈದನೆಯ
ವಿದಿತಾಶ್ವಾಸದೊಳ್ ಮೂಱನೆಯದು ಸಂಧಿ
ಮೃದುಪದಚಯಸಂಬಂಧಿ ೧೩೪

---

[1] ವ (ಅ) [2] ವೇನ ಪೇಳುವೆನು (ಐ) [3] ನ (ಐ) [4] ದ (ಇ ಎ ಐ ಗ)
[5] ದವು (ಅ ಇ ಎ ಐ ಗ) * (ಉ) ಪ್ರತಿಯುಲ್ಲಿಲ್ಲ † (ಅ ಎ ಐ ಗ) ಪ್ರತಿಗಳಲ್ಲಿಲ್ಲ.

# ಇಪ್ಪತ್ತನೆಯ ಸಂಧಿ

---

## ನೇಮಿಯ ಪರಾಜಯ

ಇತ್ತಲಿಂತಿರೆ ನೇಮಿಖಾನ ಕುಮ್ಮಟದಿಂ
ದೊತ್ತಿ ನಡೆದು ಬಂದು ರಾಮ
ಸುತ್ತಿದ ಬೆಟ್ಟದಿಟ್ಟೆಡೆಗಳೊಳಗೆ [1]ಪೌಜ
ತೆ[1]ತ್ತಿಸಿದನು [2]ತೆಱನ[2]ಱಿದು ೧

ಅಳಿಯ ಮಲ್ಲರಸ ಸಂಗಮದೇವ ಕಾಟಣ್ಣ
ಬಲಯುತ ಬಾದುರಖಾನ
ಕಲಿಭೈರವದೇವನೆಂಬರನೊಂದೊಂದು
ಬಲಕೆ ನಾಯಕರ ಮಾಡಿದನು ೨

ಕೆಲಬಲದೊಳು ಬಿಲ್ಲವರನವರ ಮುಂದೆ
ಬಲುಹರಿಗೆಯ[3]ವರನವರ[3]
ಕಲಹಕೆ ಕೈನೆರವಾಗಿ ಸಬಳಿಗರ
ನಿಲಿಸಿದನಾ ರಾಯಕುವರ ೩

ಅವರೆಡಬಲದೊಳು ರಾವುತರನು ಮ
ತ್ತವರ ಹಿಂಗಡೆಯೊಳಾನೆ[4]ಗಳ[4]
ಅವರ [5]ಮುಂ[5]ಗಡೆಯೊಳೊಲಿದು ಚೂಣಿಯ ಬಲು
ದ[6]ವಕಿ[6]ಗಳನು [7]ನಿ[7]ಲಿಸಿದನು ೪

ಮನ್ನೆಯರನು ಬಗೆಯಱಿದು ನಿಲಿಸಿದನು
ಕನ್ನಕಂಡಿಗಳೆಡೆಗಳೊಳು
ತನ್ನ ಮೆಯ್ಯಾ[8]ವ[8]ಲ ಮಂದಿ ಕುದುರೆ[9]ಯೊಳಾ[9]
ಚೆನ್ನಿಗ ರಾಮನೊಪ್ಪಿದನು ೫

---

[1] ಪೌಜನೆ (ಅ ಐ) ಪೌಜೆ (ಉ) [2] ಬಗೆಯ (ಐ) [3] ರಾವುತರ (ಎ ಗ)
[4] ಯನು (ಅ ಗ) [5] ಹಿಂ (ಅ) [6] ಕ್ಷಿ (ಇ ಎ) [7] ಕೀ (ಅ ಉ ಎ ಗ)
[8] ವಿ (ಅ ಎ ಗ) [9] ಗೂಡಿ (ಐ).

ಚರಣಗಳಿಗೆ ಚೆಲ್ಲ ಪಿಡಿಪೊಂಗಳನಾ
ಸುರತುರಗವನಡರಿದನು
ಇರದೆ ತೆಗೆದು ನೋಡಿದನು ಕೃಷ್ಣರಾಯನ
ವರ ಶಾರ್ಙ್ಗವನಾ ರಾಮ ೬

ಸರಳು ತುಂಬಿದ ತರಕಸ ಬತ್ತಳಿಕೆಯು ಸಾ
ವಿರವನೊಳಿಗದ ರಾವುತರ
ಕರದೊಳು ಕರೆದು ಕರೆದು ಕೊ[1]ಟ್ಟು[1] ವೈರಿವೋ
ಹರಕಿದಿರಾದನಾ ರಾ[2]ಮ[2] ೭

ಮುಸಲ ಮುಸುಂಡಿ ಕಣೆಯು ಕಂಪಣ ಕೊಂತ
ಕುಸುರಿದಱುವ ಗಂ[3]ಡುಗೊ[3]ಡಲಿ
ಅಸಿ ತೋಮರ ಪಿಂಡಿವಾಳಗಳನು [4]ಹೊತ್ತ[4]
[5]ರೊ[5]ಸೆದೊಳಿಗದ ರಾವುತರು ೮

ಭೀಮನೇಕಾಂಗದೊಳಗೆ ಬಂದು ಕೌರವ
ನಾಮೋಹರಕೆ ನಿಂದಂತೆ
ನೇಮಿಖಾನನ ಬಲಕಿದಿರಾಗಿ [6]ನಿಂ[6]ತನಾ
ರಾಮ ಸಂಗ್ರಾಮಭೂಮಿ[7]ಯೊಳು[7] ೯

ಕಾಂತಾರದಂತಿಸಂತತಿಗೆ ಗಜಾಂತಕ
ನಾಂತು ಮಸಗಿ ನಿಂದಂತೆ
ಅಂತಿಂತಾಗದೆ ನಿಂದನು [8]ನೇಮಿಯ[8]
ನಂತ ಬಲಕೆ [9]ರಾಮ[9]ನೊರ್ವ ೧೦

ಮಾರುತಿಗೆಣೆ ಪಾರ್ಥಗೆ [10]ಪಾ[10]ಟಿ ತರಣಿಕು
ಮಾರಗೆ ಸರಿಯೆಂದೊರೆಯದೆ
ಈ ರಾಮ[11]ನನೆಂ[11]ತೀ ಕಲಿಕಾಲದ
ವೀರರೊಳಗೆ [12]ಪೇ[12]ಳುವೆನು ೧೧

---

[1] ಟ್ಟ (ಅ ಎ ಗ) [2] ಮನಾಥ (ಎ ಗ) [3] ಡಗೊ (ಅ ಎ ಗ) ಡುಕೊ (ಐ) [4] ಹೊ (ಅ) [5] ತ್ತೆ (ಅ) [6] ಮಲೆ (ಇ) ಮಲ (ಐ) [7] ಯಲ (ಐ) [8] ರಾಮನ (ಐ) [9] ತಾ (ಐ) [10] ಸಾ (ಐ) [11] ನಿಗೆಂ (ಅ) ನೆಂ (ಎ ಗ) [12] ಪೊಗ (ಐ).

ರಾಮನೊ ದಶರಥರಾಮನೊ ಬಲಭದ್ರ
ರಾಮನೊ ಗಂ[1]ಡು[1]ಗೊಡಲಿಯ
ರಾಮನೊ ಎಂದಿಂದ್ರ ಪೊಗಳಿಡನವನು
ದ್ದಾಮ ವಿಕ್ರಮದ ವಿಭವಕೆ ೧೨

ಆಗಳಾ ನೇಮಿಮಲ್ಲುಕನ ಬಹಳ ಬಲ
ಸಾಗರವನು ನಡೆನೋಡಿ
ಮೂಗಿನ ಮೇಲೆ ಬೆರ[2]ಳನಿ[2]ಟ್ಟು [3]ಶಿರವನು[3]
ತೂಗಿದನಾ ಕಂಪನೃಪತಿ ೧೩

ಈ ಸಿರದೊಲ[4]ಹೇ[4]ತಕೆ ರಾಯ ಬೆರ[5]ಲ[5]ನ
ನಾಸಿಕದಿರವೇಕೆ ನಿನಗೆ
ಈ ಸುರು[6]ತಾಳ[6] ಬ[7]ಲಾಂಬುನಿಧಿಯು[7] ತುಳ್ಕಿ
ಸೂಸುವೆನರೆಘಳಿಗೆಯೊಳು ೧೪

ಕೊ[8]ಡವಳೆ[8]ಯನು ಕಟ್ಟಬಲ್ಲನ ಮಳೆಯುವ
ಗಡಿಸಬಲ್ಲುದೆ ಕೇಳೆನ್ನ
ತುಡುಕಬಲ್ಲುದೆ ಬಲವಿದು ರಾಯ ಚಿಂತೆಯ
ಬಿಡು ನಡೆ ಪೌಜುಗಳೆಡೆಗೆ* ೧೫

ಉಱುಬಿತೆರಡು ಲ[9]ಕ್ಷ[9] ಕುದುರೆ ರಾಮನ ಮೇ
ಲಱು ಕಡಿ ತ[10]ಡೆ ಹಿಡಿಯೆಂಬ[10]
ಬಿಱು[11]ದ[11]ನಿಯಿಂದ ಬಿಡದೆ ಮೊಳಗುವ ಲಗ್ಗೆ
ವಱೆಯ ಕೋಳಾಹಳ[12]ದಿಂದ[12] ೧೬

---

[1] ಡ (ಅ ಇ ಗ) [2] ಲನಿ (ಉ) ಲ (ಎ ಐ) [3] ಮಕುಟವ (ಐ) [4] ಹವೇ (ಇ) ಹದೇ (ಎ ಗ) [5] ಳ (ಐ) [6] ತ್ರಾಣ (ಐ) [7] ರಾಂಬುಧಿಯನು (ಉ ಐ) [8] ದವಳೆ (ಇ) ಡೆವಳೆ (ಉ) ಡೆಮಳೆ (ಐ) [9] ಕ್ಕ (ಅ) [10] ಱಯೆಂದೆನುತ (ಅ) [11] ಧ್ವ (ಅ) [12] ಮಸಗೆ (ಉ)

*ಈ ತರುವಾಯ (ಐ) ಪ್ರತಿಯಲ್ಲಿ ಈ ಪದ್ಯವಿದೆ:

ಎಂದು ತಂದೆಯು ಸಂದೆಗವ ಬಿಡಿಸಿ ರಾಮ
ನಂದಿರಲತ್ತ ಮತ್ತತ್ತ
ಬಂದಾ ನೇಮಿ ಮಲ್ಲುಕ ಖಾನರ ಕರೆ
ದೆಂದು ಮೂದಲಿಸಲಂದವರು

[1]ಸುರಿವು[1]ತ ನಾಳಿವಿ[2]ಲ್ಲಿಂದ[2] ಸರ[3]ಳ[3] ಬ
[4]ಲ್ಸರಿಯ ಜೋದ[4]ರು ಮಾವುಸಗಿ
ಭರದಿ ನೂಕಿದರು ರಾಮನ ಮೇಲೆ ಕ[5]ರಿ[5]ಗಳ
ನೆರಡು ಸಾವಿರವ ರಣದೊಳು ೧೭

ಮಾಳವ ಮಗಧ [6]ಪುಳಿಂದ[6] ಗುರ್ಜರ ಹೂಣ
[7]ಲಾ[7]ಳ ಹಮ್ಮೀರ ದೇಶಗಳ
ಆಳುವರಸುಗಳು ಕ[8]ಱು[8]ದರು ರಾಮನ
ಮೇಲೆ ಸಿಂಗಾಡಿಯಂಬುಗಳ ೧೮

ಕದುಬಿದಿಖಾನ ಕೈರವಖಾನ ದಾದಿರ
ಸದಿರಿ[9]ದಿ ಖಾನ[9] ಮಿಾನಿಯ[10]ನು[10]
ಕದಿರ ಖಾನನು ಜಲಹರಿಖಾನ [11]ರೆಂದೆಂಬ[11]
ಮದಮುಖ[12]ಖಾನರೇಱಿದರು[12] ೧೯

ಅಂಬರಖಾನನಂಬುಧಿಖಾನ ದೇವಾಂಕ
ತುಂಬುರಖಾನರೆಂ[13]ಬಿ[13]ವರು
ಅಂಬಿನಂಬುಧಿಯ ತು[14]ಳು[14]ಕುತ ರಾಮನನಾ
ಡಂಬರ [15]ಮಿಗೆ ಮುತ್ತಿ[15]ದರು ೨೦

ಅಬ್ಬರಖಾನನಾಹುರ ಖಾನ [16]ಮುವ್ಮಾ[16]ರ
ಬಬ್ಬರಖಾನ ಮಧುರನು
ಡಬ್ಬರಖಾನರೆಂಬಿವರೇಱಿದರು ರಾಮ
ನೊಬ್ಬನ ಮೇಲೆ ಮೋಹರಿಸಿ ೨೧

---

[1] ಉರಿವು (ಅ) [2] ಲ್ಲುಗಳಿಂ (ಅ) ಲ್ಲಂಬು (ಇ) ಲ್ಲಂಬುಗಳ (ಎ ಗ) [3] ಳ ಳ (ಅ) ಲ (ಇ) [4] ಲ್ಸರಿಜೋದ (ಅ) ಲ್ಸರಿಯ ಜೋಧರ (ಎ ಗ) [5] ಲ (ಐ) [6] ಕಳಿರಿಗ (ಎ) [7] ನಾ (ಅ) [8] ವಿ (ಎ ಗ) [9] ದಿ (ಅ) ದಖಾನ (ಐ) [10] ರು (ಎ ಗ) [11] ಮೊದಲಾದ (ಅ ಇ ಎ ಗ) [12] ರೇಱಿತೊಗ್ಗಿನೊಳು (ಅ) ರೇಱಿತೊಗ್ಗಿನಲಿ (ಇ ಉ ಎ ಗ) [13] ಬು (ಅ ಇ ಉ ಗ) [14] ಳ್ಕು (ಎ ಗ) [15] ದಿಂದ ಮುತ್ತಿ (ಉ) ದಿಂದ ತಾಗಿ (ಐ) [16] ಮುಂಬಾ (ಅ).

ಹತ್ತುಸಾವಿರ ಕುದುರೆಯು ಜಾಯಿ ಮಲ್ಲುಕ
ಮತ್ತೆ ಕೋರಾಸಾ[1]ನಿ[1]ಗಳು
ಮುತ್ತಿಗೆಯನು ಮಾಡಿದರು ರಾಮನ ಮೆಯ್ಯ
ಮೆತ್ತಿದರಂಬುಗಳಿಂದ ೨೨

*ತುರುಕ ಬಚ್ಚೆಯರು ರಾಮನ ತುರಗದ ಮೇಲೆ
ಸುರಿದರಂಬಿನ ಸರಿವಳೆಯು
ಸರಳ ಶರಧಿಯ ಚೆಲ್ಲಿದರು ರಾಮನ [2]ಮೇಲೆ[2]
[3]ಇ[3]ರದೆ ಹಬ್ಬುಸಿಗಳೊಗ್ಗಿ[4]ನಲಿ[4] ೨೩

ಶರಧಿಯ ತೆರೆಮಾಲೆಗಳಂತೆ ಖಾನ[5]ರ[5]
ತುರಗದ ಪೌ[6]ಜೇಖು[6]ದುದು
ತೆರಳದೆ ತೆಕ್ಕದೆ ತೆಱಹುಗೊಡದೆ ರಾಮ
ನಿರೆ ಮೆಚ್ಚಿದರು ದೇವತೆಗಳು ೨೪

ಗೊರಕೆ ಸೆಲ್ಲೆಹ ಪಿಂಡಿವಾಳ ಚಕ್ರಗಳನು
ಸುರಿವುತ ಖಾನ[7]ರವನನು[7]
ಇರದೆ ಮುತ್ತಿಗೆಯ ಮಾಡಿದರಂಬರದೊಳು
[8]ಸುರರು ಸುರಿದರು[8] ಕಣ್ಬನಿಯ ೨೫

ಒಂದು ದೆಸೆಯೊಳೊಡ್ಡಿಯರು ಖನ್ನೋಜಿಗ
ಳೊಂದು ದೆಸೆಯೊಳು ತುರುಕರು
ಒಂದು ದೆಸೆಯೊಳು ಖಾನರು ಬಲವೆರ[9]ಸು[9] ಖೋ
ಯೊಂದು ರಾಮನ ಮುಸುಕಿದರು ೨೬

ಪ್ರ[10]ಳ[10]ಯ ಕಾಲದ ಮೇಘಜಾಲವಿಳಿಗೆ ಪೆ
ರ್ಮಳೆಯನೊಸೆದು ಕಱೆವಂತೆ
ತಳುವದೆ ಸುರಿದರವನ ಮೇಲೆ ಕ[11]ಣೆ[11]ಯ ಕೈ
ಚಳಕ [12]ಕೈಮಿಗೆ ರಾವುತರು[12] ೨೭

---

[1] ನ್ನಿ (ಅ) ಣೀ (ಇ ಉ ಎ ಗ) [2] ಮೋ (ಅ ಇ ಎ ಗ) [3] ಲ (ಆ ಇ ಎ ಗ)
[4] ನೊಳು (ಅ) [5] ರು (ಅ) [6] ಜು ಮೆಱೆ (ಎ ಗ) [7] ವರನು (ಇ ಎ ಗ)
ಮಲ್ಲುಕರು (ಐ) [8] ಸುರರು ಸುರಿಯೆ (ಎ ಗ) ಸುರಿದರು ಸುರರು (ಐ)
[9] ಸಿ (ಐ) [10] ಳಿ (ಇ ಗ) [11] ಣ (ಅ ಐ) [12] ವನೇನ ಬಣ್ಣಿಪೆನು (ಎ ಗ)
ಕೈಮಿಱೆ ರಾವುತರು (ಐ). * (ಉ) ಪ್ರತಿಯಲ್ಲಿಲ್ಲ.

ಅಂದು ಗೋಗ್ರಹಣದೊಳಗೆ ಕುರುಬಲಕಿಂದ್ರ
ನಂದನ ಮ[1]ಲೆ[1]ತು ನಿಂದಂತೆ
ಸಂದ ಸುರುತ್ರಾಣ ಬಲಕೊ[2]ಬ್ಬ[2]ನೆ ರಾಮ
ನಿಂದನಮರರು ಮೆಚ್ಚಿದರು ೨೮

ಬಲವೆಲ್ಲ ಸರ್ವಲಗ್ಗೆಯೊ[3]ಳೇಱು[3]ದೊಡೆ ರಾಮ
ನಳವುಗೆಟ್ಟನೆ ಮನದೊಳಗೆ
ತಳೆದನೆ ಚಿಂತೆಯ [4]ಕು[4]ಲಗಿರಿಯಂತೆ ನಿ
ಶ್ಚಲಿತನಾಗಿರ್ದನಾಜಿ[5]ಯೊಳು[5] ೨೯

ಬಿಡದವ[6]ರವರೆ[6]ಚ್ಚ ಬಾಣಗಳೆಲ್ಲವ
ಕಡಿದವರವ[7]ರ ಮೆಯ್ಯೊಳಗೆ[7]
ಇಡಿದನಂಬುಗಳನು ಖಾನಮಲ್ಲುಕರನು
ಕೆಡಪಿದನಾ ವೀರರಾಮ ೩೦

ತುಡುಕುವಾನೆಗಳ ಸುಂಡಿಲ ಕಡಿಯೆಚ್ಚನು
ಬಿಡದೆ ಮೇಲ್ವಾ[8]ಯ್ವ[8] ಕುದುರೆಯ
[9]ಹೊಡಗೆ[9]ಡಹಿದನು ಹೋರುವ [10]ಕಾಲವ[10]ರನು
[11]ಮಡುಹಿದನಾ ವೀರರಾಮ[11] ೩೧

*ಹರಿಗೆ ಸಬಳ ಬಿಲ್ಲಾನೆ ಕುದುರೆಗಳ
ವರವೀರಭಟರು ಮೋಹರಿಸಿ
ಹರಿದೊಂದು ಲಗ್ಗೆಯೊಳಗೆ ತಾಗಿ ರಾಮನ
ಶರಹತಿಯಿಂದ ಮಡಿದರು ೩೨

ಸೀಳಲೆಚ್ಚನು ಕುದುರೆಯನಾನೆಗಳ[12]ಕಯ್ಯ[12]
ಬೀಳಲೆಚ್ಚನು ಕಾಲವ[13]ರನು[13]
ಹೂಳಲೆಚ್ಚನು ರಣದೊಳು ರಾ[14]ಮನ[14] ಬಿ
ಲ್ಲಾಳುತನವನೇನನೆಂಬೆ ೩೩

---

[1] ಲ (ಅ ಐ) [2] ರ್ವ (ಉ ಎ ಐ ಗ) [3] ಳೆಯ್ದ (ಇ ಐ) [4] ಸು (ಉ)
[5] ಯುಲಿ (ಐ) [6] ರಿರದೆ (ಎ) [7] ಯುವಗಳೊಳು (ಉ) ಯುವದೊಳಗೆ (ಎ ಗ)
[8] ಯ್ದು (ಇ) ಯ್ದ (ಎ ಗ) [9] ಹೊಡೆದು ಕೆ (ಎ ಗ) ಹೆಡಗೆ (ಐ) [10] ರಾವುತ
(ಎ ಗ) [11] ಕೆಡಹಿದನಾಜಿರಂಗದೊಳು (ಉ) ಮಡಿಹಿದನಾ ವೀರರಾಮ (ಎ ಗ)
[12] ಕೈ (ಐ) [13] ರ (ಐ) [14] ಮ (ಐ). * (ಉ) ಪ್ರತಿಯಲ್ಲಿಲ್ಲ.

ಸಿಕ್ಕಿದನೀ ರಾಮನಿನ್ನೆಲ್ಲಿಗೆ ಪೋಗಿ
ಪೊಕ್ಕಪನೆನುತ ಮಲ್ಲುಕರು
ಕಕ್ಕಸ ಕೈಮಿ[1]ಗಿ[1]ಲೇಱಿ ರಾಮಾಸ್ತ್ರದಿಂ
ಪೊಕ್ಕರು ಯಮನಗರಿಯನು ೩೪

*ಆಳೊಟ್ಟಿಲಾನೆಯ ಮೆದೆ ಕುದುರೆ[2]ಯ[2] ಹೇ
ರಾಳದ ರಾಸಿ ರಂಜಿಸಲು
ಕಾ[3]ಳ[3]ಗದೊಳಗರಿಬಲವ ಕೊಂದನು ರಾಮ
ನಾಳುತನವನೇನನೆಂಬೆ ೩೫

ಮತ್ತೆ ಹರಿಯಬಿಟ್ಟನು ನೇಮಿಖಾನ ತ
ನ್ನೊತ್ತಿನ ಬಲವನೆಲ್ಲವನು
ಕಿತ್ತು ಕತ್ತಿಯೊಳೇ[4]ಱಿದರು[4] [5]ರಾಮನ ಸುತ್ತ[5]
ಮುತ್ತಿದರವ[6]ನ್[6] ಮೂದಲಿಸಿ ೩೬

ಸಿಂಗಾಡಿಯ ಕು[7]ರು[7]ಬಾಣದೊಳಗೆ ಮಿಗೆ
ಸಂಗಡಿಸುತ ಲೌಡಿಯನು
ಪಿಂಗದೆ ಪಿಡಿದು ನೋಡಿದನು ಖಾನರ ಬಲು
ಜಂಗುಳಿಯನು ರಾಮನಾಥ ೩೭

*ಹೊಯ್ದನು ಲೌಡಿಯಿಂ ತಲೆಯ ಮಿದುಳು ಮಿಗೆ
ಹಾಯ್ದು ಖಾನರು ಕಂಡಕಡೆಗೆ
ಕೆಯ್ದು ಬಿಸುಟು ಬಿಱುತೋಡೆ ರಾಮನನಂ
ದೆಯ್ದೆ ಪೊಗಳಿದರಮರರು † ೩೮

---

[1] ಗ (ಐ ಗ) [2] ಗಳ (ಐ) [3] ಳೆ (ಇ ಎ ಗ) [4] ಳು ಹೊಕ್ಕ (ಅ ಇ ಉ)
[5] ಖಾನನ ಸುತ್ತ (ಉ) ಖಾನರುಗಳು (ಇ) [6] ರು (ಉ ಐ) [7] ಱು (ಐ)
*(ಉ) ಪ್ರತಿಯಲ್ಲಿಲ್ಲ. † ಇದಕ್ಕೆ ಬದಲಾಗಿ (ಎ ಗ) ಪ್ರತಿಗಳಲ್ಲಿ,

ಖಾನರು ಮುತ್ತಿ ಮೂದಲಿಸುತಿರಲು ಮತ್ತೆ
ಏನೆಂಬೆನವನ ವಿಕ್ರಮವ
ಮಾನವಡಗಿ ಕೈದ ಬಿಸುಟೋಡಿದರು ನೋಡಿ
ಬಾನೊಳಮರರು ಪೊಗಳಿದರು

*ಉಡಿದು ಸಿಡಿಯೆ ದಂತಗಳುಕುಂಭಸ್ಥಳ
ವೊಡೆದು ಸುರಿಯೆ ಮೌಕ್ತಿಕಗಳು
ಕಡುಪಿನಿಂ ಪೊಯ್ದು ಕೆಡಪಿದನಾನೆಗಳ ಮಂ
ಗಡ[1]ವನಾ[1] ರಾಮ [2]ಲಾಡಿ[2]ಯೊಳು ೩೯

ಎಡದೊಳಬ್ಬರಿಸುವ ರಾವುತರನು ಬಲ
ಗಡೆಯೊಳು ಬಂದವಗಡಿಪ
ಕಡುಗಲಿ ಜೋದರ ಕೆಡಪಿ ರಣದೊಳು ಕೈ
[3]ವಿ[3]ಡಿದನು ವಿಜ[4]ಯಲಕ್ಷ್ಮಿಯನು[4] ೪೦

ಅಲ್ಲಿಗಲ್ಲಗೆ ಗಲ್ಲೆಗಟ್ಟಿ[5]ರ್ದ[5]ಪೌಜುಗ
ಳೆಲ್ಲವ ಹೊಯ್ದು ಕೆದಱಿಸಿ
ಚೆಲ್ಲಿತು ನೇಮಿಯ ಬಲಮೇಘದೊಳು ದೇವ
ವಲ್ಲಭ ನಲಿದನ[6]ರ್ದ[6]ಯೊಳು ೪೧

ಕೆಡೆಯೆ [7]ರಾವುತರು ನೆಲಕೆ[7] ವಾಜಿಗಳು ಕಂಡ
ಕಡೆಗೋಡಿದವು ಲಳಿಯೆದ್ದು
ಮಡಿಯೆ ಮಾತಂಗ[8]ಜ ಮಾ[8]ವಟಿಗರು ಕಾಲೊ
ಳೆಡೆಯಾಡುತಿರ್ದರಾಜಿಯೊಳು ೪೨

ಕೆಡೆದ [9]ಭಟರ[9] ಕೆದಱಿದ ಹಾರಗಳ ಕಡಿ
ಪಡೆದ ಪದಕಗಳ ಮುಱಿದ
ಉಡಿದಾರ[10]ಗಳ[10] ಮಂಗಡದಿಂದಾ ರಣ
ದೆಡೆ ರಾಜಿಸಿ[11]ತು ಕಣ್ಗಳಿಗೆ[11] ೪೩

ಉಡಿದ ಖಂಡೆಯದ ತುಂಡಿಸಿದ ಬಲ್ಲೆಯದರೆ
ಗಡಿದ ಪಕ್ಕರೆಯ ಖಂಡಿಸಿದ
ತಡಿಯ ಮುಱಿದ ಮಿ[12]ಸಿಕಿಯ[12] ಹೇರಾಳದಿಂ
ಬಿಡದೆಸೆದುದು ರಣಭೂಮಿ ೪೪

---

1 ವನು (ಎ ಗ) ಗಳಾ (ಐ) 2 ನಾಜಿ (ಐ) 3 ಪಿ (ಗ) 4 ಯಾಂಗ ನೆಯ (ಐ) 5 ಧ (ಅ) 6 ದೆ (ಉ ಗ) 7 ನೆಲಕೆ ರಾವುತರು (ಇ) 8 ಗಳ್ಮಾ (ಉ) 9 ಭರಕೆ (ಐ) 10 ದ (ಐ) 11 ದುದು ಕಣ್ಗೆ (ಐ) 12 ಸುಕಿಯ (ಉ ಎ ಗ) ಸುಕಿದ| (ಐ). * (ಉ) ಪ್ರತಿಯಲ್ಲಿಲ್ಲ.

ಹಱಿದ ಹೊರ[1]ಜೆ[1]ಗಳ ಮುಱಿದ ಱೆಂಚೆಯಗಳ
ತಱಿದ ಬಲ್ಮೊಗರಂಬಗಳ
ಹಱಿಹಂಚಾದ [2]ಹ[2]ಕ್ಕರಿಕೆಗಳೊಟ್ಟಿಲು
ಮೆಱೆದುದು ರಣಭೂಮಿಯೊಳು ೪೫

ತರಕಸದೊಟ್ಟಿಲು ಸಿಂಗಾಡಿಯ ಮೆದೆ
ಕುರುಬಾಣದ ಬಲುರಾಸಿ
ಸರಲ ಕಾಂತಾರ ಕೈಪೊಡೆಯ ಮೊರಡಿ ಕಣ್ಗೆ
ಕರಮೆಸೆದುದು [3]ರಣಭೂಮಿ[3] ೪೬

ದಶರಥಿ ಜವದಾಡೆ ಕಡಿದಾಬೆ ಕಾಲಕು
ಪ್ಪಸ ಕಂಗಲು ತೌಳಿ ಸವಗ
ಎಸೆಯೆ ರಣದೊಳೆಸೆದರು ರಾಮಾಸ್ತ್ರದಿಂ
ದಸುವ[4]ನುಳಿದ ರಾವುತರು[4] ೪೭

ಮಡಿದ ಮನ್ನೆಯರಿಂದ ಕಡಿ[5]ಖಂಡವೆಯ್ದಿದ[5]
ಕಡುಗಲಿ ಖಾನಮಲ್ಲುಕರ
ಗಡಣದಿಂ ಕೆಡೆದ ರಾವುತರಿಂದಾ ರಣ
ಪಡೆದುದು ಕಣ್ಗೆ ಕೌತುಕವ ೪೮

ನೆತ್ತಿ[6]ಯೊಡೆದ[6] ಮತ್ತವಾರಣದಿಂ ಕಂ[7]ಧ[7]
ಕತ್ತರಿಸಿದ ವಾಜಿಗಳ
ಮೊತ್ತದಿಂ ರಾಮನಿಱಿದ ಸಮರಾಂಗಣ
ವೆತ್ತ ನೋಡಿ[8]ದೊಡೊ[8]ಪ್ಪುತಿಹುದು ೪೯

ಹೆಣದ ಬಣಬೆಯಿಂದ ಕರುಳ [9]ಕಳಗಳಿಂ[9]ದ
ಕುಣಿವ ಮರುಳು ತಂಡದಿಂದ
[10]ನೆಣದ ಕೋಳ್ಗೆಸರಿಂದ ನೆತ್ತರ ಪೊನಲಿಂದ
ರಣಭೂಮಿ ಕಣ್ಗೆ ಮೆಱೆದುದು[10] ೫೦

---

[1] ಜಿ (ಇ ಎ ಗ) [2] ಪ (ಉ) [3] ರಣದೊಳಗೆ (ಇ ಉ) ಕಣ್ಗಳಿಗೆ (ಎ ಗ) [4] ಳಿದರು ಮಲ್ಲುಕರು (ಅ ಇ ಉ) ನುಳಿದು ಮಲ್ಲುಕರು (ಗ) [5] ದ ಖಂಡೆಯವೆಯ್ದಿ (ಐ) [6] ಒಡೆದ (ಅ ಇ ಉ ಎ ಗ) ಯೊಡೆದು (ಐ) [7] ಡ (ಗ) [8] ದರೊ (ಉ ಐ) [9] ಕಾಳಿಜದಿಂ (ಉ) ಬಳಗದಿಂ (ಎ ಗ) [10] ನರಳ್ವ ರಾವುತರಿಂದುರುಳ್ವಕರಿಗಳಿಂದ ಕರವೆಸೆದುದು ರಣದೊಳಗೆ (ಐ).

†ತೊರಳೆಯ ತೊಱೆ ಕಾ[1]ಳ[1]ಜದ ಕಮ್ಮಡು [2]ಎಲು[2]
ನರವಿನ ನರಸಿ ಶಿರಗಳ
ಗಿರಿ ಮಜ್ಜೆಯ [3]ಮೆದೆ[3] ಮೆಱೆದುದು ಕಲಿಕಾಲ
ನರನಿಱಿದಾಜಿ ರಂಗದೊಳು ೫೧

*ಪೊರಳ್ವ ವಾಜಿಗಳಿಂದ ನರಳ್ವ ರಾವುತ[4]ರಿಂ[4]
[5]ದು[5]ರುಳ್ವ ಕರಿಗಳಿಂದ ಕಣ್ಗೆ
ಕರಮೆಸೆದುದು ರಾಮನಾಥನಿಱಿದ ಧುರ
ಧರೆಯ[6]ನದೇ[6]ನ ಬಣ್ಣಿಪೆನು ೫೨

ರಸರುಧಿರಗಳ ರಸಾಯನ ನರಮಾಂಸ
ದಶನವೆಸೆಯಲೂಟ[7]ವನು[7]
ಒಸೆದುಂಡು ಭೂತಗಣಂಗಳು ಪರಸಿದ
[8]ವ[8]ಸಹಾಯಶೂರ ರಾಮನನು ೫೩

ಮುಱಿದ ಬಲವನೆಲ್ಲವ ಕೂಡಿಕೊಂಡು ಮ
ತ್ತುಱಿಬಿದ ನೇಮಿಮಲ್ಲುಕನು
ತಱಿದನದನು ಕದ[9]ಳೀ[9]ಕಾನನವನು[9]
ಮುಱಿವಂತೆ ಮದ[10]ಗಜ ಮುಳಿದು[10] ೫೪

ಮುಂದೆ ಬಂದವಗಡಿಸುವ ಕ್ಷಾಲವರನು
ಕೊಂದನು ಕೆಲನೆರಡಱೊಳು
ಸಂದು ತಿವಿವ ಸಬಳಿಗರ ಸದೆದು ಬಿಲ್ಲ
ಮಂದಿಯ ತಱಿದೊಟ್ಟಿದನು ೫೫

ಹೊಕ್ಕ ಕುದುರೆಗಳ ಹೊಯ್ದು ಕೆಡಹಿಯುಣ
ಲಿಕ್ಕಿದ ಶಾಕಿನಿಯರಿಗೆ
ಸೊಕ್ಕಿದಾನೆಗಳ ಮ[11]ಡು[11]ಹಿ ರಣದೇವತೆ
ಗಿಕ್ಕಿದ ಬಲಿಯನಾ ರಾಮ ೫೬

1) ಕಾಲವರು
2) ಸಬಳಿಗರು
3) ಬಿಲ್ಲವರು

---

[1] ಳಿ (ಇ ಉ ಎ ಐ) [2] ವಿ (ಇ ಎ ಐ ಗ) ವೆ (ಉ) [3] ಮಲೆ (ಇ) [4] ರಿಂದ (ಗ) [5] ಉ (ಗ) [6] ದನೇ (ಇ) [7] ಗಳನು (ಐ) [8] ರ (ಅ ಇ) [9] ಳಿ ಕಾಂತಾರವ (ಅ ಇ ಉ) ಳಿಯ ಕಾಂತಾರವ (ಎ ಗ) [10] ಕರಿ ಮಸಗಿ (ಅ ಇ ಉ ಎ ಗ) [11] ಡಿ (ಎ). † (ಐ) ಪ್ರತಿಯಲ್ಲಿ ೫೩ ನೆಯ ಪದ್ಯಾನಂತರ ಬರುತ್ತದೆ. * (ಐ) ಪ್ರತಿಯಲ್ಲಿಲ್ಲ.

*[1]ಕು[1]ಱಿಯ ಹಿಂಡಾಗೆ ಕುದುರೆಯ ಮೋಹರ ಬಂ
ದುಱುಬುವ ಕರಿ ಕೋಣನಾಗೆ
ತಱಿದು ಪೂಜಿಸಿದನು ರಣದೇವತೆಯನಾ
ನೆಱೆಗಲಿ ಕಂಪಿಲಾತ್ಮಜನು   ೫೭

ಆಳ ಮೇಲಾಳ ಕೆ[2]ಟ್ಟಿ[2]ಡಲು ರಾಮನ ವಾಜಿ
ಬೀಳುವ ಸುಭಟರೊಪ್ಪಿದರು
ಲೀಲೆಯಿಂ ರಣದೇವತೆಯೊ[3]ಲಿ[3]ದಾಡುವ
ಮ್ಮಾಲೆಯಂತೇನ ಬಣ್ಣಿಪೆನು   ೫೮

ಒದೆದು ಕೊಲ್ವುದು ಕುದುರೆಯನಾನೆಗಳ ಹಿಂಡ
ನೆದೆಗೆಡಿಪುದು ಮೇಲ್ವಾಯ್ದು
ಇದಿರಾದ ಕಾಲುಪಾಯಕರ ಕರ್ಚಿಡುವುದು
ಕದನದೊಳಾ ದಿವ್ಯ[4]ವಾಜಿ[4]   ೫೯

ಸಿಂಗದಂತಾನೆಗಳಿಗೆ ಪುಲಿಯಂತೆ ತು
ರಂಗಗಳಿಗೆ ಮೇಲ್ವಾಯ್ದು
ಪಿಂಗದೆ ಕಂಗೆಡಿಸುವುದರಿಬಲವನ
ಭಂಗರಾಮನ ದಿವ್ಯ[5]ತುರಗ[5]   ೬೦

ನೆತ್ತರನದಿಗಳ ಕಿತ್ತು ದಾಂಟುವುದು
ನ್ಮತ್ತಗ[6]ಜ[6]ಗಳಟ್ಟೆ[7]ಗಳ[7]ನು
ತೊತ್ತಳದುಳಿವುದು ಜೀವದಾನೆಗಳ ಬೆಂ
ಬತ್ತುವುದದು ದೆಸೆದೆಸೆಗೆ   ೬೧

ಜಲ ನೆಲ ಬೆ[8]ಟ್ಟ[8] ಸಮಸ್ಥಳ ಸು[9]ರು[9]ತಾಳ
ಬಲ [10]ಬೆ[10]ಳ್ವಲವಾಗಲಂದು
ಕಲಹಾಂ[11]ಕ[11]ಣದೊಳು ಪರಿದಾಡಿದುದಾ
ಕಲಿ ರಾಮನೇಱಿದ [12]ವಾಜಿ[12]   ೬೨

---

[1] ಕ (ಎ)   [2] ರ್ಚಿ (ಇ ಎ ಐ)   [3] ಲೆ (ಉ)   [4] ತುರಗ (ಎ)   [5] ವಾಜಿ (ಎ ಗ)   [6] ಜಂ (ಎ ಗ)   [7] ಯು (ಎ ಗ)   [8] ಟ್ಟು (ಅ ಇ ಉ ಎ ಗ)   [9] ರಿ (ಉ) ರ (ಎ)   [10] ಬೇ (ಉ) ವೇ (ಐ)   [11] ಗ (ಉ ಎ ಐ)   [12] ತುರಗ (ಐ).
* (ಉ) ಪ್ರತಿಯಲ್ಲಿಲ್ಲ.

ಕಾಲಾಳೆಂದೆಂಬ ಕದ[1]ಳೀ[1]ವನವನು
ಲೀಲೆಯಿಂ ಮುಱಿದೀಡಾಡಿ
ಕಾ[2]ಳ[2]ಗದೊಳು ನಲಿದು [3]ರಾಮನೆಂಬಾ[3]
ಭೀಳ ಮದೋನ್ಮ[4]ದ[4]ದಂತಿ ೬೩

ಕೂರಾನೆಗಳೆಂಬ ಕಾಡಾನೆಗಳ ವಿ
ದಾರಿಸಿ ಬಿಡದೆ ಬೆಂಬತ್ತಿ
ಓರಂತೆ ಪರಿದಾಡಿದುದು ರಾಮನೆಂದೆಂಬ
ವಾರಣ ವೈರಿರಣದೊಳು ೬೪

ತುಱುಗಿದ ತುರಗಗಳೆಂದೆಂಬ ಪಶುಗಳ
ಮುಱಿದಿಕ್ಕಿ ರಣವೆಂದೆಂಬ
ತುಱು[5]ಪಟ್ಟೆ[5]ಯೊಳು ರಾಮನೆಂದೆಂಬ ಪೆರ್ಬುಲಿ
ಬಿಱುವರಿದುದು [6]ಬಿಂಕ ಮಿಗಲು[6] ೬೫

ಸು[7]ರು[7]ತಾಳಬಲವೆಂದೆಂಬ ಕಳ್ತಲೆಯನೊ
ತ್ತರಿಸಿ ರಣಾಂ[8]ಕ[8]ಣವೆಂಬ
ವರ ಗಗನಾಂಗಣದೊಳು ರಾಮನೆಂದೆಂಬ
ತರಣಿ ಬಿಡದೆ ತೊಳಲಿ[9]ದನು[9] ೬೬

ಎಲ್ಲಿ ನೋಡಿ[10]ದೊಡೆ[10] ರಾಮನ ಬೊಬ್ಬೆಯುಬ್ಬರ
[11]ಎ[11]ಲ್ಲ ನೋಡಿ[12]ದೊಡೆ[12] ರಾಮುಗನ
ಬಲ್ಲೆಯ ಲೌಡಿಯಿಂದಳಿದ ಸುಭಟರಲ್ಲ
ದಿಲ್ಲವಾ ರಣಭೂಮಿಯೊಳು ೬೭

ಎತ್ತ ನೋಡಿ[13]ದೊಡೆ[13] ಬಿದ್ದಾನೆ ಕುದುರೆಗಳ
ಮೊತ್ತವಾ ರಣಭೂಮಿಯೊಳು
ಎತ್ತನೋಡಿ[14]ದಡ[14]ತ್ತಿಱಿದಾಡುವಂತಿರ್ದ
ಸತ್ತ ಸುಭಟರೊಪ್ಪಿದರು ೬೮

---

[1] ಳಿಯ (ಎ ಐ) [2] ಳೆ (ಇ ಎ) [3] ದು ರಾಮನೆಂದೆಂಬ (ಉ ಎ ಗ) ದು ರಾಮನೆಂಬೀ (ಐ) [4] ತ್ತ (ಇ ಉ ಎ) [5] ಪಟ್ಟಿ (ಇ ಐ) [6] ಬೀದಿವರಿದು (ಎ ಗ) ಬಿಂಕದಿಂದ (ಐ) [7] ರಿ (ಉ ಎ) [8] ಗ (ಉ ಐ) [9] ದುದು (ಇ ಉ ಐ) [10] ದರೆ (ಅ ಇ ಗ) ದಡೆ (ಉ ಎ) [11] ವೆ (ಇ ಉ ಎ ಗ) [12] ದರೆ (ಅ ಇ ಎ ಗ) ದಡೆ (ಉ) [13] ದರೆ (ಅ ಇ ಎ ಗ) ದಡೆ (ಉ) [14] ದರೆಮ (ಅ ಇ ಉ ಎ ಗ).

ಬಲವನೆಲ್ಲವ ಕೂಡಿಕೊಂಡು ಕಾಟಣ್ಣನು
ಕಲಿರಾಮನಿರ್ದೆಡೆಗೆಯ್ದಿ
ತಲೆದೋಱಿದನು ಮುಱಿದೋಡುವ ತುರುಕರ
ಬಲವ [1]ಬಿಡ[1]ದೆ ಬೆಂಬತ್ತಿದನು ೧೯

ಏನ ಹೇಳುವೆ ಸು[2]ರು[2]ತಾಳನ ಬಲದಭಿ
ಮಾನದ ಹಾನಿ[3]ಯಿರವನು[3]
ಖಾನಖಾನರು [4]ಬೆನ್ನ ಕೊಟ್ಟೋಡಿದ[4]ರು ನೇಮಿ
ಖಾನನ ಬಿಟ್ಟು ರಣದೊಳು ೨೦

ಬಿಟ್ಟ ಸೂಠಿ[5]ಯೊಳಾ ನೇಮಿಯ[5] ಬಲ [6]ಬೆಂ
ಗೊ[6]ಟ್ಟೋಡೆ ರಾಮನ ಭಟರು
[7]ತ[7]ಟ್ಟುಗೆಡಹಿ ರಾವುತರ ಹಿಡಿದರು [8]ಸಾ
ಲಿ[8]ಟ್ಟೋಡುವ ಕುದುರೆಗಳ ೨೧

ಚಲ್ಲಿತು ಕಂಡಕಡೆಗೆ ನೇಮಿಯ ಬಲ
ವೆಲ್ಲ ರಾಮನ ರಾವುತರು
ಅಲ್ಲಿ ಹಿಡಿ[9]ದ[9]ಕುದುರೆಯ ಲೆಕ್ಕಿಸಲಳ
ವಲ್ಲ ಪೌಜಿಮ್ಮಡಿಸಿತ್ತು ೨೨

*ಕುದುರೆಯ ಹಿಡಿದ ರಾವುತರು ತಿರುಗಿದರು
ಕುದುರೆ ಸಿಕ್ಕದ ರಾವುತರು
ಒದ[10]ವಿ[10] ರಾವುತರ ತಿವಿದು ನೂಕಿ ಹಿಡಿದರು
ಕುದುರೆಗಳನು ಬೇಗ[11]ದಲಿ[11] ೨೩

ಆನೆಯ ಹಿಡಿದರೊಂಟೆಯ ಹಿಡಿದರು ಬಲು
ರಾವುತರ ತಿವಿದು [12]ಹಿಡಿದರು[12]
ಏನ ಹೇಳುವೆ ರಾಮನಾಥನ ಬಲದ ಸು
ಮ್ಮಾನದ ಸುಗ್ಗಿಯಿರವನು ೨೪

---

1 ನಿರ (ಐ) 2 ರಿ (ಉ) 3 ಯೊಂದಿರವ (ಉ) 4 ಬೆಂಗೊಟ್ಟೋಡಿದ (ಅ) ಬೆನ್ನಕೊಟ್ಟುರ್ದ (ಇ) 5 ಯಲಾ ರಾಮನ (ಐ) 6 ಕಂಗೆ (ಐ) 7 ಥ (ಇ ಉ ಐ) 8 ಬೆಂಗೊ (ಐ) 9 ದರು (ಅ ಇ ಉ ಎ ಗ) 10 ಗಿ (ಐ) 11 ದಿಂದ (ಐ) 12 ರಣದೊಳು (ಐ). * (ಉ) ಪ್ರತಿಯಲ್ಲಿಲ್ಲ.

* ಬೀಡ ಪೊಗದೆ ಕಣ್ಗೆ[1]ಟ್ಟು[1] ನೇಮಿಯ [2]ಬಲ[2]
[3]ನಾಡೆ[3] ಬೆನ್ನಿತ್ತು ಬೇಗ[4]ದೊಳು[4]
ಓಡಿತು ರಾಮನ ಬಲ ಪಾಳೆಯವ ಸೂಱೆ
ಯಾಡಿ[5]ತ[5]ದೇನ [6]ಬಣ್ಣಿಪೆ[6]ನು ೭೫

ಗುಡಿ ಗೂಡಾರ [7]ಸರಾತಿ[7] ಪೆಟ್ಟಿಗೆ ಲಾಯ
[8]ದೊ[8]ಡಕಿನ ಕುದುರೆ [9]ಕರಿ[9]ಗಳ
ಗಡಣ ಸಿಕ್ಕಿತು ರಾಮನ ಪರಿವಾರದ
ಪಡಗರವನು ಪೇಳ್ವೆನೇನ ೭೬

ಸಿಕ್ಕಿತು ಮುತ್ತಿನ ಗುಡಿ ಸಾಗರದಾನ
ಸಿಕ್ಕಿತು ಸಕಲ ಸನ್ನಾಹ
ಸಿಕ್ಕಿತು ಟೆಂಕೆಯ[10]ದ ಬಡೆಯೊಟ್ಟಿಲು ದೀ[10]ನ
ರೊಕ್ಕಲಾದರುಪೇಳ್ವೆನೇನ† ೭೭

ಸಿಂಗಾಡಿ ತರಕಸ ಕುರುಬಾಣ ಮೊಚ್ಚೆಯ
ಹೊಂಗೆಲಸದ ಜೋಡುಸವಗ
ಕಂಗಲು ವಜ್ರಾಂಗಿ ಕತ್ತಿ ನೇ[11]ಝು[11]ಯಗಳ
ವಂಗಡ ಸಿಕ್ಕಿತೇನೆಂಬೆ ೭೮

ಗಾವುದ ದಾರಿಯ ಮುಱಿಯಲಱಿದು ತುರ
ಗಾವಳಿ ಗಜಘಟೆಗಳನು
ಈ ವೀರರಾಮು ಪಿಡಿದು ಮರಳಿದ ವಾದ್ಯ
ರಾವವಳ್ಳಿಱಿಯೆ ಗಗನವ ೭೯

ಕೊಲ್ಲದ ಕೊಲೆಯ ಕೊಂದಾ ನೇಮಿಯ ದಂಡ
ನೆಲ್ಲವನಾ ವೀರರಾಮ
ಮೆಲ್ಲನೆ ತಿರುಗಿದ ಮುಗಿಲ ಮೋಹಲ್ಲಿ
ಘುಲ್ಲಿಸೆ ವಾದ್ಯನಿನಾದ ೮೦

---

[1] ಟ್ಟ (ಅ) [2] ದಳ (ಇ ಎ ಗ) [3] ನಾಡ (ಅ) ವಾಡ (ಇ ಎ ಗ) ಓಡ (ಐ) [4] ದಲ (ಇ ಎ ಐ ಗ) [5] ದು (ಎ ಗ) [6] ಪೇಳುವ (ಇ ಎ ಐ ಗ) [7] ಸರತಿ (ಉ) ಸಾರಥಿ (ಎ) ಸಾರದಿ (ಗ) [8] ತೊ (ಅ ಉ) [9] ಗಲ (ಐ) [10] ದ ಬಟ್ಟೆಯೊಟ್ಟಿ ಈ ದಿ (ಎ) ಬೀಡೊಟ್ಟಿಲಾದೀ (ಐ) ದ ಬಟ್ಟೆಯೊಟ್ಟಿಲು ದಿ (ಗ) [11] ಜೆ (ಉ) ಕ್ಷೆ (ಎ ಗ). * (ಉ) ಪ್ರತಿಯಲ್ಲಿಲ್ಲ. † (ಐ) ಪ್ರತಿಯಲ್ಲಿ ೭೭, ೮೧, ೭೮, ೮೦, ೭೯ ಈ ಕ್ರಮದಲ್ಲಿವೆ.

[1]ಹಿ[1]ಡಿಯಾಳಾನೆ ಕುದುರೆ ಕೊಟ್ಟಿಗೆ ಭಂಡಿ
ಗುಡಿ ಗೂ[2]ಡಾ[2]ರಗಳ್ವೆರ[3]ಸು[3]
ಸಡಗರದಿಂ ಬಂದಾ ರಾಮ ಭೂಪತಿ
ಯುಡಿದಳಿರ್ಗಳಿಗೆಱಗಿದನು　　೮೧

ಅಡಿ[4]ಗೆಱಗಿದ ನಿಜ[4]ತನುಜನ ತೆಗೆದಪ್ಪ
ಲೊಡನೆ ಕಂಪಿಲ[5]ಗೆ[5] ಕಣ್ಗಳೊಳು
ಕಡೆಗೋಡಿವರಿದುದಾನಂದಾಶ್ರು ಮೆಯ್ಯೊಳು
ಗುಡಿಗಟ್ಟಿದವು ಪುಳಕಗಳು　　೮೨

ಮುಱಿಯಲಿಱಿದು ರಿಪುಬಲ[6]ವ[6] ತನ್ನ[7]ಡಿಗಳಿ[7]
ಗೆಱಗಿದ ನಿಜನಂದನನ
ಕುಱುಹುಗಾಣಾತ ಸುರಪತಿಯು ಸಿರಿಯು ಕೈ
ಸೆಱೆವಿಡಿದನು ಕಂಪನೃಪತಿ　　೮೩

ಬಾದುರಖಾನನಾಶ್ಚರ್ಯಾಂಬುನಿಧಿಯೊಳ
ಗಾ[8]ದ[8]ನು ರಾಮರಣದೊಳು
ಕಾದಿ ನೇಮಿಯ ದಂಡ ಮುಱಿಯಲಿಱಿ[9]ದ[9] ವಿಕ್ರ
ಮೋದಯದುರುವೈಭವ[10]ಕೆ[10]　　೮೪

ಸುರುತಾಳನ ದಂಡ ಮುಱಿಯಲಿಱಿ[11]ಯುಲೀ[11]
ಧರಣಿಯೊ[12]ಳುಂಟೆ[12] ಕುವರಗೆ
ಸುರನರೋರಗರೊಳಗೆಣೆಯಿಲ್ಲವೆಂದು ಬಾ
ದುರಖಾನ ಕೊಂಡಾಡಿದನು　　೮೫

ಅರಸು ಮೋಹರದೊಳು ರಾಮಸಹಿತ ಕಂಪ
ಧರಣೀಶ್ವರ ಗಿರಿಪುರವ
ಸುರರೊಡನಿಂದ್ರ ಜಯಂತವೆರಸು ನಿಜ
ಪುರ[13]ವನೆಯ್ದು[13]ವವೊಲೆಯ್ದಿದನು　　೮೬

---

[1] ಪಿ (ಉ)　[2] ಢಾ (ಇ ಉ ಐ)　[3] ಸಿ (ಐ)　[4] ಗಳಿಗೆಱಗಿದ (ಇ ಎ ಗ)
[5] ನ (ಐ)　[6] ವನು (ಐ)　[7] ಡಿ (ಐ)　[8] ಳ್ದ (ಉ)　[9] ದು (ಅ ಇ ಐ)　[10] ಕ್ಕೆ (ಎ ಗ)
[11] ವರೀ (ಅ ಇ ಉ ಎ ಗ)　[12] ಳಿಲ್ಲ (ಅ ಇ ಉ ಎ ಗ)　[13] ಕೈದು (ಐ).

ಕುಸುಮೋಪಹಾರದ ಕು[1]ಸುಕ[1] ಗುಡಿ ತೋರಣ
ಮಿಸುಪ ಕನ್ನಡಿ ಕಳ[2]ಸ[2]ಗಳ
ಎಸಕದಿಂದಮರಾವತಿಯನಲ್ಲೆನಿಸುವ
ಹೊಸದುರ್ಗವ ಪೊಕ್ಕನರಸ ೮೭

ನಿಂದರಮನೆಯ ಬಾಗಿಲೊಳು ತನ್ನೊಡನೆ
ಯ್ತಂದ ರಾಜಾಧಿರಾಜರನು
ಅಂದು ಕಳುಪಿ ನಂದನಗೂಡಿ ನೃಪ ರಾಜ
ಮಂದಿರವನು [3]ಪೊ[3]ಕ್ಕನೊಸೆದು ೮೮

ಬಂದು ಚೆನ್ನಿಗರಾಮ ಜನನಿಯ ಚರಣಾರ
ವಿಂದಕೆಱಗಲಂದವಳು
ಮಿಂ[4]ದಾ[4]ನಂದಾಶ್ರುಜಲದೊಳು ಪುಳಕದ
ಸಂದ ವಸನವ ಪೊದೆದಳು ೮೯

ಪುಳಕದ ಗುಡಿಗಟ್ಟಿದಳು ಮೆಯ್ಯೊಳಗೆ ಕಣ್ಣ
ಬೆಳಗಿನ ದೀಪವೆತ್ತಿದಳು
ತಳುವದಾನಂದಾಶ್ರುಜಲವ ಪಿಡಿದಳಾ
ನಳಿನ[5]ನಯ[5]ನೆ ನಿಜಸುತಗೆ ೯೦

ಜನನಿಯ ಕಯ್ಯಿಂದ ಕಳುಹಿಸಿಕೊಂಡಾ
ಮನುಜೇಶ್ವ[6]ರ[6]ನಂದನನು
ಅನುನಯದಿಂ ಬಂದು ಪೊಕ್ಕನು ತನ್ನರ
ಮನೆಯನಿಂದ್ರೈಶ್ವರ್ಯದೊಳು ೯೧

ಆರತಿ ಕುಸುಮೋಪಹಾರ ನಿವಾಳಿಯು
ಸೀರೆ ರಕ್ತಾಂಬುಗಳಿಂದ
ವೀರರಾಮನನುಪಚರಿಸಿ ನಾರಿಯರು ಕ
ಣ್ಣಾರೆ ದಣಿ[7]ಯ[7] ನೋಡಿದರು ೯೨

---

[1] ಸುಮ (ಇ) ಸಕ (ಎ) [2] ಶ (ಇ ಉ) [3] ಹೊ (ಇ) [4] ದಳಾ (ಉ ಐ) [5] ವದ (ಅ ಇ ಉ ಎ ಗ) [6] ರನ (ಅ ಉ ಗ) [7] ಯೆ (ಎ ಐ).

ಇರಲಿತ್ತ[1]ಲಂ[1]ತತ್ತ ನೇಮಿ ಮುಱಿದು ಪೋಗಿ
ಸು[2]ರು[2]ತಾಳ[3]ಭೂಮಿಶಾ[3]ಶ್ವರನ
ಹೊರೆಗೆ ಮೆಲ್ಲನೆ ಪೋಗಿ ದೂರದೊಳಗೆ ನಿಂದು
[4]ಶಿ[4]ರವ ಬಾಗಿದನು ಭೀತಿ[5]ಯೊಳು[5]　　೯೩

ಹಿಂದುವ [6]ರಾಯನೊ[6]ಬ್ಬನ ಕಯ್ಯಿಂದೆಮ್ಮ
ಮಂದಿ ಕುದುರೆಯ[7]ನು[7] ಕೊಲಿಸಿ
ಬಂದೆಮ್ಮ ಕಾಣ್ಬುದು ಹಸನಾಯಿತೆಂದವ
ನಂದು ನುಡಿದನು ನೇಮಿಯನು　　೯೪

ನುಡಿಯಲಿಂತೆಂದು ಬಿ[8]ನ್ನವಿ[8]ಸಿದನಾ ನೇಮಿ
ಪೊಡವಿಪತಿಗೆ ದಾನವಗೆ
ಬಿಡಬಾರದು ಪೌಜುಮಾಡಬಾರದು ಬಲು
ಗ[9]ಡಿ[9]ಕುಮ್ಮಟದುರ್ಗವಿಳೆಗೆ　　೯೫

ಗುಗ್ಗುರಿಗಲ್ಗುಂಡುಗಲ್ಲು ಮೊರಡಿ ಬೆ[10]ಟ್ಟ[10]
ನುಗ್ಗುಗ[11]ಲ್ಗು[11]ದುರೆಗಲ್ಲುಗಳ
ಮೊಗ್ಗರದೊ[12]ಳ್ಕಾ[12]ಲಾಡಬಾರದು ಬಲು
ದುರ್ಗವದಿಳೆಗಸುರೇಂದ್ರ　　೯೬

ಎನೆ ಗೋವರ್ಧನ ಚಿತ್ರಕೂಟಗಳಿಂದ
ಘನವೆ ಕುಮ್ಮಟದುರ್ಗವೆನಗೆ
[13]ಜನಪದಸಹಿತ[13] ಕಿ[14]ತ್ತಿಡಿ[14]ಸುವೆನೆನುತರ
ಮನೆಗೆಯ್ದಿದ[15]ನು ಸುರುತಾಳ[15]　　೯೭

ಸುರುತಾಳ ಕೋಪದಿಂದರಮನೆಗೆಯ್ದೆ ಕಾ
ತರಕ್ಕೈಮಿಗೆ ನೇಮಿಖಾನ
ಭರದಿಂದ ನಿಜನಿಳಯವನೆಯ್ದಿದನು ಕಯ್ಯ
ಹರಣದಿಂ ಬೆದಱುತೆದೆಯೊಳು　　೯೮

---

[1] ಲಿಂ (ಐ)　[2] ರಿ (ಉ)　[3] ಭೋಗೀ (ಅ ಇ)　[4] ಸಿ (ಉ)　[5] ಯಲ (ಐ)　[6] ರಾಮನೊ (ಉ ಎ ಗ)　ನೊ (ಇ)　[7] ನೀ (ಉ)　[8] ನ್ನೈತ್ರ (ಉ)　[9] ಡಿಯ (ಎ ಗ)　[10] ಟ್ಟು (ಇ ಉ ಎ ಗ)　[11] ಲ್ಕು (ಐ)　[12] ಳುಕಾ (ಉ ಐ)　[13] ವನ ಸಹಿತದನು (ಅ ಇ ಎ ಐ ಗ)　[14] ತ್ತೀಡಾಡಿ (ಎ ಗ) ತ್ತುತರಿ (ಐ)　[15] ನಸುರೇಂದ್ರ (ಎ ಐ ಗ).

ಇದು ಪರದಾರಸೋದರರಾಮನಾಥನ
ಪದಕೃತಿಯೊಳಗೈದನೆಯ
ವಿದಿತಾಶ್ವಾಸದೊಳ್ನಾಲ್ಕನೆಯದುಸಂಧಿ
ಮೃದುಪದಚಯಸಂಬಂಧಿ ೯೯

ಇದು ಯದುಕುಲಾಮಾತ್ಯ ವಂಶದೊಳಗುದಯಿಸಿದ
ಸದಮಲ ಯಶೋವಿರಾಜಿತ ವಿಜಯನೃಪತನುಜ
ವಿದಿತ ವಿತರಣ ವಿನಯವಿಕ್ರಮ ವಿಭಾಸಿಯೆಂದೆನಿಪ ಮಾಧವನಾಮನ
ಉದರಾಬ್ಧಿಭವಚಂದ್ರನಂಜುಂಡನೊಲಿದೊರೆದ
ಕದನ ಕಲಿಕಾಲ ಕಪಿಕೇತು ಕಲಿ ಶುಚಿ ರಾಮ
ನುದಿತಕೃತಿಬಂಧದೊಳ್ ಮೃದುಪದನ್ಯಾಸದೊಳಗಾಶ್ವಾಸವೈದನೆಯದು
೧೦೦

---

*(ಇ ಉ) ಪ್ರತಿಗಳಲ್ಲಿ ಮಾತ್ರ.

